೪೦ನೇ
ವರ್ಷಕ್ಕೆ
ಪದಾರ್ಪಣೆ

ಸಪ್ಟಂಬರ್ ೧೯೯೫

ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ



ತಲವಾಡಾದ
ಸಿದ್ದಿವಿನಾಯಕ

SRH

ಮದನಕಾಮನ ಕಥೆಗಳು

ನಿಮ್ಮ
ರಾಶಿ
ಮತ್ತು
ವ್ಯಕ್ತಿತ್ವ

ಈ
ಸಂಚಿಕೆಯಿಂದ
ಆರಂಭ

ಬೆಲೆ: ರೂ.೬-೦



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎಸ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಗಣೇಶ
ವರ್ಣಪಾರದರ್ಶಿಕೆ:
ದೇಬ್‌ಜಾನಿ ಬ್ಯಾನರ್ಜಿ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೫೮೦ ೦೨೦.


## ಚಿಂತನ

ನಲವತ್ತನೆ ವರ್ಷ!

ಅನುಭವದಿಂದ ಮಾಗತೊಡಗುವ ವಯಸ್ಸು. ಅನುಭವದಿಂದ ಕಲಿತ ಪಾಠವನ್ನು ಅರುಹಿ, ಅರಿಯಬಯಸುವವರಿಗೆ ಬೆಳಕು ತೋರಿಸಲು ಬದ್ಧಕಂಕಣನಾಗುವ ವಯಸ್ಸು. ಜತೆಗೆ ಹೆಚ್ಚಿದ ಜವಾಬ್ದಾರಿಯಿಂದಾಗಿ ತೂಕ ತಪ್ಪದೆ ಮುಂದೆಜ್ಜೆ ಇಡುತ್ತ, ಅರಿಯದ ದಾರಿಯಲ್ಲಿ ಸಾಗಲು ಸಿದ್ಧನಾಗಬೇಕಾದ ವಯಸ್ಸು.

ಇದೆಲ್ಲ ವ್ಯಕ್ತಿಯೊಬ್ಬನ ವಿಷಯದಲ್ಲಾಯಿತು.

ಆದರೆ ಹುಟ್ಟಿದಾರಭ್ಯವೇ ಮೇಲೆ ಹೇಳಿದ ಎಲ್ಲವನ್ನೂ ಅಳವಡಿಸಿಕೊಂಡು ಹಗಲಗಂಟಾಗಿಸಿ ಹೊತ್ತು ಹೊರಡುವ ಪತ್ರಿಕೆಯೊಂದರ ವಿಷಯದಲ್ಲಿ? ಆದರಲ್ಲೂ, ಹಲವು ಮೂಲಗಳಿಂದ ಜ್ಞಾನತೀರ್ಥವನ್ನು ಹನಿಹನಿಯಾಗಿ ಹಿಡಿದು ತಂದು, ಬೊಗಸೆ ತುಂಬಿಕೊಂಡು, ತೃಷೆಯ ಡಗಿಸಿಕೊಳ್ಳಬಯಸುವ ತನ್ನ ಅಭಿಮಾನಿ ವಾಚಕವರ್ಗವನ್ನು ಪ್ರತಿತಿಂಗಳೂ ತಣಿಸಬೇಕಾದ 'ಕಸ್ತೂರಿ'ಗೆ ತನಗೀಗ ನಲವತ್ತನೆಯ ವರ್ಷ ಎಂಬುದು ಹೆಮ್ಮೆ ಮತ್ತು ಹೆಚ್ಚಿನ ಸಂತಸದ ಸಂಗತಿ. ನಡೆದು ಬಂದ ದಾರಿಯತ್ತ ಒಂದು ಕಣ್ಣು ನೆಟ್ಟು, ನಡೆಯಬೇಕಾದ ದಾರಿಯೆಡೆ ಮತ್ತೊಂದು ಕಣ್ಣೆಟ್ಟಿರುವ 'ಕಸ್ತೂರಿ' 'ಮುಕ್ಕಣ್ಣ'ನಾಗಿ ಆ ಮೂರನೆಯ ಕಣ್ಣಿನಿಂದ ಪ್ರಸ್ತುತ ವಿದ್ಯಮಾನಗಳನ್ನೆಲ್ಲ ಗಮನಿಸುವಂಥ ಪರಿಪಾಠವನ್ನು ಬೆಳೆಸಿಕೊಂಡು ಬಂದಿದೆ. ನೆರೆ ಮನೆಯ ಸಂಗತಿಯಿಂದ ನೆರೆ ಗ್ರಹದ ವಿಷಯದವರೆಗೆ, ದೃಗ್ಗೋಚರವಾದಂಥದರಿಂದ ಹಿಡಿದು ಅಗೋಚರವಾಗಿರುವದರವರೆಗಿನ ಎಲ್ಲವನ್ನೂ ಮೂರನೆಯ ಕಣ್ಣಿನಿಂದಲೇ ನೋಡುತ್ತ ಅದನ್ನು ಓದುಗರಿಗೆ ನೀಡುತ್ತದೆ. ಒಂದು ರೀತಿಯಲ್ಲಿ ಓದುಗನ ಮೂರನೆಯ ಕಣ್ಣಾಗಿ ಕೆಲಸ ಮಾಡುತ್ತದೆ.

ಈ ಮೂರನೆಯ ಕಣ್ಣನ್ನು ತುಂಬ ಜತನದಿಂದ ಕಾಪಾಡಿಕೊಂಡು ಬಂದಿರುವ ನಿಮಗೆಲ್ಲ ಕೃತಜ್ಞತೆ ಅರ್ಪಿಸುವುದು ಕೇವಲ ಔಪಚಾರಿಕವೆನಿಸೀತು. ಆದರೆ ಪ್ರತಿ ತಿಂಗಳೂ ನೀವೆಲ್ಲ ಅಭಿಮಾನದಿಂದ ಅಪ್ಪಿಕೊಳ್ಳುವುದನ್ನು ಕಂಡಾಗಲೆಲ್ಲ ಈ ಮೂರನೆಯ ಕಣ್ಣಲ್ಲಿ ಕೃತಜ್ಞತೆ ಮಿಂಚುತ್ತಿರುತ್ತದೆ.

ಈ ಅನುಬಂಧ ಚಿರಂತನವಾಗಿರಲಿ.

• ವ್ಯವಸ್ಥಾಪಕ ಸಂಪಾದಕ

# ಸಹ ಚಿಂತನ

**ಶೇಷನ್ ಉವಾಚ**

ಎಂ. ದೀಪಾರ 'ಶೇಷನ್ ಉವಾಚ' ಶೇಷನ್‌ರ ಇನ್ನೊಂದು ವ್ಯಕ್ತಿತ್ವದ ಪರಿಚಯ ಮಾಡಿಸಿದೆ. ಕೇವಲ ಈ ದೇಶದ ಚುನಾವಣೆಗಳ ಶುದ್ಧೀಕರಣ ಕಾರ್ಯ ಮಾಡುವುದು ಮಾತ್ರ ಈ 'ಆದಿ' ಶೇಷನ್‌ಗೆ ತಿಳಿದಿರಬೇಕು ಎಂದುಕೊಂಡಿರುವ ನಮಗೆ ಶೇಷನ್ ಪರಮಾಣು ಯೋಜನೆಗಳ ಬಗೆಗೆ ತಿಳಿದುಕೊಂಡಿರುವುದನ್ನು ನೋಡಿದರೆ ಇವರೊಬ್ಬ ಸವ್ಯಸಾಚಿ ಅನ್ನಿಸದಿರುವುದಿಲ್ಲ. ನಮ್ಮ ಸ್ಥಾವರಗಳ ಬಗೆಗೆ ಅವರು ನೀಡಿರುವ ಮಾಹಿತಿಗಳು ಬಹಳ ಅಪರೂಪ ಹಾಗೂ ಅಮೂಲ್ಯವಾದದ್ದು. ಆದರೆ ಮುಖಪುಟದಲ್ಲಿರುವ ಶೇಷನ್ನರ ಚಿತ್ರ ಅವರ ಹೋಲಿಕೆಯಿಂದ ದೂರವಿದೆ ಎನಿಸಿತು.

**ಚಾಮರಾಜನಗರ ಎಸ್. ಲಕ್ಷ್ಮೀನರಸಿಂಹ**

೧೯೯೫ರ ಅಗಸ್ಟ್ ಸಂಚಿಕೆಯಲ್ಲಿನ "ಪರಮಾಣು ಯೋಜನೆಗಳಲ್ಲಿ ಭೀಮ ಗಾತ್ರದ ತಪ್ಪು" ಲೇಖನ ಓದಿ ವಿಷಾದವಾಯಿತು.

ಟಿ.ಎನ್. ಶೇಷನ್ ಅವರು ಸರಕಾರದ ಪರಮಾಣು ಶಕ್ತಿ ಇಲಾಖೆಯ ಕಾರ್ಯದರ್ಶಿಗಳಾಗಿದ್ದಾಗ ಕಂಡುಕೊಂಡ ಈ ಭೀಮಗಾತ್ರದ ತಪ್ಪು ಪರಮಾಣು ಯೋಜನೆಗಳನ್ನು ಹೊಸದೊಂದು ಬೆಳಕಿನಲ್ಲೇ ತೋರಿಸುತ್ತವೆ.

**ಶ್ರೀಕಾಂತರಾವ್ ಹ. ಸರ್ನಾಡ್**

**ಪ್ರಾಮಾಣಿಕ ಹೊಗಳಿಕೆ?**

ವಿದ್ಯಾ ಕೊಡ್ಲೆಕೆರೆಯವರ "ನಿಮ್ಮ ಹೊಗಳಿಕೆ ಎಷ್ಟು ಪ್ರಾಮಾಣಿಕ?" ಎಂಬ ಲೇಖನ ಹೊಗಳಿಕೆಯನ್ನು ಯಾವ ಯಾವ ವಿಧದಲ್ಲಿ ಬಳಸಿಕೊಳ್ಳುವಂತಾಗುತ್ತದೆ ಎನ್ನುವುದನ್ನು ಹಾಗೂ ಹೊಗಳಿಕೆಯಲ್ಲಿರುವ ಹಲವು ಪ್ರಕಾರಗಳನ್ನು ವಿವರವಾಗಿ ತಿಳಿಸಿಕೊಟ್ಟಿದೆ.

**ಮೂರ್ನಾಡು ವಿಷ್ಣುಪ್ರಿಯ**

**ಟೆರಿಫಾಕ್ಸ್**

ಜುಲೈ ತಿಂಗಳ ಕಸ್ತೂರಿ ಸಂಚಿಕೆಯಲ್ಲಿ ಪ್ರಕಟವಾದ ಒಂಟಿಗಾಲಿನ ಓಟಗಾರ ಲೇಖನ ಓದುತ್ತಿದ್ದಂತೆ ಹೃದಯ ತುಂಬಿ ಬಂತು. ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವವನೆ ಕುಲಜ ಎಂಬ ಮಾತಿಗೆ ಟೆರಿಫಾಕ್ಸ್ ತಕ್ಕ ಉದಾಹರಣೆ.

**ಮುದ್ದಾಬಳ್ಳಿ ಭೋಜರಾಜ ಸೊಪ್ಪಿಮಠ**

ಒಂಟಿಗಾಲಿನ ಓಟದ ವೀರ ಟೆರಿಫಾಕ್ಸ್ ನಿಜಕ್ಕೂ ಆದರ್ಶಪ್ರಾಯರಾಗಿದ್ದಾರೆ. ಹಿಡಿದ ಕೆಲಸವನ್ನು ಸಾಧಿಸುವ ಅವರ ಛಲ ಅನುಕರಣೀಯ.

**ಕೃಷ್ಣರಾಜಪೇಟೆ ಬಿ.ಬಿ.ಎಲ್. ಗೌಡಕಿಕ್ಕೇರಿ**

**ಸಿದ್ಧರ ಬೆಟ್ಟ**

ಅಗಸ್ಟ್ ೧೯೯೫ರ ಕಸ್ತೂರಿ ಸಂಚಿಕೆಯಲ್ಲಿ ತೋವಿನಕೆರೆ ಸೀತಾರಾಮಜೋಯಿಸರ ಲೇಖನ "ಸಿದ್ಧರಬೆಟ್ಟ: ಒಂದು ನೆನಪು" ಅತ್ಯುತ್ತಮವಾಗಿ ಮೂಡಿ ಬಂದಿದೆ. ಆದರೆ ನಾನು ಇತ್ತೀಚೆಗಷ್ಟೇ ಸಿದ್ಧರ ಬೆಟ್ಟದಲ್ಲಿ ಓಡಾಡಿಬಂದ ನಂತರ ಈ ಲೇಖನ ಓದಿದ್ದರಿಂದ ಇದೊಂದು ಕಾಗೆ-ಗುಬ್ಬಿ ಕಥೆಯಂತಹ ಸ್ವಾರಸ್ಯಕರ ಕಥೆ ಎನಿಸಿತು. ಸಿದ್ಧರ ಬೆಟ್ಟಕ್ಕೆ ಹೋದ ಎಲ್ಲರಿಗೂ ಅದರ ಅನುಭವವಾಗದಿದ್ದರೇ ಆಶ್ಚರ್ಯ.

ಹಿಂದೊಮ್ಮೆ ಪ್ರಕೃತಿಗೆ ಕಿರೀಟವಿಟ್ಟಂತೆ ರಮಣೀಯ ತಾಣವಾಗಿದ್ದ ಸಿದ್ಧರ ಬೆಟ್ಟ ಇಂದು ನಾಗರಿಕರ ಅನಾಗರಿಕ ಕೃತ್ಯದಿಂದಾಗಿ ಕೊಳೆಗೇರಿಯಾಗುತ್ತಿದೆ. ಪ್ರವಾಸೋದ್ಯಮ ಇಲಾಖೆ ಇದನ್ನು ಪ್ರವಾಸಿ ತಾಣವನ್ನಾಗಿಸುವ ಯತ್ನದಲ್ಲಿ ಕಾಂಕ್ರೀಟ್ ಕಾಡನ್ನಾಗಿ ಬೆಳೆಸಿ, ಪ್ರಕೃತಿ ಸುಂದರ ಪ್ರದೇಶಕ್ಕೆ ಮೆಕ್ಸಿಕನ್ ಹುಲ್ಲು ತರಿಸಿ, ಹುಲ್ಲು ಕೀಳಿಸಲು ನಾಲ್ಕೈದು ಲಕ್ಷ ಖರ್ಚು ಮಾಡಿದೆ. ಗಿಡ-ಮೂಲಿಕೆಗಳನ್ನು ರಕ್ಷಿಸಲು ಮುಳ್ಳೇ ಇಲ್ಲಿ ಬೇಲಿಯನ್ನು

ನಿರ್ಮಿಸಿ ಬೇಲಿಯೇ ಹೊಲವನ್ನೂ ಮೇಯುವಂತೆ ಮಾಡಿದೆ. ಇನ್ನು ಗುಹೆಗಳಲ್ಲಿ ಎಲ್ಲೆಂದರಲ್ಲಿ ಬಿದ್ದಿವೆ ಒಡೆದ ಖಾಲಿ ಬಾಟಲುಗಳು, ಕಾಂಡೊಮ್ ಪ್ಯಾಕೆಟ್ಟುಗಳು, ಇನ್ನಿತರ ನಾಗರಿಕ ವಸ್ತುಗಳು ಅಸಹ್ಯ ಹುಟ್ಟಿಸುತ್ತವೆ. ಹೆಸರಿಗೆ ಪ್ರಕೃತಿ ಚಿಕಿತ್ಸಾಲಯವೊಂದು ಇಲ್ಲಿದೆ.

ಮಾನ್ಯಲೇಖಕರು ಈಗ ಸಿದ್ಧರ ಬೆಟ್ಟವನ್ನು ಸಂದರ್ಶಿಸಿದರೆ ಅವರ ಭಾವುಕತೆ ಕೋಪವಾಗಿ ಹರಿಯುವದರಲ್ಲಿ ಸಂದೇಹವಿಲ್ಲ.

**ಅಕ್ಕಿರಾಂಪುರ ಆರ್.ಎಚ್. ನಟರಾಜ**

ಸಿದ್ಧರ ಬೆಟ್ಟದ ಬಗ್ಗೆ ಬಂದ ಲೇಖನ ಕುತೂಹಲಕಾರಿಯಾಗಿತ್ತು. ಆದರೆ ಈ ಸಿದ್ಧರ ಬೆಟ್ಟ ಎಲ್ಲಿದೆ ಎಂಬುದನ್ನು ಲೇಖಕರು ತಿಳಿಸಿಲ್ಲ. ಪ್ರತಿ ತಿಂಗಳೂ ನಾಡಿನ ಮೂಲೆಯಲ್ಲಿ ಅವಿತಿರುವ ಇಂತಹ ಪ್ರಕೃತಿ ಸೃಷ್ಟಿಗಳ ಪರಿಚಯ ಮಾಡಿಕೊಟ್ಟರೆ ಒಳ್ಳೆಯದು.

**ನೀತಿಗೆರೆ ಗೌರಿಪ್ರಿಯ**

**ಮಗ್ಗಿ ಎಷ್ಟು ಸುಲಭ!**

ಅಗಸ್ಟ್ ೧೯೯೫ರ ಕಸ್ತೂರಿಯನ್ನು ಓದುತ್ತಿದ್ದಾಗ ಜ್ಞಾನನಿಧಿ ವಿದ್ಯಾರ್ಥಿ ಅಂಕಣ ಮಗ್ಗಿ ಎಷ್ಟೊಂದು ಸುಲಭ (ಡಿ. ಮಿಥುನ್ ಚಕ್ರವರ್ತಿ) ಓದಿದೊಡನೆ ತಾಯಿಯಾದ ನನಗೆ ಮಗ್ಗಿ ಕಬ್ಬಿಣದ ಕಡಲೆಯಾದಾಗ ಮಕ್ಕಳಿಗೆ ಹೇಗೆ ಕಲಿಸುವುದು ಎನ್ನುವುದಕ್ಕೆ ಪರಿಹಾರ ಸಿಕ್ಕಿತು. ಆದರೆ ಉದಾಹರಣೆಯ ಮಗ್ಗಿಯ ಸಾಲಿನಲ್ಲಿ ೮ + |೨| ೬= ೯೬ ಇದೆ. ಅದು ನನ್ನ ಅನಿಸಿಕೆಯ ಪ್ರಕಾರ ೮ + |೧| ೬ = ೯೬ ಇರಬೇಕು. ಅಲ್ಲವೇ?

**ನಂದಗಡ ಸುಮಾ ಬಳಮಟ್ಟಿ**

**ಮಿನಿ ಕತೆ, ಮ್ಯಾಕ್ಸಿ ಸಂತೋಷ**

ಮಿನಿ ಕಥೆಗಳೆಲ್ಲಾ ಒಂದಕ್ಕಿಂತ ಒಂದು ಚೆನ್ನಾಗಿದ್ದವು.

**ಹೆಗ್ಗನದೊಡ್ಡಿ ನಿಂಗಣ್ಣ ವಡಿಗೇರಿ**

ಕಸ್ತೂರಿ ಅಗಸ್ಟ್ ೧೯೯೫ನೇ ಸಂಚಿಕೆಯಲ್ಲಿನ ಐದು ಮಿನಿ ಕಥೆಗಳು ಬಹಳ ಹೃದಯ ಸ್ಪರ್ಶಿಯಾಗಿವೆ. ಅದರಲ್ಲಿ ಕೆ. ಶಾಂತಾಮಣಿ'ಯವರ 'ನಿರೀಕ್ಷೆ' ಅಂತೂ ವಾಸ್ತವಿಕ ಬದುಕಿಗೆ ತೀರಾ ಹತ್ತಿರವಾಗಿವೆ. ಒಂದು ಹೆಣ್ಣು ಕಾಮುಕ ಕಣ್ಣುಗಳಿಂದ ತಪ್ಪಿಸಿಕೊಳ್ಳಲು ಕೈಕೊಂಡ ಕಾರ್ಯದ ರೂಪಕವೇ 'ಹೃದ್ರೋಗಿ'ಯಾಗಿದೆ. ಕಿರಿದರಲ್ಲಿ ಪಿರಿದರ್ಥ ನೀಡಬಹುದು ಎನ್ನುವದನ್ನು ಈ ಮಿನಿ ಕಥೆಗಳ ಮೂಲಕ ಲೇಖಕರು ತೋರಿಸಿಕೊಟ್ಟಿದ್ದಾರೆ.

**ಯಡಹಳ್ಳಿ ಶಂಕರ ಮುತ್ತಣ್ಣವರ**

ಅಗಸ್ಟ ೯೫ರ "ಕಸ್ತೂರಿ" ಮಾಸಿಕ ಗಮನಿಸಿದಾಗ ಸಂಚಿಕೆಯ ಲೇಖನಗಳು ಹಾಗೂ ಐದು ಮಿನಿಕತೆಗಳು ಕುತೂಹಲ ಹುಟ್ಟಿಸಿದವು. "ಬೇಂದ್ರೆ ನೆನಪು" ಸ್ಫೂರ್ತಿಯ ಸೆಲೆಯಾದರೆ, ಪುಸ್ತಕ ವಿಭಾಗ ತುಂಬಾ ಮಹತ್ವಪೂರ್ಣ. ಗ್ರಂಥಗಳನ್ನು ಕೊಂಡು ಓದುವಷ್ಟೆ ಸಮಾಧಾನ. ಹನಿಗವನಗಳನ್ನು ಹೆಚ್ಚೆಚ್ಚು ಪ್ರಕಟಿಸಿರಿ. ಪತ್ರಿಕೆಗೆ ಇನ್ನಷ್ಟು ಮೆರಗು ಬರುತ್ತದೆ.

**ಕಮತ್ರ ಹಳ್ಳಿ ಪ್ರೊ. ಶಿವಕುಮಾರ ಕಲ್ಲೂರು.**

ಅಗಸ್ಟ್ ತಿಂಗಳಲ್ಲಿ ಮೂಡಿ ಬಂದ ಐದು ಮಿನಿಕಥೆಗಳೂ ಚೆನ್ನಾಗಿಯೇ ಇದ್ದವು. ವಿಶಾಖ ದತ್ತರವರ 'ಸರ್‌ಪ್ರೈಸ್ ವಿಜಿಟ್' ಈಗಿನ ಮಂತ್ರಿಗಳ ನೈಜ ಚಿತ್ರಣವನ್ನು ಜನರಿಗೆ ತೋರಿಸುವಲ್ಲಿ ಯಶಸ್ವಿಯಾಗಿದೆ. ಯಲ್ಲೂರು ಪ್ರಭು ಮತ್ತು ಕಸ್ತೂರಿಯರ 'ದಾರಿಯಾವುದಯ್ಯ' 'ಹೃದ್ರೋಗಿ' ಎಂಬ ಕಥೆಗಳು ಒಬ್ಬರಿಗಿಂತ ಒಬ್ಬರು ಭಿನ್ನರಾಗಿರುವ ಜನರ ಬಗ್ಗೆ ತಿಳಿಸಿಕೊಟ್ಟವು. ಇನ್ನುಳಿದಂತೆ 'ಆಕೆ' ಬಹು ದೀರ್ಘವಾಯಿತು. 'ನಿರೀಕ್ಷೆ' ಕಥೆ ನೈಜವಾಗಿತ್ತು.

**ಹೊನ್ನಾಳಿ ಕುಂದೂರು ಉಮೇಶಭಟ್ಟ**

**ಲಾಪುಟಾ ದ್ವೀಪದತ್ತ**

ನನ್ನ ಪ್ರೌಢಶಾಲೆಯ ದಿನಗಳಲ್ಲಿ ಓದಿದ 'ಗಲಿವರನ ಪ್ರವಾಸಗಳು' ನೆನಪಿನಂಗಳದಲ್ಲಿ ಇನ್ನೂ ಹಸಿಯಾಗಿರುವಾಗಲೇ 'ಲಾಪುಟಾ ದ್ವೀಪದತ್ತ' ಓದಿದೆ. ಇದು ಕೂಡ ನನ್ನನ್ನು ವಿಸ್ಮಯ ಲೋಕಕ್ಕೆ ಕೊಂಡೊಯ್ದಿತು.

**ಮೋಟೆಬೆನ್ನೂರು ಪ್ರಕಾಶ ಎಸ್. ಮನ್ನಂಗಿ**

**ತಿಗಣೆಗಳ ತಾಣ**

"ಸರ್ಕಾರಿ ಆಸ್ಪತ್ರೆಗಳೋ ತಿಗಣೆಗಳ ತಾಣಗಳೋ" ಲೇಖನ ಸಾಮಯಿಕವಾದದ್ದು. ಸರಕಾರದ

(ಆರನೆ ಪುಟಕ್ಕೆ)

# ಅಂತರಂಗ











## ಮದನಕಾಮನ ಕಥೆಗಳು






('ಭವನ್ಸ್ ಜರ್ನಲ್'ನಿಂದ)

## ಸ್ಥಿರ ಶೀರ್ಷಿಕೆಗಳು



## ಚಿಲಕಿಂಡಿ

ಎಷ್ಟೋ ಜನರಿಗೆ ಕೊನೆಯವರೆಗೆ ಬುದ್ಧಿ ಬರುವುದೇ ಇಲ್ಲ. ಆದ್ದರಿಂದ ತಡವಾಗಿಯಾದರೂ ಬುದ್ಧಿ ಬಂದರೆ, ಅದು ತಡವಾಗಿ ಬಂದಿದೆಯೆಂಬ ಕಾರಣ ದಿಂದ ತಿರಸ್ಕರಿಸಬೇಡಿ.

– ಫೆಲಿಕ್ಸ್ ಫ್ರಾಂಕ್‌ಫರ್ಟರ್

ನಿಮ್ಮ ನಂಬಿಕೆಯೇ ನಿಮ್ಮನ್ನು ರಕ್ಷಿಸುತ್ತದೆ.

– ಏಸುಕ್ರಿಸ್ತ

ಮೈಗೆ ವಯಸ್ಸಾದಂತೆ ಬಾಯಿಗೆ ಮಾತಾಡುವ ಚಪಲವೂ ಹೆಚ್ಚುತ್ತದೆ.

– ತ.ರಾ.ಸು.

ಸರಿಯಾಗಿ ಕೆಲಸವನ್ನು ಪ್ರಾರಂಭಿಸಿದರೆ ಅದನ್ನು ಅರ್ಧ ಮುಗಿಸಿದಂತೆಯೇ.

– ಸೆನೆಕಾ, ರೋಮನ್ ತತ್ವಜ್ಞಾನಿ

ಪೇಪರಿನ ತುಂಬಾ ಬರೀ ಅಪಘಾತಗಳದ್ದೇ ಸುದ್ದಿ– ವಿವಾಹದ ಕಾಲಂ ನೋಡಿ ಬೇಕಾದರೆ.

– ಎಂ.ಆರ್.ಎಸ್.

## ಪುಸ್ತಕ ವಿಭಾಗ



## ಇಸಬೆಲ್ಲಾ

ಮಲಯಾಳಂ ಮೂಲ:
● ಅಯ್‌ಪ್ ಪಾರ್‌ಮೇಲ್
ಕನ್ನಡಕ್ಕೆ:
● ಡಾ. ಅಶೋಕ್ ಕುಮಾರ್

## ಆರೋಗ್ಯದಂಗಳ



## ಆಯುರ್ವೇದ: ಮಧುಮೇಹ ನಿಯಂತ್ರಣ ಹಾಗೂ ಚಿಕಿತ್ಸೆ

● ಡಾ. ಧನ್ಯಕುಮಾರ ಇಜಾರಿ

(ಮೂರನೆ ಪುಟದಿಂದ)

ಆಸ್ಪತ್ರೆಗಳು ಮಾತ್ರವಲ್ಲ ಸರ್ಕಾರಿ ಶಾಲೆಗಳೂ ಸಹ ತಿಗಣೆಗಳ ಆಗರ ಎನ್ನುವುದು ಸುಳ್ಳಲ್ಲ. ೧೦೦ಕ್ಕೆ ೯೫ ಶಾಲೆಗಳು ಈ ಕೂಪಕ್ಕೆ ಸೇರಿವೆ.

ನೀತಿಗೆರೆ — ರಾಗರತಿ ಗೌರಿ

ನಿವೇದಿತಾ ದೇಸಾಯಿಯವರ "ಸರಕಾರಿ ಆಸ್ಪತ್ರೆಗಳೋ ತಿಗಣೆಗಳ ತಾಣಗಳೋ?" ಇಂದಿನ ಆಸ್ಪತ್ರೆಗಳ ಸ್ಥಿತಿಗತಿಯ ಬಗ್ಗೆ ಸ್ಪಷ್ಟ ಚಿತ್ರಣ ನೀಡಿದೆ. ಇನ್ನಾದರೂ ಆಸ್ಪತ್ರೆಗಳ ಸ್ಥಿತಿ ಸುಧಾರಿಸೀತೇ?

ಹಳೇಹಳ್ಳಿ — ಹ.ವ. ಕಿರಣಕುಮಾರ

**ಬಾಡಿಗೆಯವರ ಬಂಧುತ್ವ**

ಜುಲೈ ಸಂಚಿಕೆಯಲ್ಲಿ ಪ್ರಕಟವಾದ ವೈ.ಎನ್. ಗುಂಡೂರಾವ್ ಅವರ ಲೇಖನ 'ಬಾಡಿಗೆಯವರ ಬಂಧುತ್ವ' ಓದಿದ ನಂತರ ಕಟ್ಟಿಸಿದ ಮನೆಯನ್ನು ಬಾಡಿಗೆಗೆ ಕೊಡುವುದೋ ಬೇಡವೋ ಅನ್ನಿಸಿಬಿಟ್ಟಿತು. ಆದರೆ ಕೊನೆಯಲ್ಲಿ ಪರಿಹಾರವೆನ್ನುವಂತೆ ಒಳ್ಳೆಯ ಬಾಡಿಗೆಯವರು ಬಂದಿದ್ದರಿಂದ ಕೊಂಚ ಸಮಾಧಾನವಾಯಿತು.

ದೇವಸಂದ್ರ — ಸುಲೋಚನ

**ಕಬ್ಬನ್ ಅಲ್ಲ, ಹೈದರಾಲಿ ಹೌದು**

ಜುಲೈ ಸಂಚಿಕೆಯಲ್ಲಿ ಬೆಂಗಳೂರಿನಲ್ಲಿರುವ ಲಾಲ್‌ಬಾಗ್ ಅನ್ನು ಸರ್ ಮಾರ್ಕ ಕಬ್ಬನ್ ಸ್ಥಾಪಿಸಿದನೆಂದು ತಿಳಿಸಿದ್ದೀರಿ. ಲಾಲ್‌ಬಾಗ್ ಸ್ಥಾಪಿಸಿದಾತ ಟಿಪ್ಪುವಿನ ತಂದೆ ಹೈದರಾಲಿ. ಇಲ್ಲಿ ಬರೀ ಕೆಂಪು ಗುಲಾಬಿ ಹೂಗಳನ್ನು ಬೆಳೆಯುತ್ತಿದ್ದುದರಿಂದ ಲಾಲ್‌ಬಾಗ್ ಎಂದು ಕರೆಯಲಾಗಿತ್ತು (ಉರ್ದು ಭಾಷೆಯಲ್ಲಿ ಲಾಲ್ ಅಂದರೆ ಕೆಂಪು; ಬಾಗ್ ಎಂದರೆ ತೋಟವೆಂಬ ಅರ್ಥ)

ಬೆಂಗಳೂರು — ಎಂ. ಲಕ್ಷ್ಮಣರಾವ್

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸ್ತಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: ೪೦ ಸಪ್ಟಂಬರ್ ೧೯೯೫ ಸಂಚಿಕೆ: ೧


# ಮುಳುಗಲಿದ್ದವನ ಕಥೆ

ಬಸ್ರಾ ಪಟ್ಟಣದ ಹಸನರು ಹೇಳಿದ್ದು ಇದು:

"ನನ್ನನ್ನು ಒಬ್ಬ ವಿನಯದಿಂದ ಕೂಡಿದ ಮೃದು ಸ್ವಭಾವದ ವ್ಯಕ್ತಿಯೆಂದು ನಾನು ತಿಳಿದುಕೊಂಡಿದ್ದೆ. ಒಂದು ದಿನ ನಾನು ನದಿಯ ದಡದಲ್ಲಿ ಒಬ್ಬ ವ್ಯಕ್ತಿ ಕುಳಿತಿರುವುದನ್ನು ಕಂಡೆ. ಅವನ ಬಳಿ ಒಬ್ಬ ಸ್ತ್ರೀ ಇದ್ದಳು. ಅವರೆದುರು ಒಂದು ಮದ್ಯದ ಪಾತ್ರೆ ಇತ್ತು. ನಾನು ಯೋಚಿಸಿದೆ: ಈ ವ್ಯಕ್ತಿಯನ್ನು ಈಗ ಅವನು ಎಂತಹ ದುಷ್ಟನಿರುವನೋ ಹಾಗೆ ಆಗಲು ಬಿಡದೆ, ನನ್ನಂತಹ ಸತ್ಪುರುಷನನ್ನಾಗಿ ಮಾಡಲು ಸಾಧ್ಯವಾದರೆ, ಎಂದು.

"ಆಗ ನದಿಯಲ್ಲೊಂದು ದೋಣಿ ಮುಳುಗುತ್ತಿರುವುದನ್ನು ನಾನು ಕಂಡೆ. ಸ್ತ್ರೀಯೊಂದಿಗೆ ಕುಳಿತಿದ್ದ ಆ ಮನುಷ್ಯ ಕೂಡಲೇ ಎದ್ದು ನದಿಗೆ ಹಾರಿದ. ಮುಳುಗುತ್ತಿದ್ದ ಏಳು ಜನರ ಪೈಕಿ ಆರು ಜನರನ್ನು ಅವನು ಬದುಕಿಸಿ ದಡ ತಲುಪಿಸಿದ. ನಂತರ ಆತ ನನ್ನ ಬಳಿ ಬಂದು ಹೇಳಿದ, 'ಹಸನ್, ನೀನು ನನಗಿಂತ ಒಳ್ಳೆಯ ಮನುಷ್ಯನಾಗಿದ್ದರೆ ದೇವರ ಹೆಸರಿನಲ್ಲಿ ಹೋಗಿ ಆ ಮುಳುಗುತ್ತಿರುವ ಏಳನೆಯ ಮನುಷ್ಯನನ್ನು ಉಳಿಸು.' ಆದರೆ ನನ್ನಿಂದ ಆ ಏಳನೆಯ ಮನುಷ್ಯನನ್ನು ಉಳಿಸಲಾಗಲಿಲ್ಲ, ಆತ ನದಿಯಲ್ಲಿ ಮುಳುಗಿಯೇ ಬಿಟ್ಟ. ನಾನು ದುಷ್ಟನೆಂದು ಬಗೆದಿದ್ದ ಮನುಷ್ಯ ನನಗೆ ಹೇಳಿದ– 'ಇಲ್ಲಿಯ ಈ ಸ್ತ್ರೀ ನನ್ನ ತಾಯಿ. ಈ ಮದ್ಯದ ಪಾತ್ರೆಯಲ್ಲಿ ಇರುವುದು ನೀರು. ಆದರೆ ನೀನು ನನ್ನನ್ನು ಕಂಡ ಕೂಡಲೇ ಮಾಡಿದ ತೀರ್ಮಾನ ಮಾತ್ರ ಬೇರೆ.'

"ನಾನು ಆತನ ಕಾಲಿಗೆ ಬಿದ್ದು 'ಮುಳುಗಿ ನಾಶವಾಗಲಿದ್ದ ಆರು ಜನರನ್ನು ಉಳಿಸಿದಂತೆ ಅಹಂಕಾರವನ್ನೇ ಸದ್ಗುಣವೆಂದು ಭಾವಿಸಿ ಮುಳುಗುತ್ತಿರುವ ನನ್ನನ್ನು ದಯೆಮಾಡಿ ಉಳಿಸಿರಿ, ಎಂದು ಕೇಳಿದೆ."

• ಮುನಿಯಾಲ ಗಣೇಶ ಶೆಣೈ



# ತಲವಾಡಾದ ಸಿದ್ಧಿವಿನಾಯಕ

• ವಿಶಾಖದತ್ತ

ಭಾರತೀಯ ಸಂಸ್ಕೃತಿಯಲ್ಲಿ ಗಣೇಶನಿಗೆ ವಿಶಿಷ್ಟವಾದ ಸ್ಥಾನವಿದೆ. ಆತ ವಿಘ್ನನಿವಾರಕ, ವೃದ್ಧಿ-ಸಿದ್ಧಿದಾಯಕನಾದ್ದರಿಂದ ಯಾವುದೇ ಕಾರ್ಯಕ್ಕೂ ಮೊದಲು ಗಣೇಶ ಪೂಜೆ ಆಗಲೇ ಬೇಕು. ದೇಶದ ಉದ್ದಗಲಕ್ಕೂ ಅನೇಕ ಗಣಪತಿ ಕ್ಷೇತ್ರಗಳಿವೆ. ಆ ಪೈಕಿ ರಾಜಸ್ಥಾನದ ದಕ್ಷಿಣಾಚಲದಲ್ಲಿ ಗುಜರಾತ ಮತ್ತು ಮಧ್ಯಪ್ರದೇಶಗಳ ಗಡಿಯಲ್ಲಿರುವ ತಲವಾಡಾ ಪುರಾತನ ಕಾಲದಿಂದಲೂ ಧಾರ್ಮಿಕ ಮತ್ತು ಆಧ್ಯಾತ್ಮಿಕ ಕೇಂದ್ರವಾಗಿ ಖ್ಯಾತಿ ಗಳಿಸಿದೆ. ನಿಸರ್ಗರಮಣೀಯವಾದ ಪರಿಸರ, ಪರ್ವತ ಶ್ರೇಣಿಗಳು-ನದಿ ನಾಲೆಗಳು-ಹಸಿರು ಹೊತ್ತು ಹಕ್ಕಿಗಳ ಹಾಡು ಕೇಳಿಸುವ ಮರಗಳಿಂದಾಗಿ ತಲವಾಡಾದ ಸುತ್ತಮುತ್ತಲಿನ ಪ್ರದೇಶ ಮನಸ್ಸಿಗೆ ಮುದ ನೀಡುತ್ತದೆ.



ಇಂಥ ಪ್ರದೇಶಗಳ ಕುರಿತು ಕೆಲವು ಕಥೆಗಳು ಜನಜನಿತವಾಗುವುದೇನೂ ನಮಗೆ ಹೊಸದಲ್ಲ. ಪೌರಾಣಿಕ-ಐತಿಹಾಸಿಕ ವ್ಯಕ್ತಿಗಳೊಂದಿಗೆ ಒಂದೊಂದು ಪ್ರದೇಶಕ್ಕೆ ಸಂಬಂಧ ಕಲ್ಪಿಸಿ, ಅಂಥ ಮಹನೀಯರು ವಾಸಿಸಿದ ಇಲ್ಲವೆ ಸಂಚರಿಸಿದ ಜಾಗದ ನಿವಾಸಿಗಳು ತಾವು ಎಂಬ ಹೆಮ್ಮೆ ಹಾಗೂ ಧನ್ಯತಾಭಾವ ಹೊಂದುವುದು ಭಾರತೀಯರ ಜಾಯಮಾನ. ತಲವಾಡಾಕ್ಕೂ ಇಂಥ ಹತ್ತು ಹಲವು ಕಥೆ-ಉಪಕಥೆಗಳು ಆರೋಪಿಸಲ್ಪಟ್ಟಿವೆ.

ಪಾಂಡವರು ವನವಾಸದ ಮೊದಲ ಅವಧಿಯನ್ನು ಇಲ್ಲಿಯೇ ಕಳೆದರಂತೆ. ಅನೇಕ ತಪಸ್ವಿಗಳೂ ಸಿದ್ಧರೂ ಈ ಶಾಂತ-ಸುಂದರ ತಾಣದಲ್ಲಿ ಧ್ಯಾನಮಗ್ನರಾಗಿ ದೇವತೆಗಳಿಂದ 'ತಥಾಸ್ತು' ಅನ್ನಿಸಿಕೊಂಡು ಲೋಕಕಲ್ಯಾಣ ಕಾರ್ಯಕ್ಕೆ ನಿಂತರಂತೆ. ರಾಜ-ಮಹಾರಾಜರುಗಳು ಇಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಮುಂದಾದರಂತೆ. ಒಂದು ಮಾತಂತೂ ನಿಜ. ತಲವಾಡಾ ಶೈವ, ವೈಷ್ಣವ ಮತ್ತು ಶಾಕ್ತ ಉಪಾಸನಾ ಕೇಂದ್ರವಾಗಿ ಬೆಳೆದುದಲ್ಲದೇ ಗಣೇಶೋಪಾಸನೆಯ ಸ್ಥಾನವಾಗಿಯೂ ಈ ಪ್ರದೇಶ ಪ್ರಖ್ಯಾತವಾಯಿತು.

ಇಲ್ಲಿ ಗಣೇಶ ವಿಗ್ರಹಗಳ ಚಮತ್ಕಾರಿಕ ಸ್ವರೂಪಗಳು ನಿಮಗೆ ನೋಡಸಿಕ್ಕುತ್ತವೆ. ಐತಿಹಾಸಿಕ ಸಂದರ್ಭ ಮತ್ತು ಸಾಂಸ್ಕೃತಿಕ ಪರಿವೇಶಗಳ ವೈವಿಧ್ಯ ಇಲ್ಲಿಯ ಗಣೇಶಾರ್ಚನೆಯ ಪರಂಪರೆಯಲ್ಲಿ ಸ್ಪಷ್ಟಗೋಚರವಾಗುತ್ತದೆ. ವಿನಾಯಕೋಪಾಸನೆಯ ವೈವಿಧ್ಯ ಮತ್ತು ವೈಶಿಷ್ಟ್ಯಗಳು ನಿಮ್ಮನ್ನು ನಿಬ್ಬೆರಗಾಗಿಸುತ್ತವೆ: ನೀವು ಇತಿಹಾಸಪ್ರಿಯರಾಗಿ

ದ್ದರೆ ಚಿಂತನೆಗೂ ತೊಡಗಿಸುತ್ತವೆ. ಶ್ವೇತಾರ್ಕ ಗಣೇಶನೇ ಇರಲಿ ಅಥವಾ ಶಿಲಾಶಾಸನಗಳಲ್ಲಿ ಪಡಿಮೂಡಿಸಿದ ರೇಖಾಗಣೇಶನೆ ಆಗಿರಲಿ, ನಾನಾ ಭಂಗಿಯ-ನಿಲುವಿನ ಗಣೇಶ ವಿಗ್ರಹವೇ ಆಗಲಿ, ಅವುಗಳ ಜತೆಗೊಂದೊಂದು ಉಪಾಖ್ಯಾನವೂ ಜೋಡಿಸಲ್ಪಟ್ಟಿರುತ್ತದೆ. ಶಿಲ್ಪ, ಸ್ಥಾಪತ್ಯ ನೈಪುಣ್ಯ ಮತ್ತು ತಾಂತ್ರಿಕ ಉಪಚಾರಗಳೊಂದಿಗೆ ಗಣೇಶೋಪಾಸನೆ ಭರತವರ್ಷದಾದ್ಯಂತ ಕಂಡುಬರುತ್ತದೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಹೊರಟರೆ ತಲವಾಡಾದ ಘಾಸಲೆಯ ಹಳ್ಳಿಗಾಡುಗಳಲ್ಲಿ, ಬೆಟ್ಟ-ಗುಡ್ಡಗಳಲ್ಲಿ, ನದೀತಟಾಕಗಳಲ್ಲಿ ಮಂಗಲಮೂರ್ತಿಯ ಅಸಂಖ್ಯ ಚಿಕ್ಕ ದೊಡ್ಡ ದೇವಾಲಯಗಳನ್ನು ದರ್ಶಿಸುವುದು ಸಾಧ್ಯ.

ವಾಗಡ ಜಿಲ್ಲೆಯಲ್ಲಿ, ಜಿಲ್ಲಾ ಕೇಂದ್ರದಿಂದ ೧೪ ಕಿಲೋಮೀಟರ್ ದೂರದಲ್ಲಿ ಬಾಸವಾಡಾ-ಅಹಮ್ಮದಾಬಾದ್ ಮಾರ್ಗವಿದೆ. ಅಲ್ಲಿ ಹಾಗೆಯೇ ಮುಂದುವರಿದರೆ ತ್ರಿಪುರಸುಂದರಿ ಮಾರ್ಗ ತಲಪುತ್ತೀರಿ. ಅಲ್ಲಿಯೆ ಸುದೂರದಲ್ಲಿದೆ ಬೇರೆಡೆಯಲ್ಲೂ ಕಾಣಸಿಗದಂಥ, ಐತಿಹಾಸಿಕ ಮಹತ್ವದ ಪುರಾತನ ಸಿದ್ಧಿವಿನಾಯಕ ಮಂದಿರ. ಜನಶ್ರದ್ಧೆಯ ಈ ಮಹಾಧಾಮದಲ್ಲಿ ಅಡಿಯಿರಿಸಿದಾಕ್ಷಣವೇ ಅನಿರ್ವಚನೀಯ ಆನಂದಾನುಭೂತಿ ಉಂಟಾಗುತ್ತದೆ. ಅಭೀಷ್ಟ ಪೂರೈಸಿಕೊಳ್ಳುವ ಸಂಕಲ್ಪದಿಂದ ಇಲ್ಲಿ ಬಂದು ಅರ್ಚನೆ ಮಾಡಿದವರಿಗೆ ಇಚ್ಛಿತ ಕಾರ್ಯಗಳು ಸಿದ್ಧಿಸುತ್ತವೆಂದು ಪ್ರತೀತಿ.

ಗುಜರಾತದ ಸೋಳಂಕಿ ವಂಶದ ದೊರೆ ಕರ್ಣ ಎಂಬವನ ಮಗ ಜಯಸಿಂಹ (ಸಿದ್ಧರಾಜ)ನು ಮಾಳವಾದ ರಾಜಾ ನರವರ್ಮ ಪರಮಾರನನ್ನು ಸೋಲಿಸಿದ ಸವಿನೆನಪಿಗಾಗಿ ಈ ಮಂದಿರ ನಿರ್ಮಾಣಕ್ಕೆ ಮುಂದಾದನೆಂದು ದಾಖಲೆಗಳು ಹೇಳುತ್ತವೆ. ೧೧೭೭ರಲ್ಲಿ ವಿಕ್ರಮ ಸಂವತ್ಸರದ ವೈಶಾಖಶುದ್ಧ ತೃತೀಯಾದಂದು, ಅಂದರೆ ಸೋಮವಾರ ೧೧೧೯ ಎಪ್ರಿಲ್ ಐದರಂದು ಇಲ್ಲಿ ಸಿದ್ಧಿವಿನಾಯಕನ ವಿಗ್ರಹವನ್ನು ಪ್ರತಿಷ್ಠಾಪಿಸಲಾಯಿತೆಂದು ಕೂಡ ದಾಖಲೆಗಳು ತಿಳಿಸುತ್ತವೆ.

ತದನಂತರದ ಈ ಒಂಭತ್ತು ಶತಮಾನಗಳ ಅವಧಿಯಲ್ಲಿ ಈ ದೇವಾಲಯ ಅನೇಕ ಬಾರಿ ಜೀರ್ಣೋದ್ಧಾರಗೊಂಡಿದೆ. ತೀರ ಇತ್ತೀಚೆಗೆಂದರೆ



೧೯೭೫ರಲ್ಲಿ ಈ ಮಂದಿರದ ದುರಸ್ತಿ ಕಾರ್ಯ ನಡೆಯಿತು. ಆಗ ಗರ್ಭಗೃಹದಲ್ಲಿ ಅಮೃತಶಿಲೆಯ ಪೆಳಿಕೆ (tiles)ಗಳನ್ನು ನೆಲಕ್ಕೂ ಗೋಡೆಗೂ ಅಳವಡಿಸಲಾಯಿತು.

ಇಲ್ಲಿಯ ಸಿದ್ಧಿ ವಿನಾಯಕನ ವಿಗ್ರಹ ಆರು ಅಡಿ ಎತ್ತರದ್ದು. ಆಕರ್ಷಕವಾದ, ಅಸಾಧಾರಣ ಶಿಲ್ಪಚಾತುರ್ಯದ ಈ ಮೂರ್ತಿಯನ್ನು ನಿರ್ಮಿಸಿದ ಸ್ಥಪತಿ ಇದನ್ನೊಂದು ಅದ್ವಿತೀಯ ಕಲಾಕೃತಿಯನ್ನಾಗಿ ಕಡೆದು ನಿಲ್ಲಿಸಿದ್ದಾನೆ. ಪೂರ್ವಾಭಿಮುಖವಾಗಿರುವ ಈ ಪ್ರತಿಮೆ ಅಪರೂಪದ್ದೆನಿಸಲು ಇನ್ನೂ ಒಂದು ಕಾರಣವಿದೆ. ಅದೆಂದರೆ ಈ ಗಣೇಶನ ಸೊಂಡಿಲು ಬಲಗಡೆ ತಿರುಗಿಕೊಂಡಿರುವುದು. ನೃತ್ಯಭಂಗಿಯ ಈ ಚತುರ್ಭುಜ ಗಣೇಶ ಸ್ಮಿತವದನ. ದೊಡ್ಡವಾದ ಸೊಂಡಿಲು ಮತ್ತು ಕಿವಿಗಳು. ನಾಲ್ಕು ಕೈಗಳಲ್ಲಿ ಅನುಕ್ರಮವಾಗಿ ಪಾಶ, ಅಂಕುಶ, ಪರಶು ಮತ್ತು ಮೋದಕಗಳಿವೆ.



ಪ್ರತಿಮೆಯ ಸಮೀಪವೇ ಜೋಡಿ ನಂದಾದೀಪ. ಗರ್ಭಗೃಹದ ಶಾಂತ-ಪವಿತ್ರ ವಾತಾವರಣವನ್ನು ಈ ದೀಪದ್ವಯ ಇನ್ನಷ್ಟು ಪ್ರಶಾಂತವನ್ನಾಗಿಸುತ್ತವೆ. ಮಂದಿರದ್ವಾರದ ಎಡಬಲಗಳಲ್ಲಿ ದ್ವಾರಪಾಲಕ ಮತ್ತು ಕೀರ್ತಿಮುಖ ಉತ್ಕೀರ್ಣರಿದ್ದಾರೆ. ದೇವಾಲಯದ ಆವರಣದಲ್ಲಿ ಇನ್ನೊಂದು ಪ್ರಾಚೀನ ಗಣೇಶ ಮೂರ್ತಿಯಿದೆ: ಮೂರಡಿ ಎತ್ತರದ್ದು. ಕೋಟೆಯಂತೆ ಕಾಣುವ ಕಟ್ಟಡವುಳ್ಳ ಈ ಮಂದಿರದ ಅಂಗಳದಲ್ಲಿ ಷೋಡಶಕೋಣದ, ನಾಲ್ಕು ಬಾಗಿಲುಳ್ಳ ಯಜ್ಞಮಂಟಪ ಕಾಣುತ್ತದೆ. ಯಜ್ಞಪುರುಷ ಹಾಗೂ ಅಧಿಷ್ಠಾತು ದೈವಗಳಿಗಾಗಿ ಪ್ರತ್ಯೇಕ ಆಸನಗಳಲ್ಲಿ ನಿರ್ಮಿಸಲ್ಪಟ್ಟಿವೆ.

## ಅನುಷ್ಠಾನದ ಕೇಂದ್ರ

ನಿತ್ಯ ಇಲ್ಲಿ ಆಗಮಿಸಿ ಅರ್ಚನೆಗೈಯುವವರ ಸಂಖ್ಯೆ ಅಪಾರ. ಅದರಲ್ಲೂ ಪ್ರತಿ ಬುಧವಾರ ಮತ್ತು ವಿನಾಯಕ ಚತುರ್ಥಿ (ಸಂಕಷ್ಟಿ) ಹಾಗೂ ಇನ್ನಿತರ ಪುಣ್ಯದಿನಗಳಂದು ಅಲ್ಲಿ ಜಾತ್ರೆಯೋಪಾದಿಯಲ್ಲಿ ಜನ ಸೇರುತ್ತಾರೆ. ಇಂಥ ಸಂದರ್ಭಗಳಲ್ಲಿ ಗಣೇಶ ವಿಗ್ರಹವನ್ನು ಬೆಳ್ಳಿಯ ಮುಖವಟೆಯಿಂದ ಅಲಂಕರಿಸಲಾಗುತ್ತದೆ. ಬುಧವಾರಗಳಂದು ನಡೆಯುವ ವಿವಿಧೋಪಚಾರ ಪೂಜೆ ಕಣ್ಣಿಗೆ ಹಬ್ಬ. ಗಣೇಶ ಸ್ತೋತ್ರ ಮತ್ತು ಗಣೇಶ ಅಥರ್ವಶೀರ್ಷದ ಮಂತ್ರೋಚ್ಚಾರಣೆಗಳಿಂದ ಇಡೀ ವಾತಾವರಣ ಪ್ರತಿಧ್ವನಿತವಾಗಿರುತ್ತದೆ.

ಭಕ್ತಿಯಿಂದ ಇಲ್ಲಿ ಬೇಡಿಕೊಂಡವರಿಗೆ ಹಲವು ರೀತಿಯ ಮನೋಕಾಮನೆಗಳು ಸಿದ್ಧಿಸುತ್ತವೆಂದು ಜನರ ನಂಬಿಕೆ. ಕಳುವಾದ ವಸ್ತುಗಳು ಸಿಗುವುದು, ಅವಿವಾಹಿತರಿಗೆ ವಿವಾಹಯೋಗ, ಮಾನಸಿಕ-ದೈಹಿಕ ಪೀಡೆಗಳು ದೂರಾಗುವುದೇ ಮುಂತಾಗಿ ಅನೇಕ ಅನುಗ್ರಹಗಳನ್ನು ಈ ಸಿದ್ಧಿವಿನಾಯಕ ದಯಪಾಲಿಸುತ್ತಾನೆಂಬುದು ಹಲವರ ಅನುಭವ. ಇಷ್ಟಾರ್ಥಗಳು ಪೂರೈಸಿದ ಮೇಲೆ ವಿನಾಯಕನಿಗೆ ಅಸಲಿ ತುಪ್ಪದ ದೀಪ ಹಚ್ಚಿಟ್ಟು ನೈವೇದ್ಯಗಳನ್ನು ಅರ್ಪಿಸುವವರು - ಸಾಲುಗಟ್ಟಿರುತ್ತಾರೆ. ಗಣೇಶ ಚತುರ್ಥಿಯಂದು ಸಾವಿರ ಉಂಡೆಗಳ ನೈವೇದ್ಯ ಸಲ್ಲಿಸುವುದಕ್ಕಾಗಿ ಆಸ್ತಿಕರು ತಿಂಗಳಷ್ಟು ಮೊದಲೇ ಹೆಸರು ನೋಂದಾಯಿಸುವುದುಂಟು.

'ಆಮಲಿಯಾ ತಾಲಾಬ್' ಎಂಬ ಪುಷ್ಕರಿಣಿ ಇಲ್ಲಿರುವುದರಿಂದ ಈ ಸಿದ್ಧಿವಿನಾಯಕನನ್ನು ಭಕ್ತರು 'ಆಮಲಿಯಾ ದಾದಾ' ಎಂದೂ ಕರೆಯುತ್ತಾರೆ. ಪುಷ್ಕರಿಣಿಯ ಸುತ್ತಮುತ್ತ ನೆಲ್ಲಿಯ ಗಿಡಗಳು ಇರುವುದೇ ಇದಕ್ಕೆ ಕಾರಣ.

ಕ್ಯಾಲೆಂಡರುಗಳ ಮೂಲಕ, ವರ್ಣಛಾಯೊ ಚಿತ್ರಗಳ ಮೂಲಕ ದೂರದೂರದ ಭಕ್ತರ ಮನೆ-ಮನಗಳಲ್ಲಿ ನೆಲೆಸಿರುವ ಈ ಸಿದ್ಧಿ ವಿನಾಯಕನನ್ನು ವರ್ಷದುದ್ದಕ್ಕೂ ಅಲ್ಲಲ್ಲೇ ಪೂಜಿಸುವಂಥವರು ತಲವಾಡಾಕ್ಕೊಮ್ಮೆ ಯಾತ್ರೆ ಹೊರಡಲು ಕಾತರಿಸುತ್ತಾರೆ. ಅಂಥ ಅವಕಾಶ ಸಿಕ್ಕು ಗಣೇಶ ದರ್ಶನ-ಅರ್ಚನಾದಿಗಳಿಂದ ತೃಪ್ತರಾಗುತ್ತಾರಾದರೂ "ಮತ್ತೆ ಬೇಗ ಕರೆಸಿಕೋ ಮಹಾರಾಯಾ" ಎಂದು ಮನಸ್ಸಿ ಬೇಡಿಕೊಳ್ಳುತ್ತಾರೆ. ●

# ಗುಲಾಬಿಗಳ ರೋಚಕ ಲೋಕ

• ರೋಹಿದಾಸ ಎನ್. ಶೇಟ್
ಚಿತ್ರಗಳು: ಎಂ.ಜಿನರಾಜ ಹೆಗ್ಡೆ

ಹೂಗಳ ರಾಣಿಯೆಂದೇ ಗುಲಾಬಿ ಪ್ರಖ್ಯಾತ. ಹೀಗೆ ಹೂಗಳ ರಾಣಿಯೆನಿಸಿರುವ ಗುಲಾಬಿಯ ಇತಿಹಾಸ ಬಲು ರೋಚಕವಾಗಿದೆ. ಡಾ. ಅಮಿತಾಭ್ ಮುಖ್ಯೋಪಾಧ್ಯಾಯರು ತಮ್ಮ ಪುಸ್ತಕದಲ್ಲಿ ಆರು ಕೋಟಿ ವರ್ಷಗಳಷ್ಟು ಹಿಂದೆಯೇ ಗುಲಾಬಿ ಸೃಷ್ಟಿಗೊಂಡಿತೆಂದು ಹೇಳಿದ್ದಾರೆ. ಅಮೇರಿಕದ ಕೊಲರಾಡೊ ಪ್ರಾಂತದಲ್ಲಿ ದೊರೆತಿರುವ ಗುಲಾಬಿದಳದ ಪಳೆಯುಳಿಕೆಯೊಂದು ನಾಲ್ಕು ಕೋಟಿ ವರುಷಗಳಷ್ಟು ಹಳೆಯದೆಂದು ತಿಳಿದು ಬಂದಿದೆ. ಇಂಥ ಪ್ರಾಚೀನ ಪಳೆಯುಳಿಕೆಗಳು ಜಪಾನ್, ಫ್ರಾನ್ಸ್, ಬಲ್ಗೇರಿಯಾ ಮುಂತಾದ ರಾಷ್ಟ್ರಗಳಲ್ಲಿಯೂ ದೊರೆತಿವೆ.

ಪ್ರಾಚೀನ ಭಾರತೀಯ, ರೋಮನ್ ಮತ್ತು ಗ್ರೀಕ್ ಸಮಾಜಗಳಲ್ಲಿ ಈ ಗುಲಾಬಿ ಅತ್ಯಂತ ಜನಪ್ರಿಯವಾಗಿತ್ತೆಂಬುದಕ್ಕೆ ಆ ಕಾಲದ ಶಿಲ್ಪ ಕಲಾಕೃತಿಗಳು ಮತ್ತು ಸಾಹಿತ್ಯ ಕೃತಿಗಳೇ ಸಾಕ್ಷಿ. ಕೆಲವು ಸಸ್ಯಶಾಸ್ತ್ರಜ್ಞರ ಪ್ರಕಾರ ಎಲ್ಲಕ್ಕಿಂತ ಮೊದಲು ಉದ್ಯಾನಗಳಲ್ಲಿ ಗುಲಾಬಿಯನ್ನು ಬೆಳೆಸಿದವರು ಗ್ರೀಕರು. ಪ್ರಾಚೀನ ಗ್ರೀಕ್ ಕವಯಿತ್ರಿ ಸ್ಯಾಪ್ಪೋ ಮೊಟ್ಟಮೊದಲು ಗುಲಾಬಿಯನ್ನು "ಹೂಗಳ ರಾಣಿ" ಎಂದು ಕರೆದಳು. ಗ್ರೀಕ್ ಮತ್ತು ರೋಮನ್ ಪುರಾಣ ಕಥೆಗಳಲ್ಲಿ ಗುಲಾಬಿಯನ್ನು ಕುರಿತು ಅನೇಕ ರೋಚಕ ಕಥೆಗಳಿವೆ. ಕ್ರಿ.ಪೂ. ೫ನೇ ಶತಮಾನದ ಮೊದಲ ಇತಿಹಾಸಕಾರನೆನಿಸಿದ ಹೀರೋಡೋಟಸ್ ಕ್ರಿ.ಪೂ ೭ನೇ ಶತಮಾನದಲ್ಲಿದ್ದ ಏಷ್ಯಾ ಮೈನರ್‌ನ ದೊರೆ ಮಿಡಾಸ್‌ನು ಮೆಸಿಡೋನಿಯಾ ಪ್ರಾಂತವನ್ನು ಸಂದರ್ಶಿಸಿದಾಗ ಗುಲಾಬಿ ಹೂಗಳನ್ನು ಕಂಡು ಆಕರ್ಷಿತನಾಗಿ ಅವುಗಳನ್ನು ತನ್ನ ಪ್ರಾಂತದಲ್ಲಿ ಬೆಳೆಸಿದನೆನ್ನುವುದನ್ನು ಉಲ್ಲೇಖಿಸಿದ್ದಾನೆ.

ಈಜಿಪ್ತಿನ ರಾಣಿ ಕ್ಲಿಯೋಪಾತ್ರಳ ಕಾಲದಲ್ಲಿ ನೈಲ್ ನದಿಯ ದಡದುದ್ದಕ್ಕೂ ಬಗೆ ಬಗೆಯ ಗುಲಾಬಿಗಳನ್ನು ಬೆಳೆಸುತ್ತಿದ್ದುದಾಗಿ ಉಲ್ಲೇಖವಿದೆ. ವಿಶ್ವವಿಖ್ಯಾತ ಗ್ರೀಕ್ ದೊರೆ ಅಲೆಕ್ಸಾಂಡರ್‌ನ ಕಾಲದಲ್ಲಿಯೇ ಈಜಿಪ್ತಿನಲ್ಲಿ ಗುಲಾಬಿ ಅತ್ಯಂತ ಜನಪ್ರಿಯ ಹಾಗೂ ಪ್ರತಿಷ್ಠೆಯ ಹೂವಾಗಿತ್ತು.

ಭಾರತದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಈ ಹೂವಿನ ಬಳಕೆಯಿದೆ. ವೇದಗಳ ಕಾಲದಲ್ಲಿಯೇ ಗುಲಾಬಿಯ ತೈಲದ ತಯಾರಿಕೆಯ ವಿವರಣೆ ದೊರೆಯುತ್ತದೆ. ಸಂಸ್ಕೃತದಲ್ಲಿ ಗುಲಾಬಿಯನ್ನು "ತರುಣಿಪುಷ್ಪ", "ಅತಿಮಂಜುಲ," "ಸೇಮಂತಿಕ" ಮುಂತಾಗಿ ಕರೆಯಲಾಗಿದೆ. ಮೊಗಲರ ಕಾಲದಲ್ಲಿ ಗುಲಾಬಿಯ ಜನಪ್ರಿಯತೆ ಉತ್ತುಂಗಕ್ಕೇರಿತ್ತು. ಗ್ರೀಕ್-ರೋಮನ್ನರ ಪುರಾಣಗಳ ಪ್ರಕಾರ ಪ್ರೇಮ-ಸೌಂದರ್ಯಗಳ ಮೆಚ್ಚಿನ ಹೂ ಇದಾಗಿದೆ.

ಪುರಾತನ ಕಾಲದಿಂದ ಜಗತ್ತಿನೆಲ್ಲೆಡೆ ಅಕ್ಕಸಾಲಿಗರು ಚಿನ್ನಾಭರಣಗಳಲ್ಲಿ, ಶಿಲ್ಪಿಗಳು ಕಲ್ಲಿನಲ್ಲಿ, ಮರಗಳ ಕಲಾವಿದರು ಕಾಷ್ಠ ಕಲಾಕೃತಿಗಳಲ್ಲಿ ಗುಲಾಬಿ ಹೂ ಮತ್ತು ಎಲೆಗಳಿಗೆ ಕಲಾತ್ಮಕತೆಯ ಮೆರುಗನ್ನು ನೀಡಿದ್ದಾರೆ. ಗುಲಾಬಿಯಲ್ಲಿ ಪೊದೆ

ಸಸ್ಯ ಹಾಗೂ ಬಳ್ಳಿ ಸಸ್ಯ ಎಂದು ಎರಡು ವಿಧ.

ಪೊದೆ ಸಸ್ಯ: ನಾವು ಸಾಮಾನ್ಯವಾಗಿ ಉದ್ಯಾನವನ ಹಾಗೂ ಇನ್ನಿತರ ಸ್ಥಳಗಳಲ್ಲಿ ಕಾಣುವ ಗುಲಾಬಿ ಸಸ್ಯಗಳು ಪೊದೆ ಸಸ್ಯಗಳು. ೧೯ನೇ ಶತಮಾನದಿಂದೀಚೆಗೆ ಈ ಪೊದೆ ಸಸ್ಯಗಳಲ್ಲಿ ಕಸಿ ಮಾಡಿ ಹಲವಾರು ಬಣ್ಣ ಹಾಗೂ ವಿವಿಧ ವಿನ್ಯಾಸಗಳ ಗುಲಾಬಿ ತಳಿಗಳನ್ನು ಕಂಡುಹಿಡಿಯಲಾಗಿದೆ. ಈ ದಿಶೆಯಲ್ಲಿ ಅಮೇರಿಕಾ ಮತ್ತು ಯುರೋಪಿನ ದೇಶಗಳು ಹೆಚ್ಚು ಮುಂದುವರಿದಿವೆ.

ಬಳ್ಳಿ ಸಸ್ಯ: ಬಳ್ಳಿ ಗುಲಾಬಿಗಳನ್ನು "ರೋಸಾ ಮಲ್ಟಿಫ್ಲೋರಾ" ಮತ್ತು ರೋಸಾ ವಿಚೂರೈಯಾನಾ ಎಂಬ ಎರಡು ಪ್ರಭೇದಗಳಿಂದ ಪಡೆಯಲಾಗಿದೆ. ಇವುಗಳಲ್ಲಿ ಅನೇಕ ವಿಧಗಳಿದ್ದು ಸಾಮಾನ್ಯವಾಗಿ ಬಿಳಿ ಅಥವಾ ಹಳದಿ ಬಣ್ಣದ ಹೂಗಳು ಗೊಂಚಲುಗಳಾಗಿ ಬಿಡುತ್ತವೆ. ಬಳ್ಳಿಯ ತುಂಬ ಗೊಂಚಲು ಗುಲಾಬಿಗಳು ತುಂಬಿಕೊಂಡಾಗ ನೋಡುವವರ ಮನಸ್ಸು ರೋಚಕಗೊಳ್ಳುವುದು.

ಗುಲಾಬಿಗಳನ್ನು ಸಾಮಾನ್ಯವಾಗಿ ಕಾಡು ಪ್ರಭೇದ ಹಾಗೂ ಸುಧಾರಿತ ಪ್ರಭೇದ ಎಂದು ಎರಡು ಪ್ರಭೇದಗಳಲ್ಲಿ ವಿಂಗಡಿಸುತ್ತಾರೆ.

ಕಾಡು ಪ್ರಬೇಧಗಳು-- ರೆಹಡೆರ್ ಎಂಬ ಸಸ್ಯವಿಜ್ಞಾನಿಯ ಪ್ರಕಾರ ಈ ವರ್ಗದಲ್ಲಿ ಸುಮಾರು ೧೨೦ ಜಾತಿಯ ಗುಲಾಬಿಗಳಿವೆ. ಭಾರತದಲ್ಲಿ ಬೆಳೆಯುವ ಹೆಚ್ಚಿನ ಪೊದೆ ಸಸ್ಯಗಳು ಹಾಗೂ ಕೆಲವೊಂದು ಬಳ್ಳಿ ಸಸ್ಯಗಳು ಈ ವರ್ಗದಲ್ಲಿ ಬರುತ್ತವೆ. ನಮ್ಮ ದೇಶದಲ್ಲಿ ಬೆಳೆಯುವ ಈ ಬಗೆಯ ಗುಲಾಬಿಗಳಲ್ಲಿ ಹನ್ನೊಂದು ಜಾತಿಗಳಿವೆ. ಶೀತ ಮತ್ತು ಸಮಶೀತೋಷ್ಣವಲಯದಲ್ಲಿ ಬೆಳೆಯುವ ಈ ವರ್ಗದ ಗುಲಾಬಿಗಳು ನ್ಯೂಮೆಕ್ಸಿಕೋದಿಂದ ಉತ್ತರ ಅಮೇರಿಕಾ, ಆಫ್ರಿಕಾ, ಹಿಮಾಲಯದ ತಪ್ಪಲು ಚೀನಾ, ಜಪಾನ್‌ಗಳಿಗೆ



ವ್ಯಾಪಿಸಿಕೊಂಡಿದೆ.

ಸುಧಾರಿತ ಪ್ರಭೇದ-- ಗುಲಾಬಿಯ ಇತರ ಪ್ರಭೇದಗಳೊಡನೆ ಸಂಕರಗೊಳಿಸಲ್ಪಟ್ಟು ಉಂಟಾದ "ಟೀ ರೋಸಸ್" ಮತ್ತು ಹೈಬ್ರಿಡ್ ಪರ್ಪೆಟ್ಯುಯಲ್ಸ್ ಎಂಬ ಎರಡು ಬಗೆಯ ಗುಲಾಬಿಗಳು ಅನೇಕ ವರುಷಗಳವರೆಗೆ ಜನಪ್ರಿಯವಾಗಿದ್ದವು. ಕ್ರಿ.ಶ. ೧೮೬೭ರಲ್ಲಿ ಫ್ರಾನ್ಸಿನ ಗಿಲೋ ಎಂಬಾತ ಈ ಎರಡು ಪಂಗಡಗಳ ಅಪೇಕ್ಷಿತ ಲಕ್ಷಣಗಳನ್ನು ಸಂಕರಗೊಳಿಸುವ ಮೂಲಕ "ಹೈಬ್ರಿಡ್ ಟೀ" ಎಂಬ ಹೆಸರಾಂತ ಜಾತಿಯ ಗುಲಾಬಿಗೆ ಕಾರಣನಾದ. ಇಂದು ಈ "ಹೈಬ್ರಿಡ್ ಟೀ" ಜಗತ್ತಿನಾದ್ಯಂತ ಜನಪ್ರಿಯವಾಗಿದೆ. ವಿವಿಧ ಜಾತಿಯ ಗುಲಾಬಿಗಳ ಪೈಕಿ ಅಚ್ಚು ಬಿಳಿ, ತಿಳಿ ಹಳದಿ, ಕಡು ಹಳದಿ, ತಿಳಿಗೆಂಪು, ಅಚ್ಚು ಕೆಂಪು ಗುಲಾಬಿ ಹೀಗೆ ವಿವಿಧ ಬಣ್ಣಗಳ ಗುಲಾಬಿಗಳು ಪ್ರಚಾರದಲ್ಲಿ ಬಂದಿದ್ದು ಇತ್ತೀಚೆಗೆ ಕಪ್ಪು ಬಣ್ಣದ ಗುಲಾಬಿಯನ್ನೂ ಅಭಿವೃದ್ಧಿಪಡಿಸಲಾಗಿದೆ.

ಉಪಯೋಗಗಳು: ಗುಲಾಬಿ ಕೇವಲ ಅಲಂಕಾರದ ಹೂವಾಗಿರದೆ ಹಣಗಳಿಕೆಯಲ್ಲಿ ಹಾಗೂ ಖಾದ್ಯ ವಸ್ತುಗಳ ತಯಾರಿಕೆಯಲ್ಲಿಯೂ ಅತ್ಯಂತ ಉಪಯುಕ್ತವಾದ ಹೂವಾಗಿದೆ. ಗುಲಾಬಿಯಿಂದ ಪನ್ನೀರು, ಅತ್ತರು, ಕೇಶತೈಲಗಳನ್ನು ತಯಾರಿಸುತ್ತಾರೆ. ಮೊಗಲರ ಕಾಲದಲ್ಲಿ ಉತ್ತರ ಪ್ರದೇಶದ ಕನೋಜ್, ಜಾನ್‌ಪುರ, ಗಾಜಿಪುರಗಳು ಗುಲಾಬಿಯ ತೈಲೋದ್ಯಮಕ್ಕೆ ಪ್ರಸಿದ್ಧವಾಗಿದ್ದವು. ಇಂದು ಬಲ್ಗೇರಿಯಾ, ಫ್ರಾನ್ಸ್ ಮುಂತಾದ ದೇಶಗಳಲ್ಲಿ ಆಧುನಿಕ ಯಂತ್ರಸಾಧನಗಳಿಂದ ತೈಲೋದ್ಯಮ ಬೃಹತ್ತಾಗಿ ಬೆಳೆದಿದೆ. ಸುಗಂಧಿತ ತೈಲವನ್ನು ತಯಾರಿಸುವುದಲ್ಲದೆ ಗುಲ್‌ಕಂದ, ಮುರಬ್ಬ, ಪೋಪರಿ ಮುಂತಾದ ಖಾದ್ಯವಸ್ತುಗಳನ್ನೂ ಅದರಿಂದ ತಯಾರಿಸಲಾಗುತ್ತದೆ. ಕೆಲವೊಂದು ಆಯುರ್ವೇದ ಔಷಧಿಗಳ ತಯಾರಿಕೆಯಲ್ಲಿಯೂ ಗುಲಾಬಿ ಬೇಕು.

ಗುಲಾಬಿ ಯುದ್ಧಗಳು-- ಇಂಗ್ಲೆಂಡಿನ ರಾಜಮನೆತನಗಳು ಗುಲಾಬಿಯ ಮೋಹಕತೆಗೆ ಮಾರು ಹೋಗಿ ಗುಲಾಬಿಯನ್ನೇ ತಮ್ಮ ರಾಜಲಾಂಛನಗಳನ್ನಾಗಿ ಮಾಡಿಕೊಂಡಿದ್ದವು. ಕ್ರಿ.ಶ. ೧೪೫೫ರಿಂದ ೧೪೮೭ರ ವರೆಗಿನ ಅವಧಿಯಲ್ಲಿ ೬ನೆಯ ಹೆನ್ರಿ, ೪ನೆಯ ಎಡ್ವರ್ಡ್ ಮತ್ತು ೩ನೆಯ ರಿಚರ್ಡ್‌ರ ಆಳ್ವಿಕೆಯಲ್ಲಿ ನಡೆದ ಅಂತರ್ಯುದ್ಧಗಳು "ಗುಲಾಬಿ ಯುದ್ಧಗಳೆಂದೇ" ಇತಿಹಾಸದಲ್ಲಿ ಪ್ರಸಿದ್ಧವಾಗಿವೆ. ಬಿಳಿ ಗುಲಾಬಿ ಲಾಂಛನವಾಗಿ ಉಳ್ಳ ಯಾರ್ಕ್ ರಾಜಮನೆತನದವರಿಗೂ ಕೆಂಪು ಗುಲಾಬಿ ಲಾಂಛನವಾಗಿ ಉಳ್ಳ ಲ್ಯಾಂಕೆಸ್ಟರ್ ರಾಜಮನೆತನದವರಿಗೂ ನಡೆದ ಈ ಆಂತರಿಕ ಯುದ್ಧಗಳಲ್ಲಿ ಅಪಾರ ಸಾವು-ನೋವುಗಳುಂಟಾದವು.

ಗುಲಾಬಿ ಉದ್ಯಾನವನಗಳು-- ವಿಜಯನಗರದ ಅರಸರ ಕಾಲದಲ್ಲಿ ಹಂಪಿಯಲ್ಲಿ ಗುಲಾಬಿಯ ಉದ್ಯಾನವನಗಳಿದ್ದುದರ ಬಗ್ಗೆ ಆಗ ಹಂಪಿಯನ್ನು ಸಂದರ್ಶಿಸಿದ ಅಬ್ದುಲ್ ರಜಾಕ್, ನಿಕಲೋ ಕೊಂಟಿ ಮುಂತಾದ ವಿದೇಶಿ ಯಾತ್ರಿಕರು ಬಹುವಾಗಿ ಪ್ರಶಂಶಿಸಿದ್ದಾರೆ. ಆದರೆ ಇಂದು ಕರ್ನಾಟಕದಲ್ಲಾಗಲಿ ಭಾರತದ ಇನ್ನಿತರ ರಾಜ್ಯಗಳಲ್ಲಾಗಲಿ ಅಂತಹ ಗುಲಾಬಿಯ ಉದ್ಯಾನವನಗಳು ಇದ್ದ ಹಾಗೆ ಕಾಣುವುದಿಲ್ಲ. ಯುರೋಪಿನ ಹಲವಾರು ದೇಶಗಳಲ್ಲಿ ಗುಲಾಬಿಯ ಬೃಹತ್ ಉದ್ಯಾನವನಗಳು ಜನಮನವನ್ನು ಆಕರ್ಷಿಸುತ್ತಿವೆ. ಪ್ಯಾರಿಸ್ಸಿನ ಬಾಯ್-ಡ-ಬೂಲೋನ್‌ನಲ್ಲಿನ ಬಗಾಟೆಲ್ ತೋಟ ಮತ್ತು ಅದರ ಸಮೀಪದಲ್ಲಿಯೇ ಇರುವ "ಲಾ-ಹೇ" ಉದ್ಯಾನವನ ಜಗತ್ತಿನಲ್ಲಿಯೇ ಅತಿ ಹೆಚ್ಚು ಪ್ರಸಿದ್ಧವಾದವುಗಳು. ಅಮೇರಿಕೆಯ ಅನೇಕ ಸುಪ್ರಸಿದ್ಧ ಗುಲಾಬಿಯ ಉದ್ಯಾನವನಗಳಲ್ಲಿ ಒರೇಗಾನ್‌ನ ಪೋರ್ಟ್‌ಲ್ಯಾಂಡ್‌ನಲ್ಲಿರುವ ಗುಲಾಬಿ ಉದ್ಯಾನವನ, ಕೋಲಂಬಸ್‌ನಲ್ಲಿರುವ "ಪಾರ್ಕ್ ಆಫ್ ರೋಜಸ್" ಹೆಚ್ಚು ಪ್ರಸಿದ್ಧವಾದವು. ಇಂಗ್ಲೆಂಡಿನ "ಕ್ವೀನ್ ಮೇರೀಸ್ ರೋಸ್ ಗಾರ್ಡನ್" ಅತ್ಯಂತ ಸುಂದರವಾದ ಗುಲಾಬಿಗಳ ಉದ್ಯಾನವನವಾಗಿದೆ. ಜರ್ಮನಿ, ಸ್ಪೇನ್, ಸ್ವಿಟ್ಜರ್‌ಲ್ಯಾಂಡ್, ಹಾಲಂಡ್ ದೇಶಗಳಲ್ಲಿಯೂ ಗುಲಾಬಿಗಳ ದೊಡ್ಡ ದೊಡ್ಡ ಉದ್ಯಾನಗಳಿವೆ.

ಭಾರತದಲ್ಲಿ ಚಂಡೀಗಢ್‌ನಲ್ಲಿರುವ ಗುಲಾಬಿಗಳ ಉದ್ಯಾನವನ, ಪತಿಯಾಳ ಮಹಾರಾಜರ ಗುಲಾಬಿ ತೋಟ, ರಾಷ್ಟ್ರಪತಿ ಭವನದ ಗುಲಾಬಿ ತೋಟ ಮುಂತಾದವುಗಳೂ ಇಲ್ಲಿ ಉಲ್ಲೇಖಾರ್ಹವಾಗಿವೆ. ●

# ಒಬ್ಬ ಸಾಧಕಿಯ ಸಮೀಪ ದರ್ಶನ

• ಆರ್.ಜಿ. ದೇಸಾಯಿ

ನಾನು ವಿಜಾಪುರದ ಪಿ.ಡಿ.ಜೆ. ಕನ್ಯಾ ಶಾಲೆಯ ಮುಖ್ಯಾಧ್ಯಾಪಕನಾಗಿದ್ದಾಗ ಶಾರೀರಿಕ ಶಿಕ್ಷಕಿಯ ಸ್ಥಳ ಖಾಲಿಯಾಯಿತು. ಆಗ ಸಂದರ್ಶನಕ್ಕೆ ಕೆಲವು ತರುಣಿಯರು ಬಂದಿದ್ದರು. ಅವರಲ್ಲಿ ಸಾದುಗಪ್ಪು ಬಣ್ಣದ ತೆಳು ದೇಹಯಷ್ಟಿಯ ತರುಣಿಯ ಆಯ್ಕೆಯಾಯಿತು. ಆಕೆಯ ಹೆಸರು ಶರಾವತಿ ಹೆಗಡೆ, ಸಿದ್ದಾಪುರ ತಾಲೂಕಿನ ಶೀರಳಗಿ ಅವಳ ಊರು.

ದಿನಗಳುರುಳಿದವು.

ಶಾಲೆಬಿಟ್ಟ ನಂತರ ಆಕೆ ಕೆಲವು ಆಯ್ದ ವಿದ್ಯಾರ್ಥಿನಿಯರಿಗೆ ಯೋಗಾಸನಗಳನ್ನು ಕಲಿಸಹತ್ತಿದಳು. ತಾನು ಶಾಲೆ ಕಲಿಯುತ್ತಿದ್ದಾಗ ಮತ್ತು C.P.Ed ಕೋರ್ಸ್ ಮಾಡುತ್ತಿದ್ದಾಗ ಬೆಳಗಾವಿಯಲ್ಲಿ ದಿ. ನಾಗನೂರ ಸ್ವಾಮಿಗಳು ಸ್ಥಾಪಿಸಿದ ವಿದ್ಯಾರ್ಥಿನಿಲಯದಲ್ಲಿ ಇದ್ದಳಂತೆ. ಅಲ್ಲಿದ್ದ ಇಬ್ಬರು ವಿಧವೆಯರು ವಿದ್ಯಾರ್ಥಿನಿಲಯದ ಮೇಲ್ವಿಚಾರಣೆ ಮಾಡುತ್ತಿದ್ದರು. ಈಕೆಯನ್ನು ಅವರು ತರುಣಿಯನ್ನು ತಮ್ಮ ಮಗಳಂತೆ ನೋಡಿಕೊಳ್ಳುತ್ತಿದ್ದರು. ಅಲ್ಲಿರುವಾಗ ವೀರಶೈವ ತತ್ವಜ್ಞಾನದ ಪ್ರಭಾವ ಅವಳ ಮೇಲೆ ಬಹಳವಾಗಿತ್ತು. ದಿನಾಲು ನಸುಕಿನಲ್ಲಿ ಮೂರು ಗಂಟೆಗೆ ಎದ್ದು ಧ್ಯಾನಮಾಡುತ್ತಿದ್ದಳು.

ಒಂದು ದಿನ ಶರಾವತ್ತಿ "ಈ ಊರಲ್ಲಿ ಯಾವುದಾದರೂ ಆಧ್ಯಾತ್ಮಿಕ ಸತ್ಸಂಗ ನಡೆಯುತ್ತದೆಯೇ?" ಎಂದು ನನ್ನನ್ನು ಕೇಳಿದಳು. ಆಗ ನಮ್ಮ ಮನೆಯಲ್ಲೇ ಪ್ರತಿ ರವಿವಾರ ಸಂಜೆಗೆ ಶ್ರೀ ಅರವಿಂದ ಮಂಡಳದ ಕಾರ್ಯಕ್ರಮ ನಡೆಯುತ್ತಿತ್ತು. ಆಕೆ ಇರತ್ತಿದ್ದುದು ಜೋರಾಪುರದ ಒಂದು ಕೋಣೆಯಲ್ಲಿ. ಅಲ್ಲಿಂದ ಒಬ್ಬ ಹಿರಿಯ ಸಾಧಿಕೆ ನಮ್ಮ ಕಾರ್ಯಕ್ರಮಕ್ಕೆ ತಪ್ಪದೆ ಬರುತ್ತಿದ್ದಳು. ಅವಳೊಂದಿಗೆ ಇವಳೂ ಬರಹತ್ತಿದಳು. ಕೆಲವು ದಿನಗಳ ನಂತರ ನಮ್ಮ ಒಂದು ಕೋಣೆ ಖಾಲಿಯಾದಾಗ ಅಲ್ಲಿಯೇ ಆಕೆ ಇರತೊಡಗಿದಳು.

ಸತ್ಸಂಗದಲ್ಲಿಶ್ರೀ ಅರವಿಂದರ ಮತ್ತು ಮಾತೆಯವರ ಗ್ರಂಥಗಳ ಯಾವುದಾದರೂ ಭಾಗವನ್ನು ಓದಿ ಕನ್ನಡದಲ್ಲಿ ಅರ್ಥ ಹೇಳಲಾಗುತ್ತಿತ್ತು. ಅನಂತರ ಕೆಲವು ನಿಮಿಷ ಧ್ಯಾನ ಮಾಡುತ್ತಿದ್ದೆವು. ಶರಾವತಿಯು ಆಗಲೇ ಶ್ರೀ ರಾಮಕೃಷ್ಣ ಪರಮಹಂಸರ ಚರಿತ್ರೆಯನ್ನೂ ಅವರ ಸಂಭಾಷಣೆಗಳನ್ನೂ ಓದಿ ಮನನ ಮಾಡಿಕೊಂಡಿದ್ದಳು. ಆದ್ದರಿಂದ ಶ್ರೀ ಅರವಿಂದರ ತತ್ವಜ್ಞಾನವು ಆಳವಾದ ಪ್ರಭಾವವನ್ನು ಆಕೆಯ ಮೇಲೆ ಬೀರಿತು. ನಮ್ಮಲ್ಲಿಯ ಕೆಲವು ಕನ್ನಡದ ಪುಸ್ತಕಗಳನ್ನು ಆಕೆಗೆ ಓದಲು ಕೊಟ್ಟಾಗ ಅವುಗಳನ್ನು ಹಸಿದವರು ಗಬಗಬನೆ ಆಹಾರವನ್ನು ತಿನ್ನುವಂತೆ ಬೇಗನೆ ಓದಿ ಮುಗಿಸುತ್ತಿದ್ದಳು. ಕನ್ನಡದಲ್ಲಿ ಆಗ ಬಹಳ ಪುಸ್ತಕಗಳು ಅನುವಾದಿತವಾಗಿದ್ದಿಲ್ಲ. ಅವಳು ಕಷ್ಟಪಟ್ಟು ಇಂಗ್ಲೀಷನ್ನು ಚೆನ್ನಾಗಿ ಕಲಿತು ನನ್ನಲ್ಲಿಯ ಅನೇಕ ಇಂಗ್ಲೀಷ್ ಗ್ರಂಥಗಳನ್ನು ಓದಿದಳು.

ನಾನು ಮತ್ತು ನನ್ನ ಪತ್ನಿ ಪ್ರತಿವರ್ಷ ಪಾಂಡಿಚೇರಿಗೆ ಹೋಗಿ ಶ್ರೀ ಅರವಿಂದರ ಆಶ್ರಮದಲ್ಲಿ ಒಂದು ತಿಂಗಳು ಇರುತ್ತಿದ್ದೆವು. ೧೯೭೭ರ ಫೆಬ್ರುವರಿಯಲ್ಲಿ ಅವಳೂ ನಮ್ಮೊಡನೆ ಆಶ್ರಮಕ್ಕೆ ಬಂದಳು. ಅನಂತರ ಪ್ರತಿ ವರ್ಷ ನಮ್ಮೊಡನೆ ಆಕೆಯೂ ಬರಹತ್ತಿದಳು. ಪಾಂಡೀ

ಚೇರಿಯಲ್ಲಿದ್ದಾಗ ಒಂದು ದಿನ ತನ್ನ ಬಾಲ್ಯದಿಂದ ಅಂದಿನವರೆಗೆ ಆಗಿದ್ದ ಅನುಭವಗಳನ್ನೆಲ್ಲ ನಮಗೆ ವಿವರಿಸಿದಳು. ಅವು ತುಂಬ ಅದ್ಭುತ.

ದಿಲ್ಲಿಯಲ್ಲಿ ಶ್ರೀ ಅರವಿಂದ ಆಶ್ರಮದ ಶಾಖೆಯಿದೆ. 'ಆ ಶಾಖೆಯ' ವತಿಯಿಂದ ಪ್ರತಿ ವರ್ಷ ಬೇಸಿಗೆ ರಜೆಯಲ್ಲಿ ಹಿಮಾಲಯದ ತಪ್ಪಲಿನ ಒಂದು ಭಾಗದಲ್ಲಿ ಚಾರಣ ಕಾರ್ಯಕ್ರಮ ನಡೆಯುತ್ತದೆ. ಶರಾವತಿ ಪ್ರತಿ ವರ್ಷ ಆ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದಳು. ಹಿಮಾಲಯ ಪರ್ವತವನ್ನು ಏರುವಾಗ ಅವರ ಹಿಂದೆ ಮತ್ತು ಮುಂದೆ ಶ್ರೀಮಾತೆಯವರು ಮತ್ತು ಶ್ರೀ ಅರವಿಂದರು ತಮ್ಮನ್ನು ಸಂರಕ್ಷಿಸುತ್ತ ನಡೆಯುತ್ತಿದ್ದ ಅನುಭವ ಅವಳಿಗೆ ಆಗುತ್ತಿತ್ತಂತೆ. ೪೦ ವರ್ಷ ವಯಸ್ಸಿನ ಒಳಗಿನವರಿಗೆ ಮಾತ್ರ ಚಾರಣ ಕಾರ್ಯಕ್ರಮದಲ್ಲಿ ಪ್ರವೇಶವೆಂಬ ನಿಯಮವಿತ್ತು. ಕೊನೆಯ ಸಲ ೪೦ ವರ್ಷ ಮೀರಿದ್ದರೂ ಪ್ರವೇಶ ದೊರೆಯಿತು.

ಆಧ್ಯಾತ್ಮಿಕ ಪುಸ್ತಕಗಳನ್ನು ಮುಂಜಾನೆ ಓದಲು ಪ್ರಾರಂಭಿಸಿದರೆ ಮಧ್ಯಾಹ್ನದವರೆಗೂ ಮುಗಿಯುತ್ತಿದ್ದಿಲ್ಲ. ಹೀಗಾಗಿ ಅಡಿಗೆ ಮಾಡಲು ಕೂಡ ಸಾಧ್ಯವಾಗುತ್ತಿರಲಿಲ್ಲ. ಹಣ್ಣು ಹಸಿಕಾಯಿ ಪಲ್ಲೆಗಳನ್ನು ತಿಂದೇ ಶಾಲೆಗೆ ಹೋಗುತ್ತಿದ್ದಳು. ಶಾಲೆಯಿಂದ ಬಂದ ಮೇಲೆ ಬೇಗನೇ ಊಟ ಮುಗಿಸಿ ಮತ್ತೆ ಧ್ಯಾನಮಗ್ನಳಾಗುತ್ತಿದ್ದಳು.

ಕೆಲವು ವರ್ಷಗಳ ನಂತರ ಹೆಚ್ಚು ಅನುಕೂಲವಾದ ಮನೆ ಹಿಡಿದರು. ಅವರನ್ನು ಭೆಟ್ಟಿಯಾಗದಿದ್ದರೆ ನಮಗೆ ಸಮಾಧಾನವಾಗುತ್ತಿರಲಿಲ್ಲ. ದಿನಾಲು ಸಂಜೆಗೆ ನಾನು ನನ್ನ ಪತ್ನಿಯೊಡನೆ ಅವರ ಮನೆಗೆ ಹೋಗಿ ಅರ್ಧ ಗಂಟೆ ಅರ್ಧ ಗಂಟೆ ಮಾತಾಡಿ ಬರುತ್ತಿದ್ದೆವು. ಸಂಜೆ ೭ ಗಂಟೆಗೇ ಧ್ಯಾನ ಮಾಡಲು ಪ್ರಾರಂಭಿಸಿದಾಗ ವಾರಕ್ಕೆ ಒಂದೇ ದಿನ ಭೆಟ್ಟಿಯಾಗತೊಡಗಿದೆವು.

ಪಾಂಡಿಚೇರಿಯ ಆಶ್ರಮದಲ್ಲಿಯೇ ಇದ್ದು ಬಿಡಬೇಕೆಂಬ ಇಚ್ಛೆ ಪ್ರಬಲವಾದಾಗ ಸೇವಾ ನಿವೃತ್ತಿಗೆ ಅರ್ಜಿ ಕೊಟ್ಟು ಆಶ್ರಮಕ್ಕೆ ಹೋಗಿಬಿಟ್ಟರು. ಆ ವೇಳೆಗಾಗಲೆ ೧೭ ವರ್ಷ ಸೇವೆ ಸಲ್ಲಿಸಿಯಾಗಿತ್ತು. ಮುಖ್ಯಾಧ್ಯಾಪಕರು ಹಿಂದಿರುಗಿ ಬಂದು ೩ ವರ್ಷ ಸೇವೆ ಮಾಡಿ ನಿವೃತ್ತಿಯ ಸೌಲಭ್ಯ ಪಡೆಯಿರೆಂದು ಪತ್ರ ಬರೆದರೂ ತಿರುಗಿ ಬರುವ ಮನಸ್ಸು ಮಾಡಲಿಲ್ಲ.

---

## ಎಂಥ ಕೆಲಸ?

*ಮೈಸೂರಿನ ಮಹಾರಾಜರಾಗಿದ್ದ ಶ್ರೀ ಚಾಮರಾಜ ಒಡೆಯರರು ಒಂದು ಉದ್ಯಾನವನದ ನಿರೀಕ್ಷಣೆಗಾಗಿ ಹೊರಟರು. ಅಲ್ಲಿಯ ಗುಲಾಬಿ ಹೂವೊಂದು ಅವರನ್ನು ಬಹುವಾಗಿ ಆಕರ್ಷಿಸಿತು. ಹಾಗೇ ಒಂದು ನಿಮಿಷ ಅಲ್ಲಿ ನಿಂತ ದೊರೆಗಳು ಹೆಜ್ಜೆ ಕಿತ್ತಿದರು. ಮಹಾರಾಜರಿಗೆ ಆ ಹೂವು ತುಂಬ ಮೆಚ್ಚಿಕೆಯದಾಗಿರಬೇಕೆಂದು ಭಾವಿಸಿದ ಉದ್ಯಾನವನದ ಅಧಿಕಾರಿಗಳು ಅದನ್ನು ಗಿಡದಿಂದ ಕಿತ್ತು ದೊರೆಯ ಬಳಿ ಬಂದು ಭಯ-ಭಕ್ತಿಯಿಂದ ಅರ್ಪಿಸಿದರು.*

*ಮಹಾರಾಜರ ಮುಖ ಗಂಟಿಕ್ಕಿತು.*

*"ನೀವೆಂಥ ಕೆಲಸ ಮಾಡಿದಿರ? ಆಂ? ಈ ಹೂವು ಗಿಡದಲ್ಲೇ ಇನ್ನೂ ಅನೇಕ ದಿನಗಳಿದ್ದು ನೂರಾರು ಜನರನ್ನು ಆಹ್ಲಾದಗೊಳಿಸುತ್ತಿತ್ತಲ್ಲಾ. ಇದನ್ನು ಕಿತ್ತು ಎಷ್ಟು ಜನರ ಆನಂದವನ್ನು ಹೊಸಕಿ ಹಾಕಿದಿರಿ ನೀವು ಗೊತ್ತೆ?" ಎಂದು ಬಡಬಡನೆ ನಡೆದುಬಿಟ್ಟರು.*

ಸಂಗ್ರಹ: **ಕೋಲಾರ್ ಕೃಷ್ಣ ಅಯ್ಯರ್**

---

ಮಾನವನೆಂದರೆ ಸಕಲವನ್ನೂ ಒಳಗೊಂಡಿರುವ ಭಗವಂತನ ಪ್ರತಿಬಿಂಬ.

–ಯೋಹಾನ

---

ಸಂಬಂಧ

# ‘ಜೂಡಿ’

• ಅಜಿತ ಪ್ರಭು



ಕಳೆದ ವರ್ಷ ಫೆಬ್ರುವರಿ ತಿಂಗಳಿರಬೇಕು, ನಾನು ಮನೆಯಲ್ಲೇ ಇದ್ದೆ. ಬೆಳಗಿನ ಜಾವ ಹತ್ತುಗಂಟೆಯ ಸಮಯದಲ್ಲಿ ಇಬ್ಬರು ನಮ್ಮ ಮನೆಗೆ ಬಂದರು. ಒಬ್ಬನ ಕೈಯಲ್ಲಿ ಕಪ್ಪು ಬಣ್ಣದ, ತುಸು ದೊಡ್ಡದೇ ಆದ ನಾಯಿಮರಿಯಿತ್ತು. ಅವರಿಬ್ಬರೂ ನಮ್ಮ ಭಾವನ ಲಾರಿಯ ಡ್ರೈವರರು. ಬೆಳಗಾವಿಯಿಂದ ಬರುವಾಗ ನಮ್ಮಕ್ಕ ಕಳುಹಿಸಿದ್ದ ನಾಯಿಮರಿಯನ್ನು ನಮಗೆ ಕೊಟ್ಟು ಹೋಗಲು ಬಂದಿದ್ದರು.

ಅಕ್ಕ ರಜೆಯಲ್ಲಿ ಬಂದಾಗ ನಾವು ಒಂದು ಒಳ್ಳೆಯ ಜಾತಿಯ ಗಂಡು ನಾಯಿ ಮರಿ ಕಳಿಸಿಕೊಡಬೇಕೆಂದು ಅವಳನ್ನು ಕೇಳಿಕೊಂಡಿದ್ದೆವು.

ಮಸಕು ಕಪ್ಪು ಬಣ್ಣದ ಅದು ಅಕರಾಳ ವಿಕರಾಳವಾಗಿತ್ತು. ಹೀಗಾಗಿ ಅದು ನಮ್ಮ ಮನೆಗೆ ಬಂದದ್ದರಿಂದ ನಮಗೇನೂ ಅಷ್ಟು ಸಂತೋಷವಾಗಲಿಲ್ಲ. ಮುದ್ದಾಗಿರಬೇಕಾಗಿದ್ದ ಮುಖ ಭಯ ಹುಟ್ಟಿಸುವಂತಿತ್ತು. ಮುಖಕ್ಕೆ ಹೋಲಿಸಿದರೆ ಬಹು ದೊಡ್ಡದೆಂದೇ ಹೇಳಬಹುದಾದ ನಿಮಿರಿ ನಿಂತ ಕಿವಿಗಳು. ಒಂದು ರೀತಿಯಲ್ಲಿ ಅದು ಬಲಿತ ಹೆಗ್ಗಣವನ್ನೇ ಹೋಲುತ್ತಿತ್ತು. ಅಕ್ಕ ಇಂತಹ ಮರಿಯನ್ನು ಕಳಿಸಿಕೊಟ್ಟಳಲ್ಲ ಅಂದುಕೊಂಡ ನಾನು “ಇದ್ಯಾವ ಜಾತಿಯ ನಾಯಿಮರಿ?” ಎಂದು ಸ್ವಲ್ಪ ಅಸಮಾಧಾನದಿಂದಲೇ ಆ ಡ್ರೈವರನನ್ನು ಕೇಳಿದೆ. “ಆಲ್ಸೇಶಿಯನ್” ಎಂದನಾತ. ನನಗೆ ನಂಬಿಕೆ ಬರಲಿಲ್ಲ. ಅದು ‘ಆಲ್ಸೇಶಿಯನ್ ಅಂತೂ ಅಲ್ಲ, ಯಾವುದೋ ಮಿಶ್ರಜಾತಿಯಾಗಿರಬೇಕು,’ ಅಂದುಕೊಂಡೆ. ಆದರೆ ತಂದ ಮೇಲೆ ಸಾಕಲೇಬೇಕಲ್ಲ? ಅದಕ್ಕೆ ಚೈನು ಬಿಗಿದು ಗೂಟಕ್ಕೆ ಕಟ್ಟಿದೆ. ಆ ನಾಯಿಮರಿ ಅತಿ ಪುಕ್ಕಲು ಸ್ವಭಾವದ್ದಾಗಿತ್ತು. ಮನುಷ್ಯರ ನೆರಳು ಕಂಡರೆ ಸಾಕು, ಮೂಲೆಗೆ ಹೋಗಿ ಮುದುರಿಕೊಂಡು ಕುಳಿತುಕೊಳ್ಳುತ್ತಿತ್ತು. ನಿಜ ಹೇಳಬೇಕೆಂದರೆ ಅಂತಹ ಪುಕ್ಕಲು ನಾಯಿಮರಿಯನ್ನು ನಾನು ಈವರೆಗೆ ಕಂಡಿರಲಿಲ್ಲ. “ಹೊಸ ವಾತಾವರಣವಲ್ವೆ? ಅದಕ್ಕೇ ಹೆದರಿಕೊಳ್ತಿದೆ. ಎರಡು ದಿನಗಳಲ್ಲೇ ಸರಿಯಾಗುತ್ತೆ ಬಿಡಿ,”

ಅಂದ ಡ್ರೈವರ್.

ಒಂದು ದಿನ ಕಳೆಯಿತು. ಮಾರನೆಯ ದಿನ ಬೆಳಿಗ್ಗೇ ನನಗೆ ಆಘಾತ ಕಾದಿತ್ತು! ಕಾರಣ ಅದು ಹೆಣ್ಣು ಮರಿಯಾಗಿತ್ತು! ಡ್ರೈವರ್ ಅದನ್ನು ತಂದಾಗ ಗಂಡುಮರಿ ಅಂದುಕೊಂಡಿದ್ದ. ಹೀಗಾಗಿ ಆ ಮರಿಯ ಮೇಲೆ ನನಗೆ ಅಸಹನೆ ಬೆಳೆಯಿತು. ಆದರೂ ಅದಕ್ಕೆ ಹೆಸರೊಂದಿಡಬೇಕಲ್ಲ, ನಾವು ಮನೆಯವರೆಲ್ಲಾ "ಜೂಡಿ" ಎಂದು ಕರೆಯುವುದಾಗಿ ನಿರ್ಧರಿಸಿದೆವು.

ಎರಡು ದಿನವಲ್ಲ, ಎರಡು ತಿಂಗಳು ಕಳೆದರೂ ಆ ನಾಯಿಮರಿ ಪುಕ್ಕಲು ಸ್ವಭಾವವನ್ನು ಬಿಡಲಿಲ್ಲ. ಬೇರೆಯವರ ಮಾತಂತೂ ದೂರವುಳಿಯಿತು, ಅದರ ಆರೈಕೆ ಮಾಡುವ ನನ್ನನ್ನು ಕಂಡರೂ ಮೂಲೆಗೆ ಮುದುರಿಕೊಳ್ಳುತ್ತಿತ್ತು. ಹೀಗಾಗಿ ಅದನ್ನು ತಿರುಗಾಡಲು ಕರೆದುಕೊಂಡು ಹೋಗುವುದೂ ಸಾಧ್ಯವಿರಲಿಲ್ಲ. ನಮ್ಮ ಮನೆಯಲ್ಲಿ ಯಾರಾದರೂ ಅದರ ಸನಿಹಕ್ಕೆ ಹೋಗಿ 'ಜೂಡಿ' ಅಂದರೆ ಸಾಕು, ಮೈಯೆಲ್ಲಾ ಮುದುಡಿಕೊಂಡು ಮೂಲೆಗೆ ಸರಿದು ಗಡಗಡ ನಡುಗಲು ಪ್ರಾರಂಭಿಸುತ್ತಿತ್ತು.

ಇದೆಂಥಾ ನಾಯಿ? ಎಂದು ನನಗೆ ತಲೆಬಿಸಿಯಾಯಿತು. ಅದರ ವರ್ತನೆ ನೋಡಿದರೆ ಬಹುಶಃ ಅದು ಮಾನಸಿಕವಾಗಿ ಬೆಳೆದಿರಲಿಕ್ಕಿಲ್ಲ ಎಂದು ಯಾರೋ ಹೇಳಿದರು. ಇದ್ದರೂ ಇರಬಹುದು, ಇಲ್ಲದಿದ್ದರೆ ಹೀಗೇಕೆ ಮಾಡುತ್ತದೆ? ಅಂದುಕೊಂಡೆ. ಬುದ್ಧಿಮಾಂದ್ಯ ಕೇವಲ ಮನುಷ್ಯರಿಗೇ ಅಲ್ಲ ಪ್ರಾಣಿಗಳಿಗೂ ಇರುವ ಸಾಧ್ಯತೆಯೂ ಇದೆಯಲ್ಲ!

ಆ ದಿನ ನನಗೆ ಸರಿಯಾಗಿ ನೆನಪಿದೆ, ಜೂಡಿಯ ಸರಪಳಿ ಬಿಚ್ಚಿ ಅಂಗಳದಲ್ಲಿ ಬರುವುದೇ ತಡ. ಯಥಾಪ್ರಕಾರ ಅದು ಒಂದು ಮೂಲೆಗೆ ಹೋಗಿ ಮುದುಡಿ ಕುಳಿತಿತು. ನಾನು ಎಷ್ಟು ಪುಸಲಾಯಿಸಿದರೂ ಬರಲಿಲ್ಲ. ಅದರ ಜೊತೆ ಆಡಬೇಕೆಂಬ ನನ್ನ ಉತ್ಸಾಹವೆಲ್ಲಾ ಜರ್‍ರನೆ ಇಳಿದು ಹೋಯಿತು. ಅಂಗಳದ ಮಧ್ಯದಲ್ಲೇ ಕುಕ್ಕರುಗಾಲಿನಲ್ಲಿ ಕುಳಿತುಕೊಂಡು ಬೆರಳಿನಿಂದ ಮಣ್ಣಲ್ಲಿ ಗೀಚತೊಡಗಿದೆ. ಆಗ ನನಗೇ ಆಶ್ಚರ್ಯವಾಗುವಂತೆ ಜೂಡಿ ಒಮ್ಮೆಲೆ ಎದ್ದುನಿಂತು ನನ್ನತ್ತ ಓಡಿಬಂತು! ಎಂದೂ ಇಲ್ಲದ್ದು ಹೀಗೇಕೆ? ಹುಚ್ಚು ಹಿಡಿಯಿತೆ? ಹುಚ್ಚು ನಾಯಿ ಕಚ್ಚಿದರೆ ಅಪಾಯ ಎನ್ನುವರಲ್ಲ, ಅಕಸ್ಮಾತ್ತಾಗಿ ಅದು ಕಚ್ಚಿಬಿಟ್ಟರೆ! ಎಂದು ಹೆದರಿಬಿಟ್ಟೆ. ಆದರೆ ಅಂತಹುದೇನೂ ಆಗಲಿಲ್ಲ, ಓಡಿಬಂದ 'ಜೂಡಿ' ನನ್ನ ತೋಳನ್ನು ಲೊಚಲೊಚನೆ ನೆಕ್ಕತೊಡಗಿತು. ಅದು ಪ್ರೀತಿಯ ದ್ಯೋತಕವಾಗಿ ರಭಸದಿಂದ ಬಾಲವಾಡಿಸುತ್ತಿತ್ತು. ಕೊನೆಗೂ ಇದು ನನ್ನ ಮೇಲೆ ವಿಶ್ವಾಸ ವ್ಯಕ್ತಪಡಿಸಿತಲ್ಲ! ಎಂದು ನನ್ನ ಕಣ್ಣು ತುಂಬಿಬಂತು, ಹೃದಯ ಭಾರವಾಯಿತು. ಅದುವರೆಗೆ ಇದ್ದ ಅಸಹನೆಯೆಲ್ಲಾ ತೊಡೆದುಹೋಗಿ ಅದನ್ನು ಎದೆಗೊತ್ತಿಕೊಂಡು "ಜೂಡಿ" ಎಂದೆ.

ಅಂದಿನಿಂದ ಜೂಡಿಯ ಜತೆಗಿನ ಅನುಬಂಧ ಬಿಗಿಯಾಯಿತು. ಅದರ ಪುಕ್ಕಲು ಸ್ವಭಾವವು ಸ್ವಲ್ಪ ಕಡಿಮೆಯಾಗಿ ಅಪರಿಚಿತರನ್ನು ಕಂಡರೆ 'ಗುರ್' ಎನ್ನುತ್ತಿತ್ತು. ಅಂಗಳದೊಳಗೆ ಹೊಕ್ಕ ದನಕರುಗಳನ್ನು ಅಟ್ಟಾಡಿಸಿ ಓಡಿಸುತ್ತಿತ್ತು. ನಾನು ಗಮನಿಸಿದ ಇನ್ನೊಂದು ಗುಣ ವಿಶೇಷವೆಂದರೆ ಅದರ ಅತಿ ವಿಧೇಯತೆ! ಸಾಮಾನ್ಯವಾಗಿ ಎಲ್ಲ ಶ್ವಾನಗಳೂ ವಿಧೇಯವಾಗಿರುತ್ತವೆ. ಆದರೆ ಜೂಡಿಯ ರೀತಿಯೇ ಬೇರೆ. ನಾವು ಸಿಟ್ಟಿನಲ್ಲಿ ಎಷ್ಟು ಹೊಡೆದರೂ, ಮಕ್ಕಳು ಬಾಲ ತುಳಿದರೂ ಕಿಮಕ್ ಎನ್ನದೇ ಸುಮ್ಮನಿರುತ್ತಿತ್ತು. ಸ್ನಾನ ಮಾಡಿಸುವಾಗಲೂ ಒಮ್ಮೆ ಗದರಿದರೆ ಸಾಕು, ಶಾಂತವಾಗಿ ನಿಂತು ಸಹಕರಿಸುತ್ತಿತ್ತು.

ಜೂಡಿಯ ಮೇಲೆ ಪ್ರೀತಿ ಹುಟ್ಟಿಕೊಂಡಿದ್ದು ನನಗೇ ಆಶ್ಚರ್ಯ ಉಂಟುಮಾಡಿತ್ತು. ನಾನು "ಜೂಡಿ..." ಎಂದು ಕರೆದೊಡನೆ ಅದು ಖುಷಿಯಾಗಿ ಹೊರಡಿಸುವ ವಿಲಕ್ಷಣ ಧ್ವನಿ, ನನ್ನನ್ನು ಕಂಡಾಗ ಹೊಳೆಯುವ ಅದರ ಕಣ್ಣುಗಳು, ಪಟಪಟನೆ ಬಡಿಯುವ ಬಾಲ, ಓಡಿ ಬಂದು ನನ್ನ ಮೈಮೇಲೆ ಫರಿನಿಲ್ಲುವ ಶೈಲಿ ಎಲ್ಲವನ್ನೂ ನಾನು ಅತಿಯಾಗಿ ಮೆಚ್ಚಿಕೊಂಡಿದ್ದೆ. ಕ್ರಮೇಣ ನನಗೆ ಅರಿವಾಗದಂತೆಯೆ ನನ್ನ ಬದುಕಿನ ಒಂದು ಭಾಗವಾಗಿಬಿಟ್ಟಿತ್ತು ಜೂಡಿ!

ಆದರೆ ಅನುಬಂಧವೆಂದೂ ದೀರ್ಘಕಾಲ ಉಳಿಯಲಾರದೇನೋ? ಜೂಡಿಗೆ ಆರುತಿಂಗಳಾಗಿದ್ದಾಗ ಆರೋಗ್ಯ ಹದಗೆಟ್ಟಿತು. ಆಹಾರ ಸ್ವೀಕರಿ

ಸಲು ಒಪ್ಪದೇ ಮೊಂಡು ಹಿಡಿಯುತ್ತಿತ್ತು. ದಷ್ಟಪುಷ್ಟವಾಗಿದ್ದ ಅದರ ಶರೀರ ಬಡಕಲಾಗುವದನ್ನು ಕಂಡು ಅದರ ಜೀವಕ್ಕೇನಾದರೂ ಆದೀತೆ ಎಂದು ಹೆದರಿ ಪಶುವೈದ್ಯರಲ್ಲಿಗೆ ಕರೆದೊಯ್ದೆ. ಅವರು "ಹೆದರುವಂತಹದ್ದೇನೂ ಆಗಿಲ್ಲ.... ಸ್ವಲ್ಪ ಇನ್‌ಫೆಕ್ಷನ್ ಅಷ್ಟೇ" ಎಂದು ಹೇಳಿ ಚುಚ್ಚುಮದ್ದು ಕೊಟ್ಟು ಮಾತ್ರೆ, ಟಾನಿಕ್ ಬರೆದುಕೊಟ್ಟರು. ಜೂಡಿ ಖಂಡಿತ ಗುಣವಾಗುತ್ತದೆಂದು ನಾನು ನಂಬಿದ್ದೆ.

ಅಗಸ್ಟ್ ತಿಂಗಳಿನ ಆ ಕರಾಳ ದಿನವನ್ನು ನಾನೆಂದೂ ಮರೆಯಲಾರೆ! ಜೂಡಿಗೆ ಔಷಧೋಪಚಾರ ನಡೆದೇ ಇತ್ತು. ಒಂದು ದಿನ ಸಂಜೆ ಅಂಗಡಿಗೆ ಹೋಗುವ ಮುನ್ನ ಅದನ್ನು ನೋಡಲು ಹೋದೆ. ನಿಶ್ಶಕ್ತಿಯಿಂದ ಮುದುರಿ ಮಲಗಿದ್ದ ಜೂಡಿಯನ್ನು ನೋಡಿ ಕನಿಕರವೆನಿಸಿತು. "ಜೂಡಿ" ಎಂದು ಮೃದುವಾಗಿ ಕರೆದೆ, ಅದು ಕಣ್ತೆರೆದು ನನ್ನನ್ನೊಮ್ಮೆ ನೋಡಿತು. ಆ ಕಣ್ಣುಗಳಲ್ಲಿ ಮೊದಲಿನ ಹೊಳಪು ಇರಲಿಲ್ಲ. ವೇದನೆ ತುಂಬಿತ್ತು. ಆ ಕಪ್ಪು ಮುಖದಲ್ಲಿ ದುಃಖ ವೇದನೆ ವಿಧೇಯತೆಗಳ ಸಮ್ಮಿಶ್ರ ಭಾವವನ್ನು ಕಂಡಾಗ ನನಗೆ ತಡೆಯುವುದಾಗಲಿಲ್ಲ, ಬೆನ್ನ ಮೇಲೆ ಕೈಯಾಡಿಸಿದೆ. ಅದು ನಿಧಾನವಾಗಿ ಬಾಲ ಅಲ್ಲಾಡಿಸುತ್ತಿತ್ತು. ಏಕೋ ಕಣ್ಣು ತುಂಬಿ ಬಂತು. ಎದೆಯಲ್ಲಿ ವರ್ಣಿಸಲಾಗದಂತಹ ನೋವು! ಇದೆಂತಹ ಅನುಬಂಧ? 'ದೇವರೆ ನನ್ನ ಜೂಡಿಯನ್ನು ಮೊದಲಿನ ಹಾಗೆ ಮಾಡು' ಎಂದು ಬೇಡಿಕೊಂಡೆ.

ಆದರೆ ಪ್ರಾರ್ಥನೆ ಫಲಿಸಲಿಲ್ಲ. ಮನೆಬಿಟ್ಟ ಅರ್ಧಗಂಟೆಗೇ ಜೂಡಿ ಸತ್ತ ಸುದ್ದಿ ಬಂತು. ಓಡುತ್ತಾ ಮನೆಗೆ ಬಂದೆ. ಕೊರಡಿನಂತೆ ಮೈ ಚಾಚಿ ನೆಲಕ್ಕೆ ಮುಖ ಆನಿಸಿ ಬಿದ್ದುಕೊಂಡಿತ್ತು. "ಜೂಡಿ...." ಎಂದು ಕರೆದೆ. ಅದು ಓಗೊಡಲಿಲ್ಲ, ಎಂದಿನಂತೆ ಬಾಲವಾಡಿಸುತ್ತಾ ನನ್ನೆಡೆಗೆ ಓಡಿಬರಲಿಲ್ಲ. ಹೌದು, ನನ್ನ ಜೂಡಿ ನಿಜಕ್ಕೂ ಸತ್ತು ಹೋಗಿತ್ತು!

ನನ್ನ ಬದುಕಿನಲ್ಲಿ ಪ್ರವೇಶಿಸಿ, ಕೇವಲ ಆರು ತಿಂಗಳಲ್ಲಿಯೇ ಹೃದಯಕ್ಕೆ ಲಗ್ಗೆ ಹಾಕಿ, ಈಗಲೂ ಮರೆಯಲಾಗದ ನೆನಪಾಗಿ ಕಾಡುತ್ತಿರುವ ಜೂಡಿಯನ್ನು ನೆನೆಸಿಕೊಂಡಾಗಲೆಲ್ಲಾ ನನ್ನ ಕಣ್ಣು ಹನಿಗೂಡುತ್ತದೆ. ಅದರ ಹೆಗ್ಗಣದಂತಹ ರೂಪವನ್ನು, ಹೊಳೆಯುವ ಕಣ್ಣುಗಳನ್ನು ಬಾಲವಲ್ಲಾಡಿಸುವ ಶೈಲಿಯನ್ನು ಮತ್ತು ಪ್ರಶ್ನಾತೀತ ವಿಧೇಯತೆಯನ್ನು ನಾನೆಂದೂ ಮರೆಯಲಾರೆ. ನನ್ನ ನೆನಪಿನಂಗಳಲ್ಲಿ ಶಾಶ್ವತವಾಗಿ ಬದುಕಿರುತ್ತದೆ ಜೂಡಿ! ●

---

## ಹೋಲಿಕೆ

ತನ್ನಲ್ಲಿ ಕೆಲಸ ಕೇಳಿಕೊಂಡು ಬಂದ ಆ ವ್ಯಕ್ತಿಯನ್ನು ನೋಡಿ ದೊರೆಗೆ ಆಶ್ಚರ್ಯವಾಯಿತು. ಏಕೆಂದರೆ ಅವನು ದೊರೆಯ ಹಾಗೇ ಇದ್ದ. ಎತ್ತರ, ನಿಲುವು, ಬಣ್ಣ, ಕಣ್ಣು, ಮೂಗು, ಕೂದಲು ಎಲ್ಲಾ ದೊರೆಯ ಹಾಗೇ ಇತ್ತು. ದೊರೆ ಅವನನ್ನು ಕೇಳಿದ; "ಏನಯ್ಯ, ನಿಮ್ಮ ತಾಯಿ ಯಾವಾಗಲಾದರೂ ಅರಮನೆಯ ಊಳಿಗದಲ್ಲಿ ಕೆಲಸ ಮಾಡುತ್ತಿದ್ದರೆ?" ಅದಕ್ಕೆ ಅವನು, "ಇಲ್ಲ, ಸ್ವಾಮಿ, ಆದರೆ ಬಹಳ ಕಾಲದ ಹಿಂದೆ ನಮ್ಮ ತಂದೆ ಅರಮನೆಯಲ್ಲಿ ಕೆಲಸಕ್ಕಿದ್ದರಂತೆ." ಎಂದ. ಅದನ್ನು ಕೇಳಿ ದೊರೆಗೆ ಸುಸ್ತೋ ಸುಸ್ತು.

● ಡಿ. ಗುಂಡೂರಾವ್

---

## ಅಜಾತ ಶತ್ರು

ರಶಿಯಾದ ನಾಯಕ ಸ್ಟಾಲಿನ್ ಸಾಯುತ್ತಿರುವಾಗ ಪಾದ್ರಿ ಬಂದು, "ನಿನ್ನ ಶತ್ರುಗಳನ್ನೆಲ್ಲ ಕ್ಷಮಿಸು," ಎಂದರಂತೆ. ಆಗ ಸ್ಟಾಲಿನ್ ,"ನನಗೆ ಯಾರೂ ಶತ್ರುಗಳೇ ಇಲ್ಲ" ಎಂದಾಗ, ಆಶ್ಚರ್ಯಚಕಿತನಾದ ಪಾದ್ರಿ, 'ಹೌದೆ?" ಎಂದ. ಅದಕ್ಕೆ ಸ್ಟಾಲಿನ್, "ಹೌದು, ಯಾರೂ ಇಲ್ಲ. ಎಲ್ಲರನ್ನೂ ಆಗಲೇ ಮುಗಿಸಿಬಿಟ್ಟಿದ್ದೇನೆ," ಎಂದರಂತೆ.

● ಶಂಕರಗೌಡ ವೈ. ಪಾಟೀಲ.



# ಶವದ ಬೆರಳು ಮುದ್ರೆಗಳನ್ನು ಪಡೆಯುವುದು ಹೇಗೆ?

ಬೆರಳು ಮುದ್ರೆ ಪರೀಕ್ಷೆಯಲ್ಲಿ
ಶವದ ಬೆರಳು ಮುದ್ರೆಗಳು ಒಡ್ಡುವಂಥ
ಸವಾಲುಗಳು ಒಂದೇ ಎರಡೇ?

• ಈಶ್ವರ ಎಸ್. ಎಣ್ಣೇರ

ಅಪರಿಚಿತ ವ್ಯಕ್ತಿಯೊಬ್ಬ ಆಕಸ್ಮಿಕದಲ್ಲಿ ಸಂಶಯಾಸ್ಪದವಾಗಿ ಸತ್ತರೆ, ಅಥವಾ ದರೋಡೆ ಮುಂತಾದ ಅಪರಾಧ ಕೃತ್ಯಗಳಲ್ಲಿ ತೊಡಗಿರುವಾಗ ಗಾಯಗೊಂಡು ಮರಣದಪ್ಪಿದರೆ, ಇಲ್ಲವೆ ಯಾವುದೇ ರೀತಿಯ ಶಂಕಾಸ್ಪದ ಸಾವು ಸಂಭವಿಸಿದ್ದರೆ ಅಂಥವನನ್ನು ಗುರುತಿಸಲು ಮತ್ತು ಪರಿಚಯವನ್ನು ಖಚಿತಪಡಿಸಿಕೊಳ್ಳಲು ಶವದ ಬೆರಳು ಮುದ್ರೆಗಳನ್ನು ತನಿಖಾಧಿಕಾರಿಗಳು ತೆಗೆದುಕೊಳ್ಳುತ್ತಾರೆ. ಇಂಥ ಮುದ್ರೆಗಳನ್ನು ಬೆರಳು ಮುದ್ರೆ ಸಂಗ್ರಹಾಲಯಗಳಿಗೆ ಕಳಿಸಿ ಮೃತನು ಹಳೆಯ ಅಪರಾಧಿಯೋ ಹೇಗೆ ಎಂಬುದನ್ನು ತಿಳಿದುಕೊಳ್ಳಲು ಇದು ಅನುಕೂಲವಾದ ವಿಧಾನ. ಒಂದು ವೇಳೆ ಹಾಗಲ್ಲದಿದ್ದರೂ ಇನ್ನಿತರ ಮೂಲಗಳಿಂದ ಈ ಬೆರಳು ಮುದ್ರೆಗಳು ಇಂಥದೇ ವ್ಯಕ್ತಿಯವು ಎಂಬುದನ್ನು ಪತ್ತೆ ಹಚ್ಚುವುದು ಸಾಧ್ಯ. ಕಂದಾಯ ಇಲಾಖಾ ಕ್ರಯಪತ್ರ, ಆಸ್ತಿ ಅಡವಿಟ್ಟ ಪತ್ರ, ಸಾಲಪತ್ರ, ಆಸ್ತಿ ಹಸ್ತಾಂತರ ಪತ್ರಗಳೇ ಮೊದಲಾದವುಗಳಲ್ಲಿ ಎಡಗೈ ಹೆಬ್ಬೆರಳಿನ ಗುರುತು ಹಾಕಿಸಿಕೊಳ್ಳುವ ಕ್ರಮ ಎಲ್ಲರಿಗೂ ಗೊತ್ತಿದ್ದದ್ದೆ. ಇಂಥ ಮೂಲಗಳು ಸಂಶಯಾಸ್ಪದವಾಗಿ ಸಾವನ್ನಪ್ಪಿದ ವ್ಯಕ್ತಿ ಇಂಥವನೇ ಎಂದು ಗೊತ್ತು ಮಾಡಿಕೊಳ್ಳುವಲ್ಲಿ ನೆರವಾಗುತ್ತದೆ.

ಈ ಲೇಖಕನ ಸುದೀರ್ಘ ಸೇವಾನುಭವದಲ್ಲಿ ಇಂಥ ಅನೇಕ ಪ್ರಸಂಗಳು ಎದುರಾಗಿವೆ. ಒಂದೊಂದು ಪ್ರಸಂಗವೂ ತುಂಬ ಸವಾಲೊಡ್ಡುವಂಥದು. ೧೯೭೫ ರಲ್ಲಿ ಶಿವಮೊಗ್ಗೆಯ ಗ್ರಾಮಾಂತರ ಪೊಲೀಸ್ ಠಾಣೆಯ ಸರಹದ್ದಿನ ಹಳ್ಳಿಯ ಕಾಡಿನಲ್ಲಿ ವ್ಯಕ್ತಿಯೊಬ್ಬನ ಕೊಲೆಗೈದು ಆ ಶವವನ್ನು

(ಲೇಖಕರ 'ಬೆರಳು ಮುದ್ರೆಗಳು' ಎಂಬ ಪುಸ್ತಕದಿಂದ ಸಂಗ್ರಹೀತ)

ಬಿಸುಟಿದ್ದರು. ತನಿಖಾಧಿಕಾರಿಗಳಿಗೆ ಮೃತವ್ಯಕ್ತಿ ಯಾರೆಂದು ಗೊತ್ತಾಗಲೇ ಇಲ್ಲ. ಇಂಥ ಪ್ರಸಂಗಗಳಲ್ಲಿ ವೈದ್ಯಾಧಿಕಾರಿಗಳಿಗೆ ವಿನಂತಿ ಪತ್ರ ಕೊಟ್ಟು ಶವದ ಹತ್ತು ಕೈ ಬೆರಳುಗಳು ಮುಂಭಾಗಗಳನ್ನು ಬೇರ್ಪಡಿಸಿ ಕೊಡುವಂತೆಯೂ ಮತ್ತು ಪ್ರತಿ ಬೆರಳನ್ನು ಅದು ಯಾವುದೆಂದು ಚೀಟಿ ಹಚ್ಚಿ, ಸುರಕ್ಷಿತ ಬಾಟಲುಗಳಲ್ಲಿಟ್ಟು ಕೊಡಬೇಕೆಂದು ಕೋರಿಕೊಳ್ಳುವುದುಂಟು. ಹೀಗೆ ಕಳಿಸಲ್ಪಟ್ಟ ಬೆರಳಿನ ತುಂಡುಗಳ ಮುದ್ರೆಗಳನ್ನು ಪಡೆದು, ವರ್ಗೀಕರಿಸಿ, ಸಂಗ್ರಹಾಲಯದ ದಾಖಲೆಗಳಲ್ಲಿನ ಮುದ್ರೆಗಳೊಂದಿಗೆ ಹೋಲಿಸಿ ನೋಡಲಾಗುತ್ತದೆ. ಪ್ರಸ್ತುತ ಪ್ರಕರಣದಲ್ಲಿನ ಕೊಲೆಗೈಯಲ್ಪಟ್ಟ ವ್ಯಕ್ತಿ ಒಬ್ಬ ಹಳೆಯ ಅಪರಾಧಿಯಾಗಿದ್ದ. ೧೯೭೩ರಲ್ಲಿ ಶಿಕ್ಷೆಯನ್ನೂ ಅನುಭವಿಸಿದ್ದ. ಆತನ ಗುರುತು, ಹೆಸರು, ವಿಳಾಸಗಳನ್ನು ತನಿಖಾಧಿಕಾರಿಗೆ ತಿಳಿಸಲಾಯಿತು. ಮುಂದಿನ ಕಾನೂನು ಪ್ರಕ್ರಿಯೆಯಲ್ಲಿ ಬೆರಳು ಮುದ್ರೆ ತಜ್ಞರ ಸಾಕ್ಷಿಯು ಪ್ರಮುಖವಾಗಿ ಪಾತಕಿಗೆ ಶಿಕ್ಷೆ ವಿಧಿಸುವಲ್ಲಿ ನೆರವಾಯಿತು.

೧೯೮೮ ರ ಜೂನ್ ತಿಂಗಳು. ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲೂಕಿನ ಹೊಸಕೆರೆಯ ಹತ್ತಿರದ ಕಾಡಿನಲ್ಲಿ ಅಪರಿಚಿತ ಶವ ಕಂಡುಬಂತು. ಖಂಡಿತವಾಗಿಯೂ ಅದೊಂದು ಕೊಲೆಯೆ. ಮೃತನ ಗುರುತು ಹಿಡಿಯುವುದು ತನಿಖಾಧಿಕಾರಿಗಳಿಗೆ ಸಾಧ್ಯವಾಗದ್ದರಿಂದ ನನ್ನ ನೆರವು ಕೋರಿದರು. ಶವದ ಬೆರಳು ಮುದ್ರೆ ಪಡೆದುಕೊಂಡೆ. ತನಿಖಾಧಿಕಾರಿ ಯಾವುದೋ ಗುಮಾನಿಯ ಮೇಲೆ ಈ ಶವ ಶಿವಮೊಗ್ಗವಾಸಿ ವ್ಯಕ್ತಿಯದಾಗಿರಬಹುದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಹಾಗೂ ಅದೇ ಜಾಡಿನಲ್ಲಿ ಧೋಬಿ, ಸಿಂಪಿಗ ಹಾಗೂ ಮೃತನ ಪತ್ನಿಯನ್ನು ಕರೆಸಿ ಗುರುತಿಸಲು ಕೇಳಿಕೊಂಡರು. ಅವರಾರೂ ಮೃತನನ್ನು ಗುರುತಿಸಲಿಲ್ಲ. ಶಿವಮೊಗ್ಗ ತಾಲೂಕು ನೋಂದಣಿ ಅಧಿಕಾರಿಯ ಕಚೇರಿಯಲ್ಲಿ ನೋಂದಾಯಿಸಲ್ಪಟ್ಟ ಕ್ರಯ ಪತ್ರಗಳನ್ನು ಪಡೆದು ಮೃತವ್ಯಕ್ತಿಯ ಬೆರಳು ಮುದ್ರೆಗಳನ್ನು ಅದರಲ್ಲಿನ ಎಡಗೈ ಹೆಬ್ಬೆರಳಿನ ಗುರುತಿನೊಂದಿಗೆ ಹೋಲಿಸಿ ನೋಡಿದೆ. ಅವುಗಳಲ್ಲಿ ಅನನ್ಯ ಹೋಲಿಕೆಯಿತ್ತು. ಮುಂದೆ ಈ ಅಭಿಪ್ರಾಯದಂತೆ ತನಿಖಾಧಿಕಾರಿ ಕೊಲೆ ಅಪರಾಧವನ್ನು ಪತ್ತೆ ಹಚ್ಚಿ ಆರೋಪಿಗಳನ್ನು ದಸ್ತಗಿರಿ ಮಾಡಿದರು.

ಕೆಲವು ಸಂದರ್ಭಗಳಲ್ಲಿ ಅಪರಿಚಿತ ವ್ಯಕ್ತಿಯ ಸಾವಿನ ಪ್ರಕರಣಗಳಲ್ಲಿ ಕತ್ತರಿಸಲ್ಪಟ್ಟು ಕಳಿಸಲ್ಪಟ್ಟ ಬೆರಳ ತುಂಡುಗಳಿಂದ ಮುದ್ರೆಗಳನ್ನು ಪಡೆಯುವುದು ಕಷ್ಟ ಸಾಧ್ಯವೆನಿಸುತ್ತದೆ. ಇದಕ್ಕೆ ಕಾರಣವೆಂದರೆ ವಹಿಸಬೇಕಾದ ಎಚ್ಚರಿಕೆಯೆಡೆ ಗಮನ ಕೊಡದೆ ಬೆರಳು ತುಂಡುಗಳನ್ನು ಬಾಟಲಲ್ಲಿ ತುಂಬಿ ಕಳಿಸುವುದು. ಹೀಗಾದಾಗ ಸೂಕ್ತ ದ್ರಾವಣವಿಲ್ಲದೆ ಬೆರಳ ತುಂಡುಗಳು ಸುಕ್ಕು ಗಟ್ಟಿಯೊ, ಕೊಳೆತೊ ಇಲ್ಲವೆ ನಾರತೊಡಗಿಯೋ ಮುದ್ರೆ ಪಡೆಯುವ ಕ್ರಮ ಲಂಬಿಸಲ್ಪಡುತ್ತದೆ. ಹೀಗಾದಾಗ ಸಾಮಾನ್ಯವಾಗಿ ಮೂರು ಕ್ರಮಗಳನ್ನು ಬೆರಳು ಮುದ್ರೆ ತಜ್ಞರು ಅನುಸರಿಸುತ್ತಾರೆ. ಅದಕ್ಕಾಗಿ ೧) ಮೃದುತ್ವ ಹೊಂದಿದ ಶವ, ೨) ಸೆಟೆದುಕೊಂಡಿರುವ ಶವ ಹಾಗೂ ೩) ಕೊಳೆಯುವ ಸ್ಥಿತಿಯಲ್ಲಿರುವ ಶವ ಎಂದು ಮೂರು ಹಂತಗಳಾಗಿ ಶವಗಳನ್ನು ವಿಂಗಡಿಸುವುದು ರೂಢಿಯಲ್ಲಿರುವ ಶಾಸ್ತ್ರೀಯ ಕ್ರಮ.

ಮೃತ್ಯು ಸಂಭವಿಸಿ ೨೪ ಗಂಟೆಗಳು ಮೀರಿರದಿದ್ದರೆ ಶವ ಮೃದುವಾಗಿದ್ದು, ಅದರ ಕೈ ಬೆರಳುಗಳು ಅಲ್ಲಾಡಿಸಲು ಮತ್ತು ತಿರುಚಾಡಲು ಸುಲಭ. ಹೀಗಿದ್ದಾಗ ನೇರವಾಗಿ ಶವದಿಂದಲೇ ಬೆರಳು ಮುದ್ರೆಗಳನ್ನು ಪಡೆಯಬಹುದು. ಆದರೆ ೨೪ ಗಂಟೆಗಳು ಮೀರಿದ್ದರೆ ಶವ ಸೆಟೆದು ಕೊಳ್ಳಲಾರಂಭಿಸಿರುತ್ತದೆ. ಈ ಸಂದರ್ಭದಲ್ಲಿ ಶವದ ಕೈಕಾಲು ಮತ್ತು ಕೈ ಬೆರಳುಗಳು ಮಡಚಿಕೊಳ್ಳುವ ಸಾಧ್ಯತೆ ಇರುತ್ತದೆ. ಹೀಗಾಗಿ ಬೆರಳ ಮುದ್ರೆ ಪಡೆಯುವುದಕ್ಕೆ ವಿಶಿಷ್ಟ ವಿಧಾನವನ್ನೇ ಅನುಸರಿಸಬೇಕಾಗುತ್ತದೆ. ಸೆಟೆದುಕೊಂಡ ಶವದ ಕೈ ಮತ್ತು ಬೆರಳುಗಳನ್ನು ತಾತ್ಕಾಲಿಕವಾಗಿ ಮೃದುಗೊಳಿಸುವುದೂ ಸಾಧ್ಯ. ಇದಕ್ಕೆ ಕ್ಲೇವಿಯರ್ ಡಿಸಿಲ್ವಾ ವಿಧಾನವೆಂದು ಕರೆಯಲಾಗುತ್ತದೆ. ಬಿಸಿನೀರಿನಲ್ಲಿ ಶವದ ಕೈ ಮತ್ತು ಬೆರಳುಗಳನ್ನು ಕೆಲ ಸಮಯ ಅದ್ದಿದರೆ ಅವು ಮೆದುವಾಗಿ ಅವುಗಳ ಮುದ್ರೆ ಪಡೆಯಲು ಅನುಕೂಲವಾಗುತ್ತದೆ.

ಇನ್ನು ಕೆಲವೆಡೆ ಸೆಟೆದುಕೊಂಡ ಶವದ ಕೈ

**ಅಪಶಕುನ**

"ಜೋಯಿಸರೇ
ಎಲ್ಲಿಗೆ?"
ಎಂದು
ಕೇಳಿದ್ದೇ ತಡ
"ಅಪಶಕುನ
ಅಪಶಕುನ"
ಎಂದು ಗೊಣಗುತ
ಇಳಿದರು ಮೆಲ್ಲಗೆ!

• ಎಚ್.ಎಸ್. ಸೋಮಶೇಖರ

ಬೆರಳುಗಳನ್ನು ಮೃದುಗೊಳಿಸುವುದಕ್ಕೆ ಆಗುವುದೇ ಇಲ್ಲ. ಆಗ ಬಲಾತ್ಕಾರ ಕ್ರಮ ಅನಿವಾರ್ಯವಾಗುತ್ತದೆ. ಶಸ್ತ್ರವೈದ್ಯನ ಚೂರಿಯಿಂದ ಬೆರಳಿನ ಎರಡನೆ ಕೂಡುವಿಕೆ ಬಳಿ ಆಳವಾಗಿ ಗಾಯಮಾಡುವುದರಿಂದ ಬೆರಳು ನೆಟ್ಟಗಾಗುತ್ತದೆ.

ಸಾಮಾನ್ಯವಾಗಿ ಬಾವಿ, ಜಲಾಶಯಗಳಲ್ಲಿ ಮುಳುಗಿ ಸತ್ತವನ ದೇಹದ ಬೆರಳ ತುದಿಗಳು ಸುಕ್ಕುಗಟ್ಟಿಕೊಂಡಿರುತ್ತವೆ. ಇಂಥ ಪ್ರಸಂಗಗಳಲ್ಲಿ ಶವದ ಬೆರಳ ಮುದ್ರೆ ಪಡೆಯಲು ಶಾಯಿ ಬಳಿಯುವ ಕ್ರಮ, ಬಿಸಿಯಾದ ದ್ರವರೂಪಿ, ಮೇಣವನ್ನು ಬೆರಳಿನೊಳಗೆ ಇಂಜೆಕ್ಟ್ ಮಾಡುವ ಕ್ರಮಗಳು ಅನುಸರಿಸಲ್ಪಡುತ್ತವೆ.

ಬೆಂಕಿ ಪ್ರಕರಣಗಳಲ್ಲಿ ಸತ್ತವರ ದೇಹದ ಬೆರಳ ಮುದ್ರೆಗಳನ್ನು ತೆಗೆದುಕೊಳ್ಳಬೇಕಾದ ಪ್ರಸಂಗಗಳೂ ಎದುರಾಗುತ್ತವೆ. ಬೆರಳುಗಳ ಮೇಲಿನ ಚರ್ಮವು ಪೂರ್ಣ ಸುಟ್ಟು ಹೋಗಿ ಒಳಗಿನ ಮಾಂಸವೂ ಬೆಂದು ಮೆತ್ತಗಾಗಿಬಿಟ್ಟಿರುತ್ತದೆ. ಇಂಥ ಪ್ರಸಂಗಗಳಲ್ಲಿಯೂ ಬೆರಳು ಮುದ್ರೆಗಳನ್ನು ತೆಗೆದುಕೊಳ್ಳುವ ವಿಧಾನವೂ ಇದೆ.

ಕೊಳೆಯುವ ಹಂತದ ಶವದ ಕೈಬೆರಳ ಮುದ್ರೆಗಳನ್ನು ಪಡೆಯುವುದು ಇನ್ನೂ ದುಸ್ತರಕಾರ್ಯ. ನೇರವಾಗಿ ಅವುಗಳ ಮುದ್ರೆ ಪಡೆಯುವುದು ಸಾಧ್ಯವಾಗದ ಮಾತು. ಹೀಗಾಗಿ ಬೆರಳಿನ ತುದಿಯಲ್ಲಿಯ ಆಕಾರಗಳುಳ್ಳ ಮೇಲ್ಭಾಗದ ಒತ್ತಡ ಚರ್ಮದ ಭಾಗವನ್ನು ಬೆರಳಿನಿಂದ ಬೇರ್ಪಡಿಸುವುದರ ಮೂಲಕ ಮುದ್ರೆಗಳನ್ನು ಪಡೆದುಕೊಳ್ಳಬೇಕಾಗುತ್ತದೆ. ಇದು ಸ್ವಲ್ಪ ಶ್ರಮದ, ತಾಳ್ಮೆಯ ಅಗತ್ಯವಿರುವ ಮತ್ತು ಸವಾಲೊಡ್ಡುವಂಥ ಕ್ರಮ. ಇದಲ್ಲದೆ ಇನ್ನೂ ಒಂದು ಪದ್ಧತಿಯಿದೆ. ಅದೆಂದರೆ ಕೊಳೆಯುವ ಹಂತದಲ್ಲಿರುವ ಶವದ ಬೆರಳುಗಳು ಸೆಟೆದು ಸುಕ್ಕುಗಟ್ಟಿದ್ದರೆ ಸೋಡಿಯಂ ಹೈಡ್ರಾಕ್ಸಾಯ್ಡಿನ ದ್ರವದಲ್ಲಿ ಒಂದೊಂದೇ ಬೆರಳನ್ನು ಅದ್ದಿ ಅದನ್ನು ಮೃದುವಾಗಿಸುವುದು. ಇಲ್ಲಿ ಬೆರಳುಗಳಿಗೆ ಬಾವು ಬರುವುದರಿಂದ ಮುದ್ರಾರೇಖೆಗಳು ಸ್ಪಷ್ಟವಾಗಿ ತೋರಿ ಬರುತ್ತವೆ ಮತ್ತು ನಿಜಸ್ವರೂಪವನ್ನು ಪಡೆಯುತ್ತವೆ.

ಒಂದು ವೇಳೆ ಶವದ ಬೆರಳುಗಳ ರೇಖೆಗಳು ಇರುವ ಹೊರ ಭಾಗವು ಪೂರ್ಣ ಕೊಳೆತು ನಾಶ ಹೊಂದಿದ್ದರೆ ಶಾಯಿಯನ್ನು ಬಳಸಿ ಅವುಗಳ ಮುದ್ರೆಗಳನ್ನು ಪಡೆಯುವುದು ಸಾಧ್ಯವಾಗುವುದಿಲ್ಲ. ಇಂಥ ಸಂದರ್ಭಗಳಲ್ಲಿ ಬೆರಳಿನ ಛಾಯಾಚಿತ್ರ ಪಡೆಯುವುದೊಂದೇ ದಾರಿ. ಬೆರಳಿನ ಒತ್ತಡ ರೇಖೆಗಳ ಭಾಗದ ಚರ್ಮವನ್ನು ಬೆರಳುಗಳಿಂದ ಬೇರ್ಪಡಿಸಿ ಒಂದು ಹಲಗೆಯ ಮೇಲೆ ರೇಖೆಯ ಭಾಗವು ಇರುವಂತೆ ಸರಿಯಾಗಿ ಇರಿಸಿ, ಒಂದು ಕೋನದಿಂದ ಕೇಂದ್ರೀಕೃತ ದೀಪದ ಬೆಳಕನ್ನು ಚೆಲ್ಲಿದರೆ, ಬೆರಳಿನಲ್ಲಿರುವ ಸರವುಗಳು ಸ್ಪಷ್ಟವಾಗಿ ಕಾಣಸಿಗುತ್ತವೆ. ಆಗ ಛಾಯಾಚಿತ್ರ ತೆಗೆದು ಬೆರಳು ಮುದ್ರೆಯ ಚೀಟಿಯ ಮೇಲೆ ಅಂಟಿಸಬೇಕಾಗುತ್ತದೆ. ಇದಲ್ಲದೆ ಇಂಥ ಚರ್ಮದಡಿಗೆ ಶಾಯಿಯನ್ನು ಹರಡಿ ಛಾಯಾಚಿತ್ರ ತೆಗೆದರೆ ರೇಖೆಗಳ ನಿಜ ಸ್ವರೂಪಗಳು ಬರುತ್ತವೆ. ಒಂದು ವೇಳೆ ಬೆರಳಿನ ಮೇಲಿನ ಹೊದಿಕೆಯ ಚರ್ಮ ಪೂರ್ಣ ಕೊಳೆತಿದ್ದರೆ ಆ ಹೊದಿಕೆಯನ್ನು ಬೇರ್ಪಡಿಸಿ ಶಾಯಿಯಿಂದ ಮುದ್ರೆಯನ್ನು ತೆಗೆಯಬಹುದು. ಯಾಕೆಂದರೆ ಚರ್ಮದ ಎರಡನೆ ಹೊದಿಕೆಯೂ ರೇಖೆಗಳಿಂದ ಕೂಡಿರುತ್ತದೆ.

ಈ ಎಲ್ಲ ಕ್ರಮಗಳಿಂದ ನಿಗೂಢ ಸಾವುಗಳ ಹಸ್ಯ ಭೇದಿಸುವುದು ತನಿಖಾಕ್ಷೇತ್ರದಲ್ಲಿರುವವರಿಗೆ ಸಾಧ್ಯವಾಗುತ್ತಿರುವುದು ಅಪರಾಧ ಶೋಧ ವಿಜ್ಞಾನ ನಡೆಸಿದ ಪ್ರಯೋಗಗಳ ಫಲ.



ನಾಸ್ಟಾಲ್ಜಿಯಾ

# ಮತ್ತೆ ಅವತರಿಸಿದ ಮೇನಕೆ

• ವೃಷಭೇಂದ್ರಯ್ಯ

ಹೆಲೆನ್ ಈಗ ಮತ್ತೆ ಕುಣಿಯಲಿದ್ದಾಳೆ.

ಹೌದು. ಒಂದು ಕಾಲದಲ್ಲಿ ತನ್ನ ಮಾದಕ ಕಣ್ಣುಗಳಿಂದ, ಮೋಹಕ ಮೈಮಾಟದಿಂದ, ಕುಣಿತ-ಮಣಿತಗಳಿಂದ ತರುಣ ಹೃದಯಗಳಿಗೆ ಲಗ್ಗೆ ಹಾಕಿದ್ದ ಈ ಮೇನಕೆ ಇದ್ದಕ್ಕಿದ್ದ ಹಾಗೆಯೇ ನೈಪಥ್ಯಕ್ಕೆ ಸರಿದು ದಶಕಕ್ಕೂ ಹೆಚ್ಚು ಕಾಲ ಮರೆತು ಹೋದ ಹೆಸರಾಗಿಬಿಟ್ಟಿದ್ದಳಲ್ಲ. ಆದರೂ ಹಳೆಯ ಚಿತ್ರಗಳು ಬಿಡುಗಡೆಯಾದಾಗಲೆಲ್ಲ ಈ 'ಹಾಲಲಿ ಮಿಂದ'ವಳನ್ನು 'ದಂತದ ಮೈ'ಯವಳನ್ನು ನೋಡಲು ಮಾಜಿ ತರುಣರು ಥಿಯೇಟರುಗಳಿಗೆ ಮುಗಿಬಿದ್ದು ನುಗ್ಗಾಟ ನಡೆಸುವುದೇನೂ ಸುಳ್ಳಲ್ಲ. ಹೆಲೆನ್ ಮತ್ತೆ ಕುಣಿಯಲಿದ್ದಾಳೆಂಬ ಸುದ್ದಿ ಆ ಮಾಜಿ ತರುಣರನ್ನು ಮತ್ತೆ ಅಂಥ ನುಗ್ಗಾಟಕ್ಕೆ ಅಣಿಗೊಳಿಸುತ್ತಿದೆ.

ಆದರೆ ಆಕೆಯ ಪುನರಾಗಮನದಲ್ಲಿ ಗಮನಾರ್ಹ ಬದಲಾವಣೆಯೊಂದಿದೆ. ಹೆಲೆನ್ ಈಗ ಕ್ಯಾಮರಾ ಎದುರಿಸುತ್ತಿರುವುದು ಆ ಹಿಂದಿನ ಕ್ಯಾಬರೆ ಹುಡುಗಿಯಾಗಿ ಅಲ್ಲ. ವಯಸ್ಸಿಗೆ ತಕ್ಕಂಥ ಪಾತ್ರವೊಂದರಲ್ಲಿ. ಹೀಗಂದ ಮಾತ್ರಕ್ಕೆ ನೀವೇನೂ ನಿರಾಶರಾಗಬೇಕಾಗಿಲ್ಲ. ಹೆಲೆನ್ ಇಲ್ಲಿಯೂ ನರ್ತಕಿಯಾಗಿಯೇ ಕಾಣಿಸಿಕೊಳ್ಳಲಿದ್ದಾಳೆ. ಕಾಲು ಶತಮಾನದವರೆಗೆ ಹಿಂದಿ ಚಿತ್ರರಂಗದ ಎಲ್ಲ ವ್ಯಾಂಪ್‌ಗಳ 'ಹಿರಿಯಕ್ಕ'ನೆಂಬ ಗೌರವಕ್ಕೆ (?) ಪಾತ್ರಳಾಗಿದ್ದ ಮತ್ತು ಅದೇ ಹೊತ್ತಿಗೆ ಸಿನಿಕರಿಂದ 'ಕೆಟ್ಟ ಹುಡುಗಿ' ಎಂಬ ಮೂದಲಿಕೆಗೂ ಒಳಗಾಗಿದ್ದ ಹೆಲೆನ್, ಈಗ, ಬದಲಾದ ಪರಿಸರದಲ್ಲಿ ಅಜ್ಜಿಯಾಗಿ ಅಭಿನಯಿಸಲಿದ್ದಾಳೆ.

"ಅಜ್ಜಿಯಾಗಿಯೆ?"

"ಹೌದು ಮತ್ತೆ.... ಇನ್ನೇನು ಅಂದಿನ ಹಾಗೆ ಇಪ್ಪತ್ತು ಇಪ್ಪತ್ತೈದರೊಳಗಿನ ಹುಡುಗಿಯಂತೆ ಕುಣಿಯಲಾಗುತ್ತದೇನು? ನನಗೀಗ ವಯಸ್ಸು ಅರವತ್ತರ ಸಮೀಪಕ್ಕೆ ಬಂದಿದೆ. ನನ್ನ ವಯಸ್ಸಿನ ಮೂರನೆ ಒಂದು ಭಾಗದಷ್ಟು ಪ್ರಾಯದ ನಾಯಕಿಯರೀಗ ಚಿತ್ರರಂಗದಲ್ಲಿ ಆಧಿಪತ್ಯ ನಡೆಸುತ್ತಿದ್ದಾರೆ. ಹೊಸ ಮುಖಗಳಿಗೇ ಈಗಿಲ್ಲಿ ಆದ್ಯತೆಯಿತೆ. ಹಿಂದಿನ ನಾಯಕಿಯರೆಲ್ಲ ಈಗ ಹೇಳಹೆಸರಿಲ್ಲದಂತೆ ಹೋಗಿದ್ದಾರೆ. ಇಂಥದರಲ್ಲಿ ನಮ್ಮಂಥ ನರ್ತಕಿಯರ ಪಾಡೇನು? ಹೀಗಿರುವಾಗ ನನಗೆ ದೀರ್ಘಾವಧಿಯ ಅಜ್ಞಾತವಾಸದ ನಂತರ ಮತ್ತೆ ಕರೆ ಬಂದಿದೆಯಲ್ಲ! ಅದಕ್ಕಿಂತ ದೊಡ್ಡ ಸಮಾಧಾನ ಇನ್ನಾವುದು? ಅಷ್ಟಲ್ಲದೆ ನನಗೆ ಪ್ರಿಯವಾದ ಮತ್ತು ನನಗೊಂದು ಇಮೇಜು ತಂದುಕೊಟ್ಟ ನೃತ್ಯವೇ ಇಲ್ಲಿಯೂ ಒದಗಿ ಬಂದಿದೆ! ಹೌದು

‘ಖಾಮೋಶಿ’ ಎಂಬ ಚಿತ್ರದಲ್ಲಿ ನಾನು ಮನಿಷಾ ಕೊಯಿರಾಲಾಳ ಅಜ್ಜಿಯಾಗಿ ನಟಿಸುತ್ತಲಿದ್ದೇನೆ. ಮಾಜಿ ನರ್ತಕಿಯೊಬ್ಬಳ ಪಾತ್ರ ನನ್ನದು.”

ಹೆಲೆನ್‌ಳ ಈ ಸಮಜಾಯಿಷಿಯಿಂದ ಹೆಚ್ಚು ಖುಷಿಗೊಂಡವರು ಯಾರು ಗೊತ್ತೆ? ‘ತಹಕಿಕಾತ್’ ಧಾರಾವಾಹಿಯ ಸ್ಯಾಮ್ ಡಿಸಿಲ್ವಾ ಉರ್ಫ್ ಗೋಲ್ಡಿ ವಿಜಯ್ ಆನಂದ್. “ವಾವ್.... ಫಿರ್ ತೋ ಬಡಾ ಮಜಾ ಆಯೇಗಾ,” ಎಂದೆನ್ನುವ ಈ ಕನಿಷ್ಠಾನಂದ (ಆನಂದ್ ಸೋದರರಲ್ಲಿ ಮೂರನೆಯವರು ಗೋಲ್ಡಿ) ತಮ್ಮ ‘ನೌ ದೋ ಗ್ಯಾರಹ’ದ ದಿನಗಳನ್ನೂ ಆಗಿನ ಹೆಲೆನ್‌ಳನ್ನೂ ನೆನೆಯುತ್ತಾರೆ. ಅವರ ಕಣ್ಣ ಮುಂದೆ ‘ಮಯೂರ ಪಂಖ್,’ ‘ಚೈನಾ ಟೌನ್,’ ‘ಇಂತೆಕಾಮ್’ ‘ಜಂಗ್ಲಿ’ ‘ಪ್ರಿನ್ಸ್’ ‘ಗುಮ್‌ನಾಮ್’ ‘ಲಹೂ ಕೆ ದೋ ರಂಗ್’ ‘ಸಿಂಗಪೂರ್’ ‘ಶೋಲೆ’ ‘ಜ್ಯೂಎಲ್ ತೀಫ್’ ನಂಥ ಚಿತ್ರಗಳಲ್ಲಿನ ಹೆಲೆನ್ ಕುಣಿತಗಳು ಪ್ರತ್ಯಕ್ಷವಾಗುತ್ತವೆ.

ನಮ್ಮ ಹಿಂದಿ ಸಿನೆಮಾಗಳಲ್ಲಿ ಅನೇಕ ನರ್ತಕಿಯರೆಲ್ಲ ಬಂದರು ಹೋದರು. ಆದರೆ ಹೆಲೆನ್‌ಳಂತೆ ‘ಉಳಿದವರು’ ಮಾತ್ರ ಅಪರೂಪ. ಹೇಳ





ಹೆಸರಿಲ್ಲದಂತೆ ಆ ನರ್ತಕಿಯರೆಲ್ಲ ತೆರೆಯಿಂದ ದೂರ ಸರಿದುದರ ಕಾರಣ ಸ್ಪಷ್ಟವೇ ಇದೆ. ಅವರೆಲ್ಲ ಕೆಲವು ಚಿತ್ರಗಳಲ್ಲಿ ಬೇಕೆಂದೇ ತುರುಕಲ್ಪಟ್ಟ ಕ್ಯಾಬರೆ ಅಥವಾ ಅಂಥ ಮಾದರಿಯ ನೃತ್ಯ ದೃಶ್ಯಗಳಿಗೆಂದೇ ಕರೆಸಲ್ಪಟ್ಟಂಥವರಾಗಿರುತ್ತಿದ್ದುದು ಒಂದು ಕಾರಣ ವಾದರೆ ಚಿತ್ರದ ವಸ್ತುವಿಗೂ ಆ ನೃತ್ಯ ದೃಶ್ಯಗಳಿಗೂ ಯಾವುದೇ ಸಂಬಂಧವಿರದಿರುತ್ತಿದ್ದುದು ಇನ್ನೊಂದು ಕಾರಣ. ಹೀಗಾಗಿ ಸಿನಿಮಾ ಥಿಯೇಟರಿನಿಂದ ಹೊರಬಂದವರಿಗೆ ಆ ನರ್ತಕಿಯರ ನೆನಪೂ ಉಳಿಯದಿದ್ದಷ್ಟು ನಗಣ್ಯವಾಗಿರುತ್ತಿದ್ದವು

ಆ ಪಾತ್ರಗಳು.

ಆದರೆ ಹೆಲೆನ್ ಹಾಗಲ್ಲ. ಆಕೆ ಕ್ಯಾಬರೆ ನಟಿಯಾಗಿ ಕಾಣಿಸಿಕೊಂಡರೂ ಆಕೆಯ ಪಾತ್ರ ಇಡೀ ಕಥೆಯೊಂದಿಗೆ ತಳಕು ಹಾಕಿಕೊಂಡಿರುತ್ತಿತ್ತು; ಇಲ್ಲವೆ ಸದಾಕಾಲ ನೆನಪಿನಲ್ಲುಳಿಯಬಲ್ಲ ಹಾಡೊಂದು ಆಕೆಗಾಗಿ ಸಂಯೋಜಿಸಲ್ಪಟ್ಟಿರುತ್ತಿತ್ತು. ಅದಕ್ಕೂ ಮುಖ್ಯವಾಗಿ ಯಾವುದೇ ರೀತಿಯ ನೃತ್ಯಶೈಲಿಗೂ ತನ್ನನ್ನು ಒಗ್ಗಿಸಿಕೊಳ್ಳಬಲ್ಲ ಜಾಣ್ಮೆ ಮತ್ತು ಆ ದೃಶ್ಯಕ್ಕಾಗಿ ಆಕೆ ತೋರುತ್ತಿದ್ದ ಅರ್ಪಣಾ ಮನೋಭಾವಗಳು ಇಡೀ ಚಿತ್ರಕ್ಕೊಂದು ಪ್ಲಸ್ ಪಾಯಿಂಟಾಗಿಬಿಡುತ್ತಿದ್ದವು.

ಬರ್ಮಾ ಮೂಲದ ಈ ಆ್ಯಂಗ್ಲೋ ಹುಡುಗಿ ನಲವತ್ತು ವರ್ಷಗಳ ಹಿಂದೆ ಮೊದಲ ಬಾರಿಗೆ ಕ್ಯಾಮರಾ ಎದುರಿಸಿದಾಗ, ಭಾರತೀಯ ಚಲನಚಿತ್ರಗಳ ಅವಿಭಾಜ್ಯ ಅಂಗವೆನಿಸಿದ ನರ್ತನಕ್ಕೊಂದು ಹೊಸ ಅರ್ಥ, ಹೊಸ ಭರವಸೆ ನೀಡಲು ಬದ್ಧಳಾದಳು. ಎಂಥ ಆಹ್ವಾನವನ್ನೂ ಸ್ವೀಕರಿಸಲು ಸಿದ್ಧಳಾದಳು. ಹೀಗಾಗಿ ಹಣ ಆಕೆಗೆ ಮುಖ್ಯವಾಗಲೇ ಇಲ್ಲ. ಆದರೆ ಅವಳ ಈ 'ಔದಾರ್ಯ'ವೇ ಮುಂದೆ ಆಕೆಗೆ ಕುತ್ತಾಯಿತು. ಹೆಲೆನ್ ತನಗೆ ಇಷ್ಟೇ ಹಣ ಕೊಡಬೇಕೆಂದು ಎಂದೂ ಹಟ ಹಿಡಿದವಳಲ್ಲ. ಎಡೆಬಿಡದೇ ಸ್ಪಾಟ್ ಲೈಟಿಗೆ ತನ್ನನ್ನು ಒಡ್ಡಿಕೊಂಡರೂ, ಮೂರು ಮೂರು ಶಿಫ್ಟ್‌ಗಳಲ್ಲಿ ದುಡಿದರೂ ಯಾವುದಕ್ಕೂ ಕರಾರು-ತಕರಾರು ಮಾಡಿದವಳಲ್ಲ. ಅವಳ ಈ ಸಹಕಾರ ಮನೋಭಾವವನ್ನು ಸ್ವಾಹಾಕಾರ ಮನೋಭಾವದ ನಿರ್ಮಾಪಕರು ದುರುಪಯೋಗಪಡಿಸಿಕೊಂಡರೂ ಹೆಲೆನ್‌ಗೆ ಅದು ಗೊತ್ತಾಗಲೇ ಇಲ್ಲ. ಅಂತೆಯೆ ಸರಿಸುಮಾರು ೭೦೦ಕ್ಕೂ ಹೆಚ್ಚು ಚಿತ್ರಗಳಲ್ಲಿ ನಟಿಸಿಯೂ ಹೆಲೆನ್ ಬದುಕು ಸಾಗಿಸಿದ್ದು ಮಧ್ಯಮವರ್ಗದ ಮಹಿಳೆಯಂತೆಯೆ. ಇಷ್ಟೆಲ್ಲ ಚಿತ್ರಗಳಲ್ಲಿ ನಟಿಸಿ ಆಕೆ ಪಡೆದ ಸಂಭಾವನೆ ಈಗಿನ ನಾಲ್ಕಾರು ಚಿತ್ರಗಳ ನಾಯಕಿ ಪಡೆಯುವ ಒಟ್ಟು ಹಣಕ್ಕಿಂತ ಎಷ್ಟೋ ಪಟ್ಟು ಕಮ್ಮಿ.

ಫಾರ್ಮುಲಾ ಚಿತ್ರಗಳಿಂದ ಬೇಸತ್ತಿದ್ದ ಪ್ರೇಕ್ಷಕನಿಗೆ ಹೊಸ ರೀತಿಯ ನಿರೂಪಣೆ ನೀಡಲು ಯೋಚಿಸಿದ ನಿರ್ದೇಶಕರು ನಾಯಕಿಯರನ್ನು ಕುಣಿಯಲು ಹಚ್ಚಿದ ಮೇಲೆ ಕೇವಲ ಕುಣಿಯಲೆಂದೇ ಹುಟ್ಟಿ ಬಂದವರ ಪಾಡೇನು ಎಂಬುದನ್ನಷ್ಟು ಯೋಚಿಸಿ. ಹೆಲೆನ್‌ಗೆ ಆದದ್ದೂ ಅದೇ ಗತಿ. 'ಇಂತೆಕಾಮ್'ನಲ್ಲಿ ಸಂಜಯ್‌ಖಾನ್ ಎದುರು ಸಾಧನಾ ಕುಡಿದು 'ಕೈಸೆ ರಹೂ ಚುಪ್ ಕೆ ಮೈನೆ ಪೀ ಹಿ ಕ್ಯಾ ಹೈ' ಎಂದು ಹಾಡಿಕೊಂಡು ಹೊರಳಾಡಿದರೂ ಹೆಲೆನ್ ಹೆದರಲಿಲ್ಲ. ಅದೇ ಚಿತ್ರದಲ್ಲಿ ಕ್ಯಾಬರೆ ದೃಶ್ಯದಲ್ಲಿ ವಿಭಿನ್ನವಾದೊಂದು ಶೈಲಿಯನ್ನಾಕೆ ಪರಿಚಯಿಸಿಬಿಟ್ಟಳು. 'ಆ ಜಾನೆ ಜಾನ್ ಆ ಮೇರಾ ಎ ಹುಸ್ನ ಜವಾನ್' ಎಂಬ ಹಾಡು ಹಸಿರಾಗಿರುವಂಥ ಅಭಿನಯವನ್ನಾಕೆ ನೀಡಿದಳು. 'ಇಂತೆಕಾಮ್' ಹೆಲೆನ್‌ಳ ೫೦೦ನೆಯ ಚಿತ್ರ. ಆ ಹೆಮ್ಮೆಯಲ್ಲಿ ಆಕೆ "ನಾನು ಅರ್ಧ ಸಹಸ್ರ ಚಿತ್ರಗಳ ನರ್ತಕಿ" ಎಂದೆಲ್ಲ ಪ್ರಕಟಿಸಿಬಿಟ್ಟದ್ದೇ ದೊಡ್ಡ ಪ್ರಮಾದವಾಯಿತು. "ಐದುನೂರು ಚಿತ್ರಗಳಲ್ಲಿ ಕುಣಿದಿದ್ದಾಳೆಂದ ಮೇಲೆ ಈಕೆ ಸಾಕಷ್ಟು ದಣಿದಿದ್ದಾಳೆ. ಇನ್ನು ಹೊಸ ಹುಡುಗಿಯರಿಗೆ ಅವಕಾಶ ಕೊಡೋಣ" ಎಂದು ನಿರ್ಧರಿಸಿಬಿಟ್ಟಿರಬೇಕು ನಿರ್ಮಾಪಕರು. ಹೆಲೆನ್‌ಗೆ ಬೇಡಿಕೆ ಕಡಿಮೆಯಾಗತೊಡಗಿತು.

ನಿರ್ಮಾಪಕರುಗಳ ಲೆಕ್ಕಾಚಾರವೇನೇ ಇದ್ದರೂ ಪ್ರೇಕ್ಷಕರ ಬಯಕೆ ಮಾತ್ರ ಹಿಂಗಲಿಲ್ಲ. ಅವರಿಗೆ ಮತ್ತೆ ಮತ್ತೆ ಹೆಲೆನ್‌ಳನ್ನು ಕಾಣುವ ತವಕ. ಆದರೆ ಈಗಿನಂತೆ ದೂರದರ್ಶನವಿನ್ನೂ ಆಗ ಮನೆ-ಮನಗಳನ್ನು ಆಕ್ರಮಿಸಿರಲಿಲ್ಲ. ಆಡಿಯೋ ಕ್ಯಾಸೆಟ್ಟುಗಳು ಆಗಷ್ಟೇ ಹೊಸ ಫ್ಯಾಶನ್ನುಗಳಾಗಿದ್ದವು. ಹೆಲೆನ್ ನಟಿಸಿದ ಚಿತ್ರಗಳ ಹಾಡುಗಳನ್ನು ಟೇಪ್‌ರೆಕಾರ್ಡರ್‌ನಲ್ಲಿ ಕೇಳುತ್ತ ಕಣ್ಣೆದುರು ಆ ಕುಣಿತದ ದೃಶ್ಯಗಳನ್ನು ತಂದುಕೊಂಡು ಆನಂದಿಸಿದವರ ಸಂಖ್ಯೆ ಇಷ್ಟೇ ಎಂದು ಹೇಳಲು ಸಾಧ್ಯವೆ? ಆಶಾ ಹಾಡಿದ ಗೀತೆಯೇ ಆದರೂ ಅವರ ಮನದಲ್ಲಿ ಅದಕ್ಕೆ ತುಟಿ ಅಲುಗಿಸಿ ಮೈಕುಲುಕಿಸಿದ ಹೆಲೆನ್‌ಳೇ ತುಂಬಿಕೊಂಡಿರುತ್ತಿದ್ದಳು.

ಈಗ?

ಈಗ ಹತ್ತಾರು ಚಾನಲ್ಲುಗಳನ್ನು ಹೊತ್ತು ತರುವ ಮಾಯಾಪೆಟ್ಟಿಗೆ ಮನೆಗಳನ್ನಲಂಕರಿಸಿದೆ. ಎಡೆಬಿಡದೆ ಹಳೆಯ ಮತ್ತು ಹೊಸ ಚಿತ್ರಗಳ ಗೀತ ದೃಶ್ಯಗಳನ್ನು ಬಿತ್ತರಿಸುವ ಕ್ರಮವೂ ಶುರುವಾಗಿದೆ. ವಾರಕ್ಕೆ ಸರಿ ಸುಮಾರು ಮೂವತ್ತರಷ್ಟು ಚಲನಚಿ

ತ್ರಗಳನ್ನು ಪ್ರಸಾರಗೊಳಿಸುವ ಯೋಜನೆಯೂ ಕಾರ್ಯರೂಪಕ್ಕೆ ಬಂದಿದೆ. ಈ ಸುಗ್ಗಿಯಲ್ಲಿ ಹಿಗ್ಗುತ್ತಿರುವ ಪ್ರೇಕ್ಷಕನಿಗೆ ಹೆಲೆನ್ ದೃಶ್ಯಗಳು ಬಂದರಂತೂ ಉಮ್ಮೇದು ಇಮ್ಮಡಿಸುತ್ತದೆ. ನೂತನ್-ದೇವಾನಂದ್ ಜೋಡಿಯ 'ಬಾರಿಶ್'ನಲ್ಲಿನ 'ಏ. ಜಾನ್ ಯಾ ಬಾಬಾಖಾನ್ ಯಾ ಲಾಲಾ ರೋಶನದಾಸ್' ಹಾಡಿಗೆ ಹೆಲೆನ್ ಹೆಜ್ಜೆಹಾಕಿದ್ದು ಕಂಡಾಗ ನೋಡುವಾತ ಕೂತಲ್ಲೇ ನವಿಲಾಗುತ್ತಾನೆ. ೧೯೫೭ರಷ್ಟು ಹಿಂದಿನ ಆ ದೃಶ್ಯ ಹೆಲೆನ್‌ಳಿಂದಾಗಿ ಇಂದಿಗೂ ಹೊಸ ಅನುಭವ ನೀಡುವಂಥದ್ದಾಗಿದೆ. 'ಶೋಲೆ'ಯ 'ಮೆಹಬೂಬಾ ಮೆಹಬೂಬಾ' ಹಾಡಿನಲ್ಲಿ ರಾಹುಲ್ ಧ್ವನಿ ಮತ್ತು ಹೆಲೆನ್ ಕುಣಿತದ ಬನಿ ಚಿರನೂತನ. 'ಕಾರವಾನ್' ಚಿತ್ರದ 'ಪಿಯಾ ತೂ ಅಬ್ ತೋ ಆಜಾ' ಎಂಬ ಹಾಡು ಕಂಡು ಕೇಳಿದಾಗಲೆಲ್ಲ ಎದುರಿಗಿರುವಾತ ತಾನೇ ಆ ಪ್ರಿಯಕರನೆಂಬಷ್ಟು ಸಂಭ್ರಮಿಸುತ್ತಾನೆ.

ಈ ಜೇಂಗೊಡ ಖಾಲಿಯಾಯಿತೆಂದು ಕೊಂಡು ನಿರ್ಲಕ್ಷಿಸಿದ ನಿರ್ಮಾಪಕರು ಜೇನಿನ ಹೆಸರಿನಲ್ಲಿ ಕಾಕಂಬಿಯನ್ನೇ ಹಂಚತೊಡಗಿದರು. ಹೆಲೆನ್ ಆ ಇಪ್ಪತ್ತೈದು ವರ್ಷಗಳಲ್ಲಿ ಗಳಿಸಿದ ಹಣ-ಹೆಸರಿನ ನೆನಪಿನಲ್ಲೇ ಬಾಳು ಸಾಗಿಸತೊಡಗಿದಾಗ ಆಕೆಯ ಬಳಿ ಬಂದಾತ ನಿರ್ಮಾಪಕ ಪಿ.ಎನ್. ಅರೋರಾ. ಚಿತ್ರದಲ್ಲಿ ಪಾತ್ರಕೊಡಲು ಬಂದಾತನಲ್ಲ ಆತ; ಆಕೆಯ ಬಾಳಿನಲ್ಲಿ ಪಾಲು ಕೇಳಲು ಬಂದವ. ಆಕೆಯನ್ನು 'ಹೆಂಡತಿ'ಯಂತೆ ನಡೆಸಿಕೊಳ್ಳದೇ ಹಣವನ್ನೆಲ್ಲ ಸೂರೆಗೈದು ಬೆನ್ನು ತೋರಿಸಿ ಹೋಗಿಬಿಟ್ಟ. ಹೆಲೆನ್‌ಗೆ ಇದು ಮತ್ತೊಂದು ಆಘಾತ. ಬದುಕು ದುರ್ಭರವಾಯಿತು. ಆಗ ಇವಳ ಕೈ ಹಿಡಿದಾತ ಸಂಭಾಷಣಕಾರ ಸಲೀಂ. ನೆಮ್ಮದಿಯಿಂದ ಬಾಳತೊಡಗಿದ ಹೆಲೆನ್‌ಗೆ ಗತನೆನಪುಗಳೇ ಆಧಾರವಾದವು.

ಬಹುದಿನಗಳ ಮೌನವನ್ನು 'ಖಾಮೋಶಿ'ಯ ಮೂಲಕ ಮುರಿದಿರುವ ಹೆಲೆನ್ ಮತ್ತೆ ಮಾತಾಡತೊಡಗಿದ್ದು ಆಕೆಯ ಅಭಿಮಾನಿಗಳಿಗೆ ಖಂಡಿತ ಸಮಾಧಾನದ ಸಂಗತಿ. ●

## ವೃದ್ಧರ ಸವಾಲು

ಡಾ. ನಾ. ಕಸ್ತೂರಿಯವರು ದಾವಣಗೆರೆ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದ ಕಾಲದಲ್ಲಿ ನಡೆದ ಪ್ರಸಂಗ.

ಒಮ್ಮೆ ಪ್ರಾಧ್ಯಾಪಕರ ಮಾಸಿಕ ಅಧ್ಯಯನ ಸಭೆ ನಡೆಯುತ್ತಿತ್ತು. ನಾ. ಕಸ್ತೂರಿಯವರು ಕೆಲವಾರು ಹೊಸ ಯೋಜನೆಗಳನ್ನು ಸಲಹೆಯ ರೂಪದಲ್ಲಿ ಮಂಡಿಸುತ್ತಿದ್ದರು. ಕೆಲವು ವಯಸ್ಸಾದ ಪ್ರಾಧ್ಯಾಪಕರು ಒಪ್ಪಿ ಅನುಮೋದಿಸುತ್ತಿದ್ದರೆ ಯುವ ಪ್ರಾಧ್ಯಾಪಕರು ಗೊಣಗುತ್ತಾ ವಿರೋಧಿಸುತ್ತಿದ್ದರು. ಇದನ್ನು ಗಮನಿಸಿದ ಕಸ್ತೂರಿಯವರು ಅವರನ್ನು ಛೇಡಿಸಬೇಕೆಂದು, "ನೋಡಿ! ಯುವಕರಾದ ನೀವು ಈ ರೀತಿ ಹಿಂದೆಗೆಯಬಾರದು, ಈ ಇಳಿವಯಸ್ಸಿನಲ್ಲೂ ನಾನು ಮಾಡಬಲ್ಲ ಕೆಲಸಗಳನ್ನು ನೀವು ಮಾಡಲಾರಿರಿ," ಎಂದು ಹೇಳಿಬಿಟ್ಟರು.

ಯುವಕರಿಗೆ ಸ್ವಾಭಿಮಾನ ಕೆದಕಿದಂತಾಯಿತು. ಅವರೂ ಸವಾಲ್ ಹಾಕಿದರು, "ಅದೇನ್ ಸ್ವಾಮಿ, ಹೇಳಿ, ನೀವು ಮಾಡುವ ಕೆಲಸವನ್ನು? ಸುಲಭದಲ್ಲಿ ನಾವೂ ಮಾಡಿತೋರಿಸಬಲ್ಲೆವು. ಆದರೆ ನೀವು ಸೋತರೆ ನಮಗೆಲ್ಲರಿಗೂ ಮೇಜವಾನಿ ಮಾಡಿಸಬಲ್ಲಿರಾ?" ಎಂದರು.

ಕಸ್ತೂರಿಯವರು ಕೂಡಲೇ ಒಪ್ಪಿಕೊಂಡರು.

ಯುವಕರು ನೋಡನೋಡುತ್ತಿರುವಂತೆಯೇ ಕಸ್ತೂರಿಯವರು ತಮ್ಮ ಬಾಯಿಂದ ದಂತ ಪಂಕ್ತಿಗಳನ್ನು ಕಿತ್ತು ಮೇಜಿನಮೇಲಿಟ್ಟರು. "ಅದೆಲ್ಲಿ! ಈಗ ನೀವು ಈ ಕೆಲಸ ಮಾಡಿ ತೋರಿಸಬಲ್ಲಿರಾ?" ಎಂದರು ಬೀಗುತ್ತಾ. ಯುವಕರು ಜೋಲು ಮುಖ ಹಾಕಿದರು. ಸಭೆಯಲ್ಲಿ ನಗೆಯು ಅಲೆ-ಅಲೆಯಾಗಿ ಹರಡಿತು. ಕಸ್ತೂರಿಯವರು ಹಲ್ಲನ್ನು ಕಟ್ಟಿಸಿಕೊಂಡಿದ್ದರು.

● ಮೈ. ಗೋಪಾಲಜೇಯರ್

# ಅಚ್ಚಳಿಯದ ಪುಟಗಳು

## "...ಅಮೆರಿಕ ಯಾತ್ರೆ"

*ಎ.ಎನ್. ಮೂರ್ತಿರಾಯರ ಈ ಪ್ರವಾಸ ಕಥನ ಕೇವಲ ದೇಶಸಂಚಾರದ ಅನುಭವಗಳ ಗುಚ್ಛವಲ್ಲ. ನಾಗರಿಕತೆ-ಅನಾಗರಿಕತೆ, ಪರಿಸರ ಮುಂತಾದ ಹತ್ತು ಹಲವು ವಿಚಾರಗಳಲ್ಲಿ ನಮ್ಮನ್ನು ತಟ್ಟಿ ಎಬ್ಬಿಸುತ್ತವೆ. (ಪ್ರಕಾಶನ: ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪.)*

ಪರಿಸರ ವಿಜ್ಞಾನಿಗಳು ಇಂದು ಕೊಡುತ್ತಿರುವ ಎಚ್ಚರಿಕೆಯನ್ನು 'ಅನಾಗರಿಕ' ಕೆಂಪುಜನರ ನಾಯಕನೊಬ್ಬ ೧೮೫೫ರಲ್ಲೇ ಕೊಟ್ಟನೆಂದರೆ ನಂಬುವುದು ಕಷ್ಟ! ಆದರೂ ಅವನು ಕೊಟ್ಟದ್ದು ನಿಜ. ವಾಶಿಂಗ್ಟನ್ ರಾಜ್ಯದಲ್ಲಿದ್ದ ಸುನಾಮಿಷ್ ಇಂಡಿಯನ್ ಬಣದ ಆ ನಾಯಕನ ಹೆಸರು ಸೀಯಾಟ್ಲ್. ಅವನ ಹೆಸರಿನ ಅಮೆರಿಕನ್ ರೂಪವನ್ನೇ ಸೀಯಾಟ್ಲ್ ನಗರಕ್ಕೆ ಇಟ್ಟಿದ್ದಾರೆ. ಆಗ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ ಫ್ರಾಂಕ್ಲಿನ್ ಪಿಯರ್ಸ್ ಸೀಯಾಟ್ಲ್‌ಗೆ, "ನಿಮ್ಮ ಬಣಕ್ಕೆ ಸೇರಿರುವ ಜಮೀನನ್ನು ನಮಗೆ ಖರೀದಿಗೆ ಕೊಡಿ," ಎಂದು ಕಾಗದ ಬರೆದರಂತೆ. ಆ ಕಾಗದಕ್ಕೆ ಸೀಯಾಟ್ಲ್ ಬರೆದ ಉತ್ತರದಲ್ಲಿ ಎದ್ದು ತೋರುವ ಆತ್ಮಗೌರವ, ದ್ವೇಷಕ್ಕಾಗಲಿ ಗೋಳುಕರೆಗಾಗಲಿ ಇಳಿಯದೆ ಅಪ್ರಿಯ ಸತ್ಯವನ್ನು ಕಂಡು ಕಾಣಿಸುವ ಆತ್ಮಪ್ರಾಮಾಣಿಕತೆ, ಭವಿಷ್ಯದೃಷ್ಟಿ, ಆಡಂಬರವಿಲ್ಲದ ಕವಿ ಸಹಜವಾದ ಮನೋವೃತ್ತಿ ಇವು ನನ್ನನ್ನು ಬೆರಗುಗೊಳಿಸಿದುವು. ಆ ಪತ್ರದ ಕೆಲವು ಭಾಗಗಳನ್ನು ಇಲ್ಲಿ ಅನುವಾದಿಸಿದ್ದೇನೆ.

"ವಾಶಿಂಗ್ಟನ್ನಿನಲ್ಲಿರುವ ಮಹಾನಾಯಕರು ಹೇಳಿ ಕಳಿಸಿದ್ದಾರೆ, 'ನಿಮ್ಮ ಭೂಮಿಯನ್ನು ಕೊಳ್ಳುತ್ತೇವೆ' ಎಂದು. ಮಹಾನಾಯಕರು ಸ್ನೇಹದ ಸದ್ಭಾವನೆಯ ಸಂದೇಶವನ್ನೂ ಕಳಿಸಿದ್ದಾರೆ. ಇದು ಅವರಲ್ಲಿರುವ ಸೌಜನ್ಯ. ಆ ಸ್ನೇಹಕ್ಕೆ ಪ್ರತಿಯಾಗಿ ಅವರಿಗೆ ನಮ್ಮ ಸ್ನೇಹದ ಅವಶ್ಯಕತೆಯೇನೂ ಇಲ್ಲ. ಇದನ್ನು ನಾವು ಬಲ್ಲೆವು.

"ನಾವು ನಿಮ್ಮ ಕೇಳಿಕೆಗೆ ಗಮನ ಕೊಡುತ್ತೇವೆ. ಹಾಗೆ ಮಾಡದಿದ್ದರೆ ಬಿಳಿಯ ಜನ ಬಂದೂಕು ಸಹಿತ ಬಂದು ನಮ್ಮ ಭೂಮಿಯನ್ನು ವಶಪಡಿಸಿಕೊಳ್ಳಬಹುದು. ಇದನ್ನು ನಾವು ಬಲ್ಲೆವು.

"ಅಂತರಿಕ್ಷವನ್ನೂ ಭೂಮಿತಾಯಿಯ ಮಡಿಲ ಸುಖೋಷ್ಣವನ್ನೂ ಮಾರುವುದು ಹೇಗೆ? ಈ ಯೋಚನೆಯೇ ನಮಗೆ ವಿಚಿತ್ರವಾಗಿ ಕಾಣುತ್ತದೆ. ಗಾಳಿಯ ಆಪ್ಯಾಯನದ ಮೇಲಾಗಲಿ ನೀರಿನ ಚಂಚಲ ಕಾಂತಿಯ ಮೇಲಾಗಲಿ ನಾವಿನ್ನೂ ಒಡೆತನವನ್ನು ಸಾಧಿಸಿಲ್ಲ. ಅವನ್ನು ನಮ್ಮಿಂದ ಹೇಗೆ ತಾನೆ ಕೊಂಡೀರಿ? ಈ ನೆಲದ ಪ್ರತಿ ಅಂಗುಲವೂ ನನ್ನ ಜನಕ್ಕೆ ಪವಿತ್ರ. ಹೊಳೆಯುವ ಪೈನ್‌ಸೂಜಿ (ಪೈನ್ ಮರದ ಎಲೆ), ಮರಳು ತೀರ, ಕತ್ತಲ ಕಾಡಿನಲ್ಲಿ ಕವಿಯುವ ಮಂಜು, ತೆರವಾದ ವನಸ್ಥಲ, ಗುಂಯ್‌ಗುಟ್ಟುವ ಕೀಟ, ಪ್ರತಿಯೊಂದಕ್ಕೂ ನಮ್ಮ ನೆನಪಿನಲ್ಲೂ ನಮ್ಮ ಅನುಭವದಲ್ಲೂ ಪವಿತ್ರ ಸ್ಥಾನವಿದೆ.

"ಬಿಳಿಯ ಜನರಿಗೆ ನಮ್ಮ ಪದ್ಧತಿಗಳೂ ನಡವಳಿಕೆಗಳೂ ಅರ್ಥವಾಗುವುದಿಲ್ಲವೆಂದು ಬಲ್ಲೆವು. ಅವರ ಮಟ್ಟಿಗೆ ಭೂಮಿಯ ಒಂದು ಭಾಗ ಇನ್ನೊಂದರಂತೆ, ಯಾವುದಾದರೂ ಒಂದೇ... ಅವರ ಹಸಿವು ಈ ಮಣ್ಣನ್ನು ಕಬಳಿಸಿ ಮುಂದೆ ಸಾಗುತ್ತದೆ. ಇಲ್ಲಿ ಉಳಿಯುವುದು ಮರುಭೂಮಿ. ಕೆಂಪು ಜನರು ಕೇಡು ಮನುಷ್ಯರಷ್ಟೆ. ಅದರಿಂದಲೇ ಇರಬಹುದು ನಿಮ್ಮ ಪಟ್ಟಣಗಳು ನಮ್ಮ ಕಣ್ಣಿಗೆ ನೋವು ತರುತ್ತವೆ....."

ಸಂಗ್ರಹ: ಎನ್.ಎಂ. ಕುಲಕರ್ಣಿ

# ಮೂಕಜ್ಜಿಯ ಕನಸುಗಳು

**ಜ್ಞಾನಪೀಠ ಪ್ರಶಸ್ತಿಯನ್ನು ಕಾರಂತರಿಗೆ ತಂದುಕೊಟ್ಟ ಕೃತಿ ಈ 'ಮೂಕಜ್ಜಿಯ ಕನಸುಗಳು.' ಇಲ್ಲಿ ಅಜ್ಜಿಯ ಬಾಯಿಂದ ಬಂದ ಅನುಭವವಾಣಿಗಳು ಎಂಥೆಂಥವು! ಎಷ್ಟೆಲ್ಲ ಅರ್ಥವುಳ್ಳವು! (ಪ್ರಕಾಶನ: ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು.)**

ಮಾಯೆಗೆ ರಾಮ, ಕೃಷ್ಣ, ಶಿವ, ಬ್ರಹ್ಮ ಎಲ್ಲ ದೇವರನ್ನೂ ಸಿಕ್ಕಿಸಿಹಾಕಿದ್ದೇವೆ ನಾವೇ. ಅದೇ ನಾವು 'ಅದು ಮಾಯೆ, ಅದನ್ನು ಬಿಡಬೇಕು, ಬಿಟ್ಟರೇನೆ ಮೋಕ್ಷ' ಅನ್ನುತ್ತಿರುತ್ತೇವೆ. ಏನು ಮೋಕ್ಷವೋ! ಯಾರ ಮೋಕ್ಷವೋ! ಒಂದೊಂದು ಸಾರಿ ನಗು ಬರುತ್ತದೆ ಮಗು, ನನಗೆ. ಹೆಂಡತಿ ಮಕ್ಕಳನ್ನು ಬಿಟ್ಟರು ದಾಸರು. ವಿಠಲನನ್ನು, ನಾರಾಯಣನನ್ನು ನಂಬಿ ಹಾಡಿದರು. ನಂಬಿದ್ದೇ ನಂಬಿದ್ದು; ಹಾಡಿದ್ದೇ ಹಾಡಿದ್ದು. ಅವರು ತಮ್ಮ ಹೆಂಡಿರನ್ನು ದಾರಿ ಮೇಲೆ ಕೆಡೆದು ಹೋದದ್ದೂ ನಿಜ. ಹಾಗೆ ಮಾಡಿ ಬೇಡಿದ್ದು ಯಾರನ್ನು? ತಮ್ಮ ಹೆಂಡಿರೊಡನೆ ಸುಖವಾಗಿ ವೈಕುಂಠದಲ್ಲೋ ಕೈಲಾಸದಲ್ಲೋ ಇರುವ ವಿಷ್ಣುವನ್ನು, ಶಿವನನ್ನು. ಅವರೇನು ಕೊಟ್ಟಾರು? ಅವರಿಗೇ ಅವರ ಹೆಂಡಂದಿರಿಂದ ಮುಕ್ತಿ ಸಿಗದೆ ಇರುವಾಗ?"

* * *

"ಆಟ ಆಟವೇ; ಅಜ್ಞಾನವೂ ಅಜ್ಞಾನವೇ! ಅಲ್ಲದೆ ಹೋದರೆ ಮಗು, ಅಮ್ಮನ ಗುಡಿಯ ಮುಂದೆ, ಅವಳೇನೆ ಹುಟ್ಟಿಸಿದ ಕುರಿ, ಕೋಣ ಕಡಿಯುತ್ತಾರೆಯೋ? ನಮ್ಮ ದೇಹಕ್ಕೆ ನೆತ್ತರು ತುಂಬಿಸಿದವಳು ಅವಳಾದರೆ ಅವಳಿಗೆ ನಮ್ಮ ನೆತ್ತರನ್ನು ಕುಡಿದು ತೃಪ್ತಿಯೋ! ಹಿಂದಕ್ಕೆ ನರಬಲಿಯನ್ನು ಕೊಡುತ್ತಿದ್ದರಂತೆ- ಅದು ಅಮ್ಮನಿಗೆ ಪ್ರೀತಿ ಅಂತ. ಅಜ್ಞಾನದ ಬೆನ್ನಿಗೆ ಅನ್ಯಾಯವೂ ನಡೆಯುತ್ತದೆ. ಅದು ಮಾತ್ರ ಆಗಬಾರದಲ್ಲ."

* * *

"ಸತ್ತ ಮೇಲೆ ಯಾರಿಗೆ ಏನಾಗುತ್ತದೋ; ನನಗಂತೂ ಗೊತ್ತಿಲ್ಲ. ನನಗೆ ನಾನು ಹಿಂದೆ ಇದ್ದದ್ದೂ ಗೊತ್ತಿಲ್ಲ; ಮುಂದಿರುವುದೂ ಗೊತ್ತಿಲ್ಲ. ಅನ್ನುತ್ತಾರೆ, ನೂರಾರು ಜನ್ಮ ಆತ್ಮನಿಗುಂಟು ಅಂತ. ಎಷ್ಟು ನಿಜವೋ, ಎಷ್ಟು ಸುಳ್ಳೋ. ದೇವರು ಅಂದರೆ ಪರಮಾತ್ಮ; ಆ ಪರಮಾತ್ಮನಿಗೂ ಜನ್ಮವುಂಟು ಎಂದರೆ ನನಗೆ ಅರ್ಥವೇ ಆಗುವುದಿಲ್ಲ. ಅವನು ಇಡಿ; ಹೋಳಲ್ಲ, ತುಂಡಲ್ಲ, ಚೂರಲ್ಲ. ಇಡಿ ಎಂಬುದು ಒಂದು ಕಡಿಯಾಗಿ ಹುಟ್ಟಿತು- ಅಂದರೆ ಅದು ಕತೆ. ನಮಗೆ ಬೇಕಲ್ಲ- ಏನಾದರೂ ಒಂದು ಸಮಾಧಾನ. ದುಷ್ಟರು ಸಾಯಲೇಬೇಕು; ಶಿಷ್ಟರು ಉಳಿಯಲೇಬೇಕು ಎಂಬ ಸಮಾಧಾನ ನಮಗೆ ಬೇಕು. ಅದಕ್ಕಾಗಿ ನೂರಾರು ದೇವರನ್ನು ಹುಟ್ಟಿಸಿದೆವು. ಸಾವಿರಾರು ದುಷ್ಟರನ್ನು ಕೊಲ್ಲಿಸಿದೆವು. ಹಾಗೆಯೇ ಇಂದ್ರ, ವರುಣರನ್ನು ತಂದಿಟ್ಟರು; ' ತೆಗೆದರು. ಅಮ್ಮ ದುರ್ಗಿ, ಕೋಟಳೆ, ಕಾಳಿ, ಚಾಮುಂಡಿ- ಎಂತ ಇಟ್ಟರು; ತೆಗೆದರು. ಅವರನ್ನು ಪೂಜೆ ಮಾಡಿದರು; ಆಮೇಲೆ ಮರೆತರು."

* * *

"ತಂತಮ್ಮ ಮತವೇ ಮೇಲು, ಇನ್ನೊಬ್ಬರದು- ಕಡಿಮೆ ಎಂದು ತೋರಿಸುವುದಕ್ಕೆ ಪ್ರತಿಯೊಬ್ಬರೂ ಪುರಾಣಗಳನ್ನು ಬರೆದವರೇ. ಜೈನರೂ ಬರೆದರು. ಬೌದ್ಧರೂ ಬರೆದರು, ಬ್ರಾಹ್ಮಣರೂ ಬೇಕಷ್ಟು ಬರೆದರು. ತಮ್ಮ ದೇವರುಗಳಿಂದ ಬೇಕಾದ ಕೆಲಸಗಳನ್ನು ಮಾಡಿಸಿದರು; ಬೇಡದಿದ್ದ ಕೆಲಸಗಳನ್ನೂ ಮಾಡಿಸಿದರು. ತಮ್ಮ ದೇವರನ್ನು ಮೇಲಕ್ಕೆ ಎತ್ತಿದರು; ಇನ್ನೊಬ್ಬರ ದೇವರನ್ನು ಕೆಳಕ್ಕೆ ನೂಕಿದರು. ಅದು ಸಾಧ್ಯವಾಗದಾದಾಗ ತಮ್ಮ ದೇವರುಗಳ ಬಾಗಿಲನ್ನು ಕಾಯುವ ಯಕ್ಷ-ಯಕ್ಷಿಯರನ್ನಾಗಿ ಮಾಡಿದರು. ಅದನ್ನೆಲ್ಲ ಓದಿದರಂತೂ ನಂಬುವುದು ಯಾವುದನ್ನು, ಬಿಡುವುದು ಯಾವುದನ್ನು- ಎಂಬುದೇ ಗೊತ್ತಾಗುವುದಿಲ್ಲ."

ಸಂಗ್ರಹ: ಪ್ರಕಾಶ ಎಸ್. ಮನ್ನಂಗಿ

# ಬಿಳಿಯು ಮಕ್ಕಳ ಕಪ್ಪು ಕಥೆ

• ಡಾ. ನಾ. ಸೋಮೇಶ್ವರ

ಬಾಲ ಕಾರ್ಮಿಕರ ಶೋಷಣೆ ಇಂದು ನಿನ್ನೆಯದಲ್ಲ. ಇಂದಿನಷ್ಟೇ ಕ್ರೂರವಾಗಿ ಅಥವಾ ಅದಕ್ಕಿಂತ ಕ್ರೂರವಾಗಿ ಹಿಂದೆ ಮಕ್ಕಳು ಶೋಷಣೆಗೆ ಒಳಗಾಗಿದ್ದಾರೆ. ಇತಿಹಾಸದ ಕಪ್ಪು ಪುಟಗಳಿಂದ ಆಯ್ದ ಒಂದು ಜ್ವಲಂತ ಚಿತ್ರಣವನ್ನು ಇಲ್ಲಿ ಕೊಡುತ್ತಿದ್ದೇನೆ.

## ಕಲ್ಲಿದ್ದಲು

ಇಂಗ್ಲೆಂಡಿನ ಮೊದಲನೆಯ ಎಲಿಜಬೆತ್ ರಾಣಿಯ ಕಾಲ. ದೇಶದಲ್ಲಿ ಮರಮಟ್ಟುಗಳ ಕೊರತೆ ತಲೆದೋರಿತು. ಹಾಗಾಗಿ ಮನೆ ಕಟ್ಟುವಾಗ ಮರದ ಮನೆಗಳ ಬದಲು ಇಟ್ಟಿಗೆಗಳಿಂದ ಕಟ್ಟಿದ ಮನೆಗಳು ಜನಪ್ರಿಯವಾದವು. ಕಲ್ಲಿನಿಂದ ಕಟ್ಟಿದ ಮನೆಗಳೂ ಬಳಕೆಗೆ ಬಂದವು. ಉರವಲು ಸೌದೆಯ ಕೊರತೆಯೂ ಅಧಿಕವಾಯಿತು. ಹಾಗಾಗಿ ಜನರು ಬದಲಿ ಇಂಧನವನ್ನಾಗಿ ಕಲ್ಲಿದ್ದಲನ್ನು ಬಳಸಲು ಆರಂಭಿಸಿದರು. ಕಲ್ಲಿದ್ದಲನ್ನು ಬಳಸುವುದು ಅಂತಸ್ತಿನ ಕುರುಹಾಯಿತು. ಹಾಗಾಗಿ ಕಲ್ಲಿದ್ದಲಿನ ಗಣಿಗಾರಿಕೆಗೆ ಉಚ್ಛ್ರಾಯದ ಕಾಲ ಬಂತು. ಅದುವರೆಗೆ ಸೌದೆಯನ್ನು ಉರುವಲನ್ನಾಗಿ ಬಳಸುತ್ತಿದ್ದ ಕೈಗಾರಿಕೆಗಳು ಕಲ್ಲಿದ್ದಲನ್ನು ಬಳಸಲಾರಂಭಿಸಿದವು. ಕ್ರಿ.ಶ. ೧೫೭೦ರ ವೇಳೆಗೆ ದೇಶದ ಪ್ರಮುಖ ಇಂಧನ ಕಲ್ಲಿದ್ದಲಾಯಿತು.

**ಹೊಸ ಉದ್ಯೋಗ:** ಕಲ್ಲಿದ್ದಲನ್ನು ಉರುವಲನ್ನಾಗಿ ಬಳಸಿದಾಗ ಅದರಿಂದ ಉಂಟಾದ ಅನವಶ್ಯ ಉಪ ಪರಿಣಾಮವೆಂದರೆ ಹೊಗೆ ಮತ್ತು ಅದರಿಂದ ರೂಪುಗೊಳ್ಳುವ ಮಸಿ. ಹಾಗಾಗಿ ಹೊಗೆಯನ್ನು ಮೇಲಕ್ಕೆ ಸಾಗಿಸಲು ಚಿಮಣಿಗಳು ರೂಪುಗೊಂಡವು. ಕಾರ್ಖಾನೆಗಳಲ್ಲಿ ಮಾತ್ರವಲ್ಲ, ಪ್ರತಿಯೊಂದು ಮನೆ ಮನೆಯಲ್ಲೂ ನವ ನವ ನಮೂನೆಯ ಚಿಮಣಿಗಳು ಬಳಕೆಗೆ ಬಂದವು. ಇದರೊಡನೆ ಒಂದು ಹೊಸ ಅನಾನುಕೂಲವೂ ತಲೆದೋರಿತು. ಕಲ್ಲಿದ್ದಲನ್ನು ಉರಿಸಲು ಆರಂಭಿಸಿದ ಸ್ವಲ್ಪ ದಿವಸಗಳಲ್ಲಿಯೇ ಚಿಮಣಿಗಳ ಒಳಗೆ ಕಲ್ಲಿದ್ದಲ ಮಸಿಯು ಕಲೆತು ಹೊಗೆ ಹೊರ ಹೋಗುವುದೇ ಕಷ್ಟವಾಯಿತು. ಇದರ ಫಲವಾಗಿ ಮಸಿಯನ್ನು ಹೆರೆದು ಬಾಚಿ ಗುಡಿಸುವ ಹೊಸ ಉದ್ಯೋಗವೊಂದು ಹುಟ್ಟಿಕೊಂಡಿತು. ಇದರೊಡನೆ ಬಂಡವಾಳವನ್ನು ಹಾಕಿ ಹೊಸ ಉದ್ಯಮ ನಡೆಸಲು ಬಂಡವಾಳಶಾಹಿ ಮಾಲೀಕರ ವರ್ಗವೂ ತಲೆಎತ್ತಿತು.

## ಶೋಷಣೆ

ಈ ಹೊಸ ಉದ್ಯಮದೊಡನೆ ಆರಂಭವಾಯಿತು ಬಡಮಕ್ಕಳ ಕರಾಳ ಶೋಷಣೆ. ಚಿಮಣಿಗಳು ಉದ್ದಕ್ಕಿರುತ್ತಿದ್ದವು. ವಿವಿಧ ಕೋನಗಳಲ್ಲಿ ಬಾಗಿರುತ್ತಿದ್ದವು. ಕೆಲವು ಚಿಮಣಿಗಳ ವ್ಯಾಸ ೭" ನಷ್ಟು ಕಿರಿದಾಗಿರುತ್ತಿತ್ತು. ಹಾಗಾಗಿ ವಯಸ್ಕರು, ಈ ಚಿಮಣಿಗಳ ಒಳಗೆ ನುಸುಳಿ ಮಸಿಯನ್ನು ಹೆರೆಯುವುದು ಅಸಾಧ್ಯವಾಗಿ ಆಗ ಹೊಸದಾಗಿ ಹುಟ್ಟಿಕೊಂಡ ಈ ಮಾಲಕ ವರ್ಗ ಮಕ್ಕಳನ್ನು ಈ

ಕೆಲಸಕ್ಕಾಗಿ ವಿಶೇಷವಾಗಿ ಬಳಸಲಾರಂಭಿಸಿತು.

೧೦ ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳಿಗೆ ಈ ಉದ್ಯೋಗದಲ್ಲಿ ವಿಶೇಷ ಸ್ಥಾನವಿರುತ್ತಿತ್ತು. ಹೊಗೆ ಮಸಿಯಲ್ಲಿ ಕೂದಲು ಸಿಕ್ಕಿ ಗಂಟು ಬೀಳಬಾರದು ಅಲ್ಲವೆ! ಹೀಗಾಗಿ ಚಿಮಣಿಯೇರುವ ಮಕ್ಕಳ ತಲೆಯನ್ನು ನುಣ್ಣಗೆ ಬೋಳಿಸಲಾಗುತ್ತಿತ್ತು. ಬಟ್ಟೆ ಹಾಕಿಕೊಂಡು ಮಸಿಯನ್ನು ಬಾಚಲು ಸಾಧ್ಯವೆ? ಬಟ್ಟೆ ಕಪ್ಪು ಆಗಿಯೇ ತೀರುತ್ತದಲ್ಲ. ದಿನಕ್ಕೆ ಎಷ್ಟು ಜೊತೆ ಬಟ್ಟೆಗಳೆಂದು ತಾನೆ ಬದಲಾಯಿಸಲು ಸಾಧ್ಯ? ಆದ್ದರಿಂದ ಈ ಮಕ್ಕಳೆಲ್ಲ ನಗ್ನವಾಗಿರುತ್ತಿದ್ದರು.

ಮಕ್ಕಳ ಚರ್ಮ ಹೂವಿನಂತೆ ಸುಕೋಮಲ. ಆದರೆ ಅವರು ಮಾಡಬೇಕಾದ ಕೆಲಸ, ಹೊಗೆ ಚಿಮಣಿಗಳೊಳಗೆ ತೆವಳಿ ತೆವಳಿ ಮಸಿ ಹೆರೆಯುವುದು. ಮೈ ಕೋಮಲಾಗಿದ್ದಷ್ಟೂ ಹೆಚ್ಚು ಹೆಚ್ಚು ತರಚು ಗಾಯಗಳಾಗುತ್ತಿದ್ದವು. ಮೊಣಕಾಲು ಮತ್ತು ಮೊಣಕೈಗಳ ಮೇಲೆ ಶಾಶ್ವತವಾಗಿ ಹುಣ್ಣುಗಳು ಇರುತ್ತಿದ್ದವು. ಈ ಸಮಸ್ಯೆಯನ್ನು ನಿವಾರಿಸಲು ಮಾಲೀಕರು ಒಂದು ಉಪಾಯವನ್ನು ಕಂಡುಹಿಡಿದರು. ನೀರಿನಲ್ಲಿ ಉಪ್ಪನ್ನು ಕರಗಿಸಿದರು. ಮತ್ತಷ್ಟು ಕರಗಿಸಿದರು. ಇನ್ನು ಕರಗಿಸಲು ಸಾಧ್ಯವೇ ಇಲ್ಲದಂತಹ ಪ್ರಬಲ ದ್ರಾವಣವನ್ನು ತಯಾರಿಸಿ ಮಕ್ಕಳ ತರಚಿದ ಮೊಣಕೈ ಮತ್ತು ಮೊಣಕಾಲುಗಳಿಗೆ ಧಾರಾಳವಾಗಿ ಬಳಿದರು. ಉಜ್ಜಿದರು, ಬಳಿದರು, ಮತ್ತೆ ಉಜ್ಜಿದರು. ಬೆಂಕಿಯ ಮುಂದೆ ಅವರನ್ನು ಕೂರಿಸಿ ಕಾಯಿಸಿದರು. ಮತ್ತೆ ಬಳಿದರು. ಮತ್ತೆ ಮತ್ತೆ ಉಜ್ಜಿದರು. ಪ್ರತಿಭಟಿಸುವ ಮಕ್ಕಳಿಗೆ ಅರ್ಧ ಪೆನ್ನಿಯ ಆಸೆಯನ್ನು ತೋರಿಸುತ್ತಿದ್ದರು. ಈ ಆಮಿಷಕ್ಕೂ ಜಗ್ಗದ ಮಕ್ಕಳನ್ನು ಛಡಿಯಿಂದ ಹೊಡೆಯುತ್ತಿದ್ದರು. ಮತ್ತೆ ಬಳಿಯುತ್ತಿದ್ದರು. ಉಜ್ಜುತ್ತಿದ್ದರು. ಚರ್ಮ ಮತ್ತೊಮ್ಮೆ ತರಚದಂತೆ ಬಿರುಸಾಗಿ ಬಿರುಸಾಗುವವರೆಗೂ ದ್ರಾವಣ ಬಳಿದು ಉಜ್ಜುತ್ತಿದ್ದರು.

ಚಿಮಣಿಯೊಳಗೆ ಅರ್ಧ ಹತ್ತಿ ಮುಂದೆ ಹೋಗಲು ಹೆದರುತ್ತಿದ್ದ ಮಕ್ಕಳ ಪಾದಗಳಡಿಯಲ್ಲಿ ಒಣ ಹುಲ್ಲನ್ನು ಹೊತ್ತಿಸಿ ಇಡುತ್ತಿದ್ದರು. ಹೊಗೆಯು ಘಾಟು. ಮೊದಲೇ ಉಸಿರಾಡಲು ಸಾಕಷ್ಟು ಗಾಳಿ ಇರುತ್ತಿರಲಿಲ್ಲ. ಕೆಳಗೆ ಬಂದರೆ ಬೆಂಕಿ! ಮುಂದೆ ಹತ್ತಿ ಸಾಗಲೇಬೇಕಾದ ಅನಿವಾರ್ಯತೆ. ಇಂತಹ ಅನೇಕ ಸಂದರ್ಭಗಳಲ್ಲಿ ಮಕ್ಕಳು ಹೊಗೆ ಚಿಮಣಿಯಲ್ಲೆ ಉಸಿರುಗಟ್ಟಿ ಸಾಯುತ್ತಿದ್ದರು. ಇಂತಹ ಮಕ್ಕಳ ಸಾವಿಗಾಗಿ ಎರಡು ಹನಿ ಕಣ್ಣೀರನ್ನು ಸುರಿಸದೆ ಯಾರೂ ಇರುತ್ತಿರಲಿಲ್ಲ. ಮಾಲೀಕ ಮಾತ್ರ ಇದಾವುದನ್ನು ಹಚ್ಚಿಕೊಳ್ಳದೆ ಸತ್ತ ಹುಡುಗನ ಸ್ಥಾನವನ್ನು ತುಂಬಲು ಮತ್ತೊಬ್ಬ ಹುಡುಗನನ್ನು ಹುಡುಕಲು ಹೊರಡುತ್ತಿದ್ದ. ಇಂಥವರಿಗೆ ಮಕ್ಕಳನ್ನು ಪೂರೈಸಲು ದಲ್ಲಾಳಿಗಳು ಇರುತ್ತಿದ್ದರು. ಅನೇಕ ಸಂದರ್ಭಗಳಲ್ಲಿ ತಂದೆ ತಾಯಿಗಳೇ ಒಂದಿಷ್ಟು ಪೌಂಡುಗಳಿಗಾಗಿ ತಮ್ಮ ಮಕ್ಕಳನ್ನು ಮಾರುತ್ತಿದ್ದರು. ಕೊನೆಗೆ ಮಕ್ಕಳೇ ದೊರೆಯದಿದ್ದಾಗ, ಮಕ್ಕಳನ್ನು ಕದಿಯುವ ಕಳ್ಳರ ಜಾಲವೇ ಹುಟ್ಟಿಕೊಂಡು ಮಕ್ಕಳ ಕೊರತೆಯನ್ನು ಪೂರೈಸತೊಡಗಿತು.

ತಮ್ಮ ಜೀವವನ್ನು ಅಕ್ಷರಶಃ ಒತ್ತೆಯಿಟ್ಟು ದುಡಿಯುತ್ತಿದ್ದ ಮಕ್ಕಳಿಗೆ ಕನಿಷ್ಠ ಸೌಲಭ್ಯಗಳೂ ಇರುತ್ತಿರಲಿಲ್ಲ. ಮಸಿ ಹೆರೆದು ಬಾಚುವ ಮಕ್ಕಳಿಗೇಕೆ ಬಟ್ಟೆ? ಬಟ್ಟೆಯೇ ಬೇಡವೆಂದ ಮೇಲೆ ಹಾಸಿಗೆ, ದಿಂಬು, ಹೊದಿಕೆಗಳಾದರೂ ಏಕೆ ಬೇಕು? ಮಸಿ ತುಂಬಿದ ಚೀಲಗಳೇ ಈ ಬಡಮಕ್ಕಳ ಪಾಲಿಗೆ ಹಂಸತೂಲಿಕಾ ತಲ್ಪಗಳಾದವು. ಸದಾ ಮಸಿಯಲ್ಲೇ ಮೀಯುವ ಮಕ್ಕಳಿಗೆ ಮತ್ತೆ ನೀರಲ್ಲಿ ಮೀಯುವ ತೊಂದರೆಯಾದರೂ ಏಕೆ ಬೇಕು? ಹಾಗಾಗಿ ಈ ಮಕ್ಕಳ ಮೈಯೆಲ್ಲ ಸದಾ ಹೇನು, ಕೂರೆಗಳಿಂದ ತುಂಬಿರುತ್ತಿತ್ತು. ತಿಂದು ತಿಂದು ದಪ್ಪಗಾದರೆ ಚಿಮಣಿಗಳೊಳಗೆ ನುಸುಳಲು ಕಷ್ಟವಾಗುತ್ತದೆಯಲ್ಲ. ಆದುದರಿಂದ ಜೀವ ಹಿಡಿಯಲು ಎಷ್ಟು ಬೇಕೋ ಅಷ್ಟು ಮಾತ್ರ ಆಹಾರವನ್ನು ಮಕ್ಕಳಿಗೆ ಕೊಡಲಾಗುತ್ತಿತ್ತು. ಸೂರ್ಯ ಹುಟ್ಟುವ ಮೊದಲೆ ಆ ಮಕ್ಕಳು ಕೊರೆವ ಚಳಿಯಲ್ಲಿ ಎದ್ದು ಮೈಗೆ ಹತ್ತಿದ ಮಸಿಯನ್ನೊಮ್ಮೆ ಕೊಡವಿ, ಮೈಯನ್ನು ಕೆರೆಯುತ್ತ ಮಸಿ ಚೀಲ ಮತ್ತು ಮಸಿ ಹೆರೆದು ಬಾಚುವ ಸಾಧನಗಳನ್ನು ಹಿಡಿದು ಬೀದಿ

ಬೀದಿ ಸುತ್ತಲು ಆರಂಭಿಸಬೇಕಿತ್ತು. ಅನ್ನ ನೀರಿನ ಪರಿವೆಯಿಲ್ಲದೆ ಈ ಬಿಳಿ ಮಕ್ಕಳು ಕಪ್ಪು ಕಪ್ಪು ಮಸಿಯನ್ನು ಹೆರೆದು ಹೆರೆದು ಬೆಳ್ಳಿಯ ನಾಣ್ಯಗಳನ್ನು ದುಡಿದು ಮಾಲೀಕರ ಖಜಾನೆ ತುಂಬಬೇಕಿತ್ತು.

ಈ ಬಿಳಿ ಮಕ್ಕಳ ಕಪ್ಪು ಕಥೆಯ ವ್ಯಥೆಯನ್ನು ವಿಲಿಯಂ ಬ್ಲೇಕ್ ತನ್ನ "ಮುಗ್ಧತೆಯ ಗೀತೆಗಳು" **(Songs of Innocense)** ಎನ್ನುವ ಕವನ ಸಂಕಲನದಲ್ಲಿನ ಒಂದು ಗೀತೆಯಲ್ಲಿ ಶಾಶ್ವತವಾಗಿ ದಾಖಲು ಮಾಡಿದ್ದಾನೆ (೧೭೮೯).

ಅವಿರತವಾಗಿ ಬರಿ ಹೊಟ್ಟೆಯಿಂದ ನಗ್ನರಾಗಿ ಕಲ್ಲಿದ್ದಲ ಮಸಿಯನ್ನು ಹೆರೆಯುತ್ತಿದ್ದ ಈ ಮಕ್ಕಳಿಗೆ ವೃಷಣ ಚೀಲದ ಕ್ಯಾನ್ಸರ್ ಬರುತ್ತಿತ್ತು. ಈ ಕ್ಯಾನ್ಸರಿನಿಂದ ನರಳಿ ನರಳಿ ಕೊನೆಗೆ ಈ ನರಕದಿಂದ ಆ ಮಕ್ಕಳು ಬಿಡುಗಡೆಯನ್ನು ಪಡೆಯುತ್ತಿದ್ದವು.

### ಒಂಟಿ ಧ್ವನಿ

ಜೋನಾಸ್ ಹಾನ್‌ವೇ ಎನ್ನುವ ಸದ್‌ಗೃಹಸ್ಥ ಈ ಮಕ್ಕಳ ಶೋಷಣೆಯ ಬಗ್ಗೆ ೧೭೭೩ರಲ್ಲಿ ಮೊದಲ ಬಾರಿಗೆ ಧ್ವನಿ ಎತ್ತಿದ. ಲಂಗು ಲಗಾಮಿಲ್ಲದೆ ವ್ಯಾಪಿಸಿದ್ದ ಈ ಉದ್ಯಮಕ್ಕೆ ಲೈಸೆನ್ಸ್ ಎನ್ನುವುದೊಂದಿರಬೇಕು. ಇದು ಮಾಲೀಕರಿಗೆ ನಿರ್ದಿಷ್ಟ ನಿಯಮಾನುಸಾರ ಮಾತ್ರ ದೊರೆಯುವಂತಿರಬೇಕು. ಈ ಉದ್ಯಮದಲ್ಲಿ ಮಕ್ಕಳನ್ನು ತೊಡಗಿಸಲೇಬಾರದು ಎಂದಾತ ಪ್ರಚಾರ ಮಾಡಿದನು. ಆದರೆ ಇವನ ಪ್ರತಿಭಟನೆ ಮತ್ತು ಸುಧಾರಣೆಯ ಪ್ರಯತ್ನ ಬ್ರಿಟನ್ನಿನಲ್ಲಿ ಸುರಿಯುವ ಹಿಮದಡಿಯಲ್ಲಿ ಹೂತು ಹೋಯಿತು.

### ಕಾಗದದ ಹುಲಿ

ಕೊನೆಗೂ ೧೮೮೧ರಲ್ಲಿ ಈ ಬಡ ಮಕ್ಕಳನ್ನು ರಕ್ಷಿಸಲೆಂದೇ ಒಂದು ಹೊಸ ಕಾನೂನು ಜಾರಿಗೆ ಬಂದಿತು. ಈ ಕಾನೂನು ಮಕ್ಕಳನ್ನು ಮಸಿ ಹೆರೆಯುವ ಕೆಲಸಕ್ಕೆ ಹಚ್ಚಬಾರದೆಂದು ನಿರ್ಬಂಧಿಸಿತು. ಆದರೆ ವಾಸ್ತವವಾಗಿ ಈ ಕಾನೂನು ಒಂದು ಕಾಗದದ ಹುಲಿಯಾಗಿತ್ತು. ಹೆಸರಿಗಷ್ಟೇ ಕಾನೂನು. ಈ ಕಾನೂನನ್ನು ಯಾರು ಅನುಷ್ಠಾನಕ್ಕೆ ತರಬೇಕು ಎಂಬುದರ ಬಗ್ಗೆ ಯಾವ ನಿರ್ದೇಶನವೂ ಇರಲಿಲ್ಲ.

**ಸೇವೆ**

ಚುನಾವಣೆಯಲ್ಲಿ ನಿಂತು ಪದೇ
ಪದೇ ಸೋಲುತ್ತಿದ್ದವನೊಬ್ಬ
ರಾಜಕೀಯದ ಬಗ್ಗೆ ಅಸಹ್ಯಗೊಂಡ
ಸಮಾಜ ಸೇವೆಗಾಗಿ ಹೊರಟ
ಜನರಿಗಾಗುವ ಮೋಸ, ಕಷ್ಟಗಳ ಮನಗಂಡು
ಮೊದಲನೆಯದಾಗಿ ಸರಾಯಿ ಅಂಗಡಿ ತೆರೆದ.

**• ರಮಾನಂದ ಎಸ್. ಆರ್**

ಹಾಗಾಗಿ ಮಾಲೀಕರ ಕ್ರೌರ್ಯ ಆತಂಕವಿಲ್ಲದೆ ಮುಂದುವರೆಯಿತು.

ಬ್ರಿಟನ್ನಿನಲ್ಲಿ ಕೈಗಾರಿಕಾ ಕ್ರಾಂತಿಯ ಫಲವಾಗಿ ಚಿಮಣಿಗಳ ಮಸಿಯನ್ನು ಹೆರೆದು ಗುಡಿಸುವ ಯಾಂತ್ರಿಕ ಪೊರಕೆಗಳು ೧೮೭೯ರಲ್ಲಿ ಬಳಕೆಗೆ ಬಂದವು. ಅವು ತ್ವರಿತವಾಗಿ ಮತ್ತು ಸರಿಯಾಗಿ ಮಸಿಯನ್ನು ಸ್ವಚ್ಛಗೊಳಿಸುತ್ತಿದ್ದವು. ಆದರೆ ಮಾಲೀಕರು ಈ ಯಂತ್ರಗಳು ಜನಪ್ರಿಯವಾಗದಂತೆ ಏರ್ಪಾಟು ಮಾಡುತ್ತಿದ್ದರು. ಯಾಂತ್ರಿಕ ಪೊರಕೆಗಳಿಂದ ಗುಡಿಸುವಾಗ, ಬೇಕೆಂದೇ ಮನೆಯ ತುಂಬಾ ಮಸಿಯನ್ನು ಚೆಲ್ಲುತ್ತಿದ್ದರು. ಇದು ಗೃಹಿಣಿಯರಿಗೆ ಹಿಡಿಸುತ್ತಿರಲಿಲ್ಲ. ಯಾವ ಮಹಿಳೆ ತಾನೆ ಮನೆಯ ಪೀಠೋಪಕರಣಗಳ ಮೇಲೆ ಮಸಿ ಬೀಳುವುದನ್ನು ಮತ್ತೆ ಅದನ್ನು ಸ್ವಚ್ಛ ಮಾಡುವುದನ್ನು ಇಷ್ಟಪಡುತ್ತಾಳೆ? ಅಲ್ಲದೆ ವಿವಿಧ ಕೋನಗಳಲ್ಲಿ ಬಾಗಿರುವ ಕೊಳವೆಗಳನ್ನು ಯಾಂತ್ರಿಕ ಪೊರಕೆಯಿಂದ ಗುಡಿಸಲು ಸಾಧ್ಯವಾಗುತ್ತಿರಲಿಲ್ಲ. ಹಾಗಾಗಿ ಮಕ್ಕಳೇ ಮಸಿ ಬಾಚಲೆಂಬ ಬೇಡಿಕೆಯು ಬರುತ್ತಿತ್ತು. ಇದರಿಂದ ಹಿಂದೆಂದೂ ಇಲ್ಲದಂತಹ ಪ್ರಮಾಣದಲ್ಲಿ ಮಸಿ ಬಾಚುವ ಉದ್ಯಮದಲ್ಲಿ ಮಕ್ಕಳನ್ನು ತೊಡಗಿಸಲಾಯಿತು.

### ಡಿಕೆನ್ಸ್

೧೮೩೪ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಒಂದು ಸೌಮ್ಯ ಕಾನೂನನ್ನು ಹೊರಡಿಸಿ ೧೦ ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳನ್ನು ಮಸಿ ಬಾಚಲು ಬಳಸಬಾರದೆಂದು ಸಾರಿತು. ೧೦ ವರ್ಷಗಳಿಗಿಂತಲೂ ಹೆಚ್ಚಿನ ವಯಸ್ಸಿನ ಮಕ್ಕಳು ಈ ಉದ್ಯೋ

ಗವನ್ನು ಮಾಡಬೇಕಾದರೆ ಇಬ್ಬರು ನ್ಯಾಯಾಧೀಶರ ಸಮ್ಮುಖದಲ್ಲಿ, "ನಾನು ಸ್ವ-ಇಚ್ಛೆಯಿಂದ ಚಿಮಣಿ ಗುಡಿಸುವ ಉದ್ಯೋಗವನ್ನು ಮಾಡುತ್ತೇನೆ," ಎಂದು ಪ್ರಮಾಣ ಮಾಡಬೇಕಿತ್ತು. ಈ ಕಾನೂನನ್ನು ಖ್ಯಾತ ಕಾದಂಬರಿಕಾರ ಚಾರ್ಲ್ಸ್ ಡಿಕೆನ್ಸ್ ತನ್ನ "ಆಲಿವರ್ ಟ್ವಿಸ್ಟ್" (೧೮೩೭) ಕೃತಿಯಲ್ಲಿ ಅಮರವಾಗಿಸಿದ್ದಾನೆ. ಅಲ್ಲಿ ಗ್ಯಾಮ್‌ಫೀಲ್ಡ್ ಎನ್ನುವ ಮಾಲೀಕನು ಪುಟ್ಟ ಆಲಿವರ್‌ನನ್ನು ಮಸಿ ಬಾಚುವ ಉದ್ಯೋಗದಲ್ಲಿ ತೊಡಗಿಸಲೆಂದು ನ್ಯಾಯಾಧೀಶರ ಸಮ್ಮುಖಕ್ಕೆ ಕರೆ ತರುತ್ತಾನೆ. ಮುದುಕ ನ್ಯಾಯಾಧೀಶ, "ಅವನು ಚಿಮಣಿ ಗುಡಿಸುವ ಉದ್ಯೋಗವನ್ನು ಇಷ್ಟಪಡುತ್ತಾನೆ ಎಂದು ನಾನು ಭಾವಿಸುತ್ತೇನೆ," ಎನ್ನುತ್ತಾನೆ.

"ಮಹಾ ಮಾನ್ಯರೆ....ಈ ಉದ್ಯೋಗವನ್ನು ಮಾಡಲು ಮೋಹಪರವಶವಾಗಿ ಭ್ರಾಂತನಾಗಿದ್ದಾನೆ" ಎಂದು ನ್ಯಾಯಾಧೀಶರಿಗೆ ಕಾಣದಂತೆ ಆಲಿವರನನ್ನು ಜಿಗುಟಿ, ಹೌದೆಂದು ಒಪ್ಪಿಗೆ ಕೊಡುವುದು ಒಳ್ಳೆಯದೆಂದು ಸೂಚಿಸುತ್ತ ಬಂಬಲ್ ಉತ್ತರಿಸಿದನು.

ಆಲಿವರನ ವಿಧಿಯು ಅವನನ್ನು ರಕ್ಷಿಸಿತು. ಸಮೀಪ ದೃಷ್ಟಿದೋಷ ಹೊಂದಿದ್ದ ನ್ಯಾಯಾಧೀಶನು, ತನ್ನ ಮಸಿ ಕುಡಿಕೆಯನ್ನು ಹುಡುಕಲೆಂದು ಮುಂದಕ್ಕೆ ಬಾಗಿದಾಗ ಭೀತಿಗೊಂಡ ಆಲಿವರನ ಮುಖವನ್ನು ನೋಡಿದನು...

೧೮೩೪ರ ಕಾನೂನು ಪುಸ್ತಕದಲ್ಲಿ ಮಾತ್ರ ಉಳಿಯಿತು. ಚಿಮಣಿಗಳು ಹೊಂದಿರಬೇಕಾದ ವ್ಯಾಸ ಮತ್ತು ಬಾಗಿರಬೇಕಾದ ಕೋನಗಳನ್ನು ನಿರ್ದೇಶಿಸಿ ಈ ಕಾನೂನೂ ಮಿತಿಯನ್ನು ಹಾಕಿತು. ಇದನ್ನು ಮೀರಿದವರಿಗೆ ೧೦೦ ಪೌಂಡು ದಂಡವನ್ನು ವಿಧಿಸಿತು. ಆದರೆ ಹಿಂದಿನ ಕಾನೂನಿನಂತೆ ಈ ಕಾನೂನನ್ನು ಯಾರು ಅನುಷ್ಠಾನಗೊಳಿಸಬೇಕು ಎಂಬುದರ ಬಗ್ಗೆ ಯಾವುದೇ ವಿವರಣೆ ಇಲ್ಲದಿದ್ದ ಕಾರಣ ಇದು ಮತ್ತೊಂದು ಹಲ್ಲಿಲ್ಲದ ಹುಲಿಯಾಯಿತು.

**ಕಿಂಗ್‌–ಸ್ಲೆ**

ಚಾರ್ಲ್ಸ್ ಕಿಂಗ್‌ಸ್ಲೆ ಎನ್ನುವವನು ೧೮೬೩ರಲ್ಲಿ 'ವಾಟರ್ ಬೇಬೀಸ್' ಎನ್ನುವ ಕಥೆಯನ್ನು ಬರೆದ. ಈ ಕಥೆಯ ಕೇಂದ್ರ ಪಾತ್ರ ಟಾಂ ಎನ್ನುವ ಪುಟ್ಟ ಹುಡುಗ. ಇವನು ಬಹಳ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ. ಬಾಲ್ಯ ಸಹಜ ತುಂಟತನ ಇವನಿಗೂ ಇತ್ತು. ಜೊತೆಗೆ ಆ ಹುಡುಗ ಹಗಲು ಕನಸು ಕಾಣುತ್ತಿದ್ದ. ಅಲ್ಲಿ ಬರುವ ವಿವರಣೆ ಹೀಗೆ:

"ಒಂದಾನೊಂದು ಕಾಲದಲ್ಲಿ ಟಾಂ ಎಂಬ ಹೆಸರಿನ ಹುಡುಗ ದೇಶದ ಉತ್ತರದಲ್ಲಿರುವ ದೊಡ್ಡ ನಗರದಲ್ಲಿ ವಾಸಿಸುತ್ತಿದ್ದ. ಅಲ್ಲಿ ಮಸಿ ಬಾಚಿದುಡಿಯಲು ಹೇರಳ ಚಿಮಣಿಗಳಿದ್ದವು. ಹಣಗಳಿಸಲು ಅವಕಾಶ ಸಾಕಷ್ಟು ಇತ್ತು. ಹಾಗೆಯೇ ಆ ಹಣವನ್ನು ಖರ್ಚು ಮಾಡಲು ಅವನ ಮಾಲೀಕನೂ ಇದ್ದನು.

"ಟಾಮ್ ಸ್ನಾನ ಮಾಡುತ್ತಿರಲಿಲ್ಲ. ಏಕೆಂದರೆ ಅವನಿಗೆ ನೀರೇ ಸಿಗುತ್ತಿರಲಿಲ್ಲ. ಅವನಿಗೆ ಯಾರೂ ಓದು ಬರಹವನ್ನು ಕಲಿಸಿರಲಿಲ್ಲ. ಪ್ರಾರ್ಥನೆ ಮಾಡಲೂ ಬರುತ್ತಿರಲಿಲ್ಲ. ಹಾಗಾಗಿ ದೇವರ ಹೆಸರನ್ನೆಂದೂ ಅವನು ಕೇಳಿರಲಿಲ್ಲ.

"ಟಾಮ್ ದಿನದ ಅರ್ಧಭಾಗ ಅಳುತ್ತಿದ್ದ. ಉಳಿದರ್ಧ ಭಾಗ ನಗುತ್ತಿದ್ದ. ಕತ್ತಲ ಕಪ್ಪು ಚಿಮಣಿಗಳನ್ನು ಹತ್ತುವಾಗ ಮೊಣಕೈ ಮೊಣಕಾಲು ತರಚಿ ಉರಿಯುವಾಗ ಮಸಿಯು ಕಣ್ಣಲ್ಲಿ ಬಿದ್ದು ಉರಿಯುವಾಗ ಅವನು ಅಳುತ್ತಿದ್ದ. ಅದು ವಾರದ ಏಳೂ ದಿವಸಗಳಲ್ಲಿ ಬೀಳುತ್ತಿತ್ತು. ಅವನು ಅಳುತ್ತಿದ್ದ. ಮುಖ ಮೂತಿ ನೋಡದೆ ಮಾಲೀಕನು ಹೊಡೆಯುವಾಗ ವಾರದ ಏಳೂ ದಿವಸಗಳಲ್ಲಿ ಹೊಡೆತ ಬೀಳುತ್ತಿತ್ತು. ಅವನು ಅಳುತ್ತಿದ್ದ, ಹೊಟ್ಟೆ ತುಂಬ ಊಟ ಸಿಗದಿದ್ದಾಗ. ಅದು ವಾರದ ಏಳೂ ದಿವಸಗಳಲ್ಲಿ ಸಿಗುತ್ತಿರಲಿಲ್ಲ.

"ದಿನದ ಉಳಿದ ಅರ್ಧಭಾಗ ಆತ ನಗುತ್ತಿದ್ದ. ಉಳಿದ ಮಕ್ಕಳಂತೆ ಮಾಲೀಕನಿತ್ತ ಅರ್ಧ ಪೆನ್ನಿಯನ್ನು ಮೇಲಕ್ಕೆಸೆದು ಹಿಡಿಯುವ ಆಟವನ್ನು ಆಡುವಾಗ ಕಪ್ಪೆಯಂತೆ ಕಂಬದಿಂದ ಕಂಬಕ್ಕೆ ಜಿಗಿಯುವಾಗ ಸಾರೋಟು ಕುದುರೆಗಳ ಕಾಲಿಗೆ ಕಲ್ಲಿನಿಂದ ಹೊಡೆಯುವಾಗ ಹೊಡೆದು ಗೋಡೆಯ ಹಿಂದೆ ಬಚ್ಚಿಟ್ಟುಕೊಳ್ಳಲು ಸಾಧ್ಯವಾ

ದಾಗ ಆತ ನಗುತ್ತಿದ್ದ.

"ಪ್ರಕೃತಿಯಲ್ಲಿ ಮಳೆ ಬೀಳುವುದು, ಹಿಮ ಸುರಿಯುವುದು, ಗುಡುಗು ಗುಡುಗುವುದು ಹೇಗೆ ಸಹಜವೋ ಹಾಗೆಯೇ ಚಿಮಣಿ ಗುಡಿಸುವುದು, ಮಾಲೀಕನಿಂದ ಹೊಡೆಸಿಕೊಳ್ಳುವುದು, ಉಪವಾಸ ಬೀಳುವುದೂ ಟಾಮನಿಗೆ ಸಹಜವಾಗಿದ್ದವು. ಆಲಿ ಕಲ್ಲಿನ ಹೊಡೆತಕ್ಕೆ ಬೆನ್ನು ಒಡ್ಡಿ ನಿಲ್ಲುವ ಕತ್ತೆಯಂತೆ, ಮಾಲೀಕನು ಹೊಡೆಯುವಾಗ ಎದೆಸೆಟೆಸಿ ಗೋಡೆ ಗೊರಗಿ ಟಾಮ್ ನಿಲ್ಲುತ್ತಿದ್ದ. ನಿಂತಂತೆಯೇ ಬರ ಲಿರುವ ತನ್ನ ಯೌವನದ ಸುಂದರ ಕನಸುಗಳನ್ನು ಕಾಣುತ್ತಿದ್ದ.

"ತಾನು ದೊಡ್ಡವನಾದಂತೆ ತಾನೂ ಒಬ್ಬ ಮಾಲೀಕನಾದಂತೆ, ಮಖಮಲ್ ಬಟ್ಟೆಗಳನ್ನು ಧರಿಸಿ ದಪ್ಪ ದಪ್ಪವಾದ ಬಿಳಿಯ ಬುಲ್‌ಡಾಗ್ ಅನ್ನು ಕರೆದುಕೊಂಡು ಹೊಟೇಲಿನಲ್ಲಿ ಕುಳಿತು ಬಿಯರ್ ಹೀರಿದಂತೆ, ಉದ್ದನೆಯ ಪೈಪ್‌ನಿಂದ ಹೊಗೆ ಬಿಡುವಂತೆ, ಬೆಳ್ಳಿಯ ನಾಣ್ಯಗಳನ್ನಿಟ್ಟು ಇಸ್ಪೀಟ್ ಆಡುವಂತೆ ಕನಸು ಕಾಣುತ್ತಿದ್ದ.

"ತಾನೊಬ್ಬ ಗಂಡಸಾಗಿ ಮೆರೆಯಬೇಕು. ಸಾಧ್ಯ ವಾದರೆ ಒಬ್ಬ, ಇಬ್ಬರು ಅಥವಾ ಮೂವರು ಬಾಲಕರನ್ನು ಇಟ್ಟುಕೊಳ್ಳಬೇಕು. ತಾನವರನ್ನು ಚೆನ್ನಾಗಿ ಗೋಳು ಹೊಯ್ದುಕೊಳ್ಳಬೇಕು. ತನ್ನ ಮಾಲೀಕ ತನ್ನನ್ನು ಹಿಂಸಿಸುತ್ತಿರುವದಕ್ಕಿಂತಲೂ ತಾನು ಸೈನ್ಯವೊಂದರ ಸೇನಾಪತಿಯಂತೆ, ಕತ್ತೆಯ ಮೇಲೆ ಕುಳಿತುಕೊಂಡು, ಅಂಗಿಗೆ ಹೂವೊಂದನ್ನು ಸಿಕ್ಕಿಸಿಕೊಂಡು ಪೈಪನ್ನು ಸೇದುತ್ತ ಮುಂದೆ ಮುಂದೆ ಸಾಗುತ್ತಿರಬೇಕು. ತನ್ನ ಹಿಂದೆ ಆ ಬಾಲಕರು ಹೊಗೆ ಮಸಿ ಚೀಲವನ್ನು ಹೊತ್ತು ಬರುತ್ತಿರ ಬೇಕು...ಎಂದೆಲ್ಲ ಬರಲಿರುವ ಸುಂದರ ಕ್ಷಣಗಳನ್ನು ನೆನೆಸುತ್ತ, ತನ್ನ ಮಾಲೀಕ ಕುಡಿದು ಬಿಟ್ಟ ಎಂಜಲು ಬಿಯರನ್ನು ಹೀರಲು ಅನುಮತಿಯಿತ್ತಾಗ, ಇಡೀ ನಗರದಲ್ಲೇ ತನ್ನಷ್ಟು ಸುಖಿ ಮತ್ತೊಬ್ಬರಿಲ್ಲ ಎಂದು ಟಾಮ್‌ನಿಗೆ ಅನಿಸುತ್ತಿತ್ತು."

ಮಸಿ ಬಾಚುವ ಉದ್ಯಮ ಆರಂಭವಾಗಿ ಸುಮಾರು ೧೯೬ ವರ್ಷಗಳು ಕಳೆದಿದ್ದವು. ಈ ಶೋಷಣೆಯನ್ನು ಹಾನ್‌ವೇ ಸಾರ್ವಜನಿಕವಾಗಿ ಪ್ರತಿಭಟಿಸಿ ಆದಾಗಲೆ ೧೧೦೨ ವರ್ಷಗಳು ಉರು ಳಿಬಿದ್ದವು.

ಕ್ರಿ.ಶ. ೧೮೭೫ ಲಾರ್ಡ್ ಶಾಫ್ಟಬರಿ ಎನ್ನುವ ವನು ಒಂದು ಹೊಸ ಕಾನೂನನ್ನು ಜಾರಿಗೆ ತಂದ. ಇದರಂತೆ ಚಿಮಣಿ ಗುಡಿಸುವವರು ಲೈಸನ್ಸ್ ಹೊಂದಿರಬೇಕು. ಲೈಸೆನ್ಸ್ ವರ್ಷಕ್ಕೊಮ್ಮೆ ನವೀಕ ರಣಗೊಳ್ಳಬೇಕು. ನಿಯಮಗಳನ್ನು ಮೀರಿದವರ ಲೈಸೆನ್ಸನ್ನು ಮುಟ್ಟುಗೋಲು ಹಾಕಿಕೊಳ್ಳಬೇಕು. ಈ ಉದ್ಯೋಗದಲ್ಲಿ ಮಕ್ಕಳನ್ನು ಬಳಸಬಾರದು. ಈ ಕಾನೂನನ್ನು ಅನುಷ್ಠಾನಗೊಳಿಸುವ ಜವಾಬ್ದಾರಿ ಪೊಲೀಸ್ ಇಲಾಖೆಯದು ಎಂದು ಅದರಲ್ಲಿ ಸ್ಪಷ್ಟವಾಗಿ ನಮೂದುಗೊಂಡಿತ್ತು.

ಲಾರ್ಡ್ ಶಾಫ್ಟಬರಿಯ ಈ ದಿಟ್ಟ ನಿರ್ಣಯ ಒಂದು ಐತಿಹಾಸಿಕ ದಾಖಲೆಯಾಗಿದೆ. ಆ ಕಾಲ ದಲ್ಲಿ ಸಣ್ಣ ಪುಟ್ಟ ಕಳ್ಳತನಗಳಿಗೂ ಮರಣದಂಡ ನೆಯ ಶಿಕ್ಷೆಯಾಗುತ್ತಿತ್ತು. ಅಂತಹ ದಿವಸಗಳಲ್ಲಿ ಅನಾಥ ಮಕ್ಕಳ ನೆರವಿಗೆ ಬಂದ ಶಾಫ್ಟಬರಿ ನಿಜಕ್ಕೂ ಅಭಿನಂದನೀಯ.

ಇತಿಹಾಸದಿಂದ ಪಾಠ ಕಲಿಯಬೇಕು. ಆದರೆ ನಾವು ಕಲಿತಿಲ್ಲ, ಕಲಿಯುವುದೂ ಇಲ್ಲ.

ಪುಟ್ಟ ಹುಡುಗ ಟಾಮ್‌ನ ಹಗಲುಗನಸನ್ನು ಮತ್ತೊಮ್ಮೆ ಓದಿ "...ತಾನವರನ್ನು ಚೆನ್ನಾಗಿ ಗೋಳು ಹೊಯ್ದುಕೊಳ್ಳಬೇಕು. ತನ್ನ ಮಾಲೀಕ ತನ್ನನ್ನು ಹಿಂಸಿಸುತ್ತಿರುವದಕ್ಕಿಂತಲೂ..." ಎಂದು ಆ ಯೋಚಿಸುವ ಮುಗ್ಧ ಬಾಲಕನ ಮನೋಭಾ ವವನ್ನು ನೋಡಿ. ಸೇಡಿನ ಹಾದಿಯಲ್ಲಿಯೇ ನಡೆ ಯಬೇಕೆಂದು ಅವನು ನಿಶ್ಚಯಿಸಿರುವುದು ಸ್ಪಷ್ಟ ವಾಗಿ ಕಾಣುತ್ತದೆ.

ಇಂದು ನಮ್ಮ ದೇಶದ ೨೦ ಕೋಟಿ ಮಕ್ಕಳಲ್ಲಿ ಸುಮಾರು ಅರ್ಧದಷ್ಟು ಮಕ್ಕಳು ನಿರಂತರ ಶೋಷ ಣೆಗೆ ಒಳಗಾಗಿದ್ದಾರೆ. ಈ ಮಕ್ಕಳ ಮನಸ್ಸೂ ಹೆಚ್ಚು ಕಡಿಮೆ ಟಾಮ್‌ನ ಮನಸ್ಸಿನಂತೇ ಇರಬಹುದ ಲ್ಲವೆ! ಹಾಗಿದ್ದಲ್ಲಿ ಭವಿಷ್ಯದ ಭಾರತವೆಷ್ಟು ಭೀಕರ!

ಈ ಮಕ್ಕಳ ಮನದಲ್ಲಿ ಎದ್ದಿರುವ ಸೇಡಿನ ಕಿಚ್ಚನ್ನು ನಂದಿಸಲು ಸಾಧ್ಯವಿಲ್ಲವೆ?

●

# “ನಿಮ್ಮ ಸಹಿ ತೋರಿಸಿ ಸಾಕು....”

• ಸೋನಿ

“ನಿಮ್ಮ ಸ್ನೇಹಿತ ಯಾರೆಂದು ಹೇಳಿಬಿಡಿ ಸಾಕು, ನೀವು ‘ಯಾರು?’ ಎಂದು ನಾನು ಹೇಳಿಬಿಡುತ್ತೇನೆ,” ಎಂಬುದೊಂದು ಸಾಮತಿ. ಆದರೆ ಮದ್ರಾಸಿನ ಈ ಯುವಕ ನಿಮ್ಮ ಹಸ್ತಾಕ್ಷರ ಅಥವಾ ಕೈ ಬರಹ ನೋಡಿಯೇ ನೀವು ಯಾರು, ಮತ್ತು ನಿಮ್ಮ ಸ್ಥಾನಮಾನವೇನು ಎಂಬಿವೇ ಮೊದಲಾದ ಹತ್ತಾರು ವಿವರಗಳನ್ನು ಕರಾರುವಾಕ್ಕಾಗಿ ನೀಡಿಬಿಡುತ್ತಾನೆ.

ಎನ್.ಎಸ್. ಮಘುಧೀರೇಶ್ವರನ್ (೩೫) ಹಾಗೇನೂ ಮಂತ್ರವಾದಿಯಲ್ಲ; ಮಾಟ-ಗೀಟ ಗೊತ್ತಿದ್ದವನೂ ಅಲ್ಲ. ಆತ ಒಬ್ಬ ಹಸ್ತಾಕ್ಷರ ನಿಪುಣ ಅಷ್ಟೆ. ಅದೂ ಆತನಿಗೆ ಅಯಾಚಿತವಾಗಿ ಒದಗಿ ಬಂದ ಜಾಣ್ಮೆ.

ಏಳನೆಯ ಕ್ಲಾಸಿನಲ್ಲಿದ್ದಾಗ ಮಘು ಉಳಿದವರ ಹಸ್ತಾಕ್ಷರಗಳಲ್ಲಿ ಹೆಚ್ಚೆಚ್ಚು ಆಸಕ್ತಿ ವಹಿಸತೊಡಗಿದ. ಆತನಿಗೆ ಆಗ ಅನಿಸಿದ್ದೆಂದರೆ ಒಬ್ಬ ಜಾಣ ವಿದ್ಯಾರ್ಥಿಯ ಕೈ ಬರಹ ಸುಂದರವಾಗಿರುತ್ತದೆ; ಅಚ್ಚುಕಟ್ಟಾಗಿರುತ್ತದೆ. ಒಬ್ಬ ದಡ್ಡ ವಿದ್ಯಾರ್ಥಿಯ ಕೈ ಬರಹ ಗೋಜಲುಗೋಜಲಾಗಿರುತ್ತದೆ.

ಮಘು ಬೆಳೆದಂತೆಲ್ಲ ಕೈ ಬರಹಗಳ ಸಂಗ್ರಹಕ್ಕೆ ತೊಡಗಿದ. ಅಡಾಲ್ಫ್ ಹಿಟ್ಲರ್, ಜಾನ್ ಕೆನ್ನೆಡಿ ಮುಂತಾದವರ ಕೈ ಬರಹದ ಮಾದರಿಗಳನ್ನು ಎಲ್ಲೆಲ್ಲಿಂದಲೋ ಪತ್ತೆಹಚ್ಚಿ ಅವುಗಳ ಆಧಾರದ ಮೇಲೆ ಆ ಮಹನೀಯರ ಗುಣಲಕ್ಷಣಗಳನ್ನು ಬರೆದಿಟ್ಟ. ಆ ನಂತರ ಆ ಎಲ್ಲರ ಕುರಿತು ಪ್ರಕಟವಾದ ಪುಸ್ತಕಗಳನ್ನು ಓದಿದಾಗ ಮಘು ತನ್ನಷ್ಟಕ್ಕೆ ತಾನೆ ಅಚ್ಚರಿಗೀಡಾದ. ಆತ ಬರೆದದ್ದು ಶೇಕಡಾ ‘೯೫ರಷ್ಟು’ ಸರಿಯಿತ್ತು!

ಅಪ್ಪ-ಅಮ್ಮಂದಿರಿಗೆ ಇಂಥ ಪ್ರತಿಭಾವಂತ ಮಗ ಇದ್ದರೆ ಹೆಮ್ಮೆಯೆನಿಸದೇ ಏನು? ಆದರೆ ಈ ಕೈಬರಹ ಶಾಸ್ತ್ರ (ಅಥವಾ **Graphology**) ಕುರಿತು ಅವರಿಗೆ ಏನೇನೂ ಗೊತ್ತಿಲ್ಲದ್ದರಿಂದ ಮಗನಿಗೆ ಆ ದಿಶೆಯಲ್ಲಿ ಸಹಾಯ ಮಾಡುವುದಾದರೂ ಹೇಗೆ? ತಾಯಿಯೋ ಮನೆಗೆಲಸ ನೋಡಿಕೊಂಡಿದ್ದಾಕೆ. ಅಪ್ಪ ತಾನಾಯಿತು. ತನ್ನ ನೌಕರಿಯಾಯಿತು ಎಂದಿದ್ದವ.

ಶಾಲೆಯಲ್ಲಿ ಹೆಡ್‌ಮಾಸ್ತರರಾದಿಯಾಗಿ ಎಲ್ಲರಿಗೂ ಮಘು ಎಂದರೆ ಗೌರವ. ಈತನೊಬ್ಬ ದೈವಾಂಶಸಂಭೂತನೆಂದೇ ಪರಿಗಣಿಸತೊಡಗಿದರು. ಮಾಸ್ತರುಗಳಂತೂ “ನನಗೆ ಯಾವಾಗ ಪ್ರಮೋಶನ್ನು ಸಿಗುತ್ತದಪ್ಪ?” “ನನ್ನ ಮಗಳಿಗೆ ಮದುವೆ ಯಾವಾಗ ಆದೀತು?” ಮುಂತಾಗಿ ಹೇಳೆಂದು ದುಂಬಾಲು ಬೀಳಬೇಕು. ಆದರೆ ಮಘು ಏನು ಜ್ಯೋತಿಷಿಯೆ? ಕೇವಲ ಕೈ ಬರಹದ ಆಧಾರದ ಮೇಲೆ ವ್ಯಕ್ತಿಯ ಗುಣಸ್ವಭಾವ ಒಟ್ಟಾರೆ ವ್ಯಕ್ತಿತ್ವವನ್ನು ಹೇಳುವ ಕಲೆ ಸಿದ್ಧಿಸಿತ್ತು. ಆದರೆ ಇಲ್ಲಿ ಕೂಡ ಈ ಹುಡುಗನದೊಂದು ವೈಶಿಷ್ಟ್ಯ ಉಂಟು. ಉಳಿದ ಗ್ರಾಫೋಲಜಿಸ್ಟರು ಕೈ ಬರಹದ ಒಂದು ಪ್ಯಾರಾ ನೋಡಿ ವ್ಯಕ್ತಿತ್ವದ ಕುರಿತು ಹೇಳಬಲ್ಲರಾದರೆ ಮಘುವಿಗೆ ಹೀಗೆ ಹೇಳಲು ಕೇವಲ ವ್ಯಕ್ತಿಯೊಬ್ಬನ ಸಹಿ ಸಾಕು.

“ಸಹಿ ಎಂಬುದು ಕೈಗಳ ಮೇಲೆ ಮಿದುಳಿಗೆ ಇರುವ ಹತೋಟಿಯ ಪರಿಣಾಮವಾಗಿ ಮೂಡಿ ಬರುವಂಥದು; ಅದು ವ್ಯಕ್ತಿಯೊಬ್ಬನ ಸುಪ್ತಮನಸ್ಸಿಗೆ ಹಿಡಿದ ಕನ್ನಡಿಯೂ ಹೌದು,” ಎನ್ನುತ್ತಾನೆ ಮಘು.

ಈ ದಿಶೆಯಲ್ಲಿ ಹೆಚ್ಚಿನ ಸಂಶೋಧನೆ ನಡೆಸುವ ಇಚ್ಛೆ ಮಘುಧೀರೇಶ್ವರನ್‌ಗೆ. ಅವನಿಗೆ ಮದ್ರಾಸಿನ ‘ಭಾರತಿರಾಜಾ ಹಾಸ್ಪಿಟಲ್ ಆ್ಯಂಡ್ ರೀಸರ್ಚ್ ಸೆಂಟರ್’ನ ಮ್ಯಾನೇಜಿಂಗ್ ಡೈರೆಕ್ಟರ್ ಡಾ. ಸಿ. ನಟೇಶನ್ ನೆರವು ನೀಡಲು ಮುಂದಾಗಿದ್ದಾರೆ.

ತಮಿಳುನಾಡಿನ ಒಂದು ಸಮಾಜ ಸೇವಾ ಸಂಸ್ಥೆ ಮಘುಧೀರೇಶ್ವರನ್‌ನನ್ನು ಕಳೆದ ವರ್ಷ ‘ಪ್ರತಿಭಾವಂತ ತರುಣ’ನೆಂಬ ಪ್ರಶಸ್ತಿ ನೀಡಿತು. ಮದ್ರಾಸಿನ ಶರೀಫ್‌ರಿಂದಲೂ ಸನ್ಮಾನ-ಪ್ರಶಸ್ತಿ ಈ ಹುಡುಗನಿಗೆ ಸಂದಿದೆ.

ಅಂದ ಹಾಗೆ ಈಗ ಮಘು ‘ಸಹಿ ಶಾಸ್ತ್ರ’ದ ಕ್ಲಾಸು ತೆರೆದು ಆಸಕ್ತ ಹುಡುಗರನ್ನು ತರಬೇತುಗೊಳಿಸುತ್ತಿದ್ದಾನೆ.



# ದ್ರಾಕ್ಷಿಗೆ ಗಂಟುಬಿದ್ದ ಒಯಿಡಿಯಂ ಎಂಬ ನಕ್ಷತ್ರಿಕ

ಕೃಷಿ ಇತಿಹಾಸ

## ೧೮೪೫.

ಎರಡು ಭಯಂಕರ ಪೀಡೆಗಳು ಯುರೋಪಿನ ಜನಜೀವನವನ್ನೇ ಅಸ್ತವ್ಯಸ್ತಗೊಳಿಸಿದ್ದವು. ಒಂದು ಐರ್ಲೆಂಡಿನಲ್ಲಿ ಆಲೂಗಡ್ಡೆಯ ಮೇಲೆ ಪ್ರಳಯಾಂತಕವಾಗಿ ಪಸರಿಸಿದ್ದ ಅಂಗಮಾರಿಯಾದರೆ ಇನ್ನೊಂದು ಫ್ರಾನ್ಸಿನ ದ್ರಾಕ್ಷಿಯನ್ನು ಕಬಳಿಸಲು ಉದ್ಯುಕ್ತವಾಗಿದ್ದ ಹಿಂದೆಂದೂ ಕಂಡು ಕೇಳರಿಯದಂಥ ಹೊಸದೊಂದು ರೋಗ.

ಮೊಟ್ಟಮೊದಲು ಈ ಹೊಸ ಪಿಡುಗು ಕಾಣಿಸಿಕೊಂಡದ್ದು ಮಾರ್ಗೇಟ್‌ನ ದ್ರಾಕ್ಷಿ ತೋಟಗಳಲ್ಲಿ. ಅಲ್ಲಿನ ಪ್ರತಿಯೊಂದು ಬಳ್ಳಿಯೂ ಪಿಡುಗಿಗೆ ಒಳಗಾಗಿತ್ತು. ಆ ರೋಗ ಬಳ್ಳಿಯ ಹೊಸ ಎಲೆ, ಕುಡಿಗಳ ಮೇಲೆಲ್ಲ ಬೆಳ್ಳನೆಯ ಹಿಟ್ಟು ಚೆಲ್ಲಿದಂತೆ ಹಬ್ಬಿಕೊಂಡಿತ್ತು. ದ್ರಾಕ್ಷಿಗಳು ಕೂಡ ಆ ಬಿಳಿ ಹಿಟ್ಟಿನಿಂದ ಮೆತ್ತಲ್ಪಟ್ಟು ನಂತರ ಸೀಳಿ, ಒಡೆದು ಹೋಗುತ್ತಿದ್ದವು. ಈ ಲಕ್ಷಣಗಳೊಂದಿಗೇ ಒಡೆದು ಹೋದ ದ್ರಾಕ್ಷಿಗಳು ಕೆಟ್ಟ ವಾಸನೆಯನ್ನು ಬೀರುತ್ತಿದ್ದುದರಿಂದ ಯಾರಿಗೂ ಬಳ್ಳಿಗಳ ಸಮೀಪಕ್ಕೆ ಹೋಗಲಾಗುತ್ತಿರಲಿಲ್ಲ...!

### ಟುಕರ್‌ನಿಗೆ ಸಂದ ಗೌರವ

ಮಾರ್ಗೇಟ್‌ನ ತೋಟವೊಂದನ್ನು ನೋಡಿಕೊಳ್ಳುತ್ತಿದ್ದ ಟುಕರ್ ಎಂಬಾತ ಇದೆಲ್ಲಾ 'ದೇವರ ಲೀಲೆ' ಎಂದೂ, ಆಲೂಗಡ್ಡೆಯ ಅಂಗಮಾರಿ ರೋಗ ದ್ರಾಕ್ಷಿಗೂ ಹಬ್ಬಲಿ ಎಂಬುದೇ 'ದೇವರ ಇಚ್ಛೆ' ಎಂದೂ ಭಾವಿಸಿದ. ದ್ರಾಕ್ಷಿಯ ಬೇಸಾಯದಲ್ಲಿ ಸಾಕಷ್ಟು ನುರಿತವನಾಗಿದ್ದರೂ ಅಲ್ಲಿಯವರೆಗೆ ದ್ರಾಕ್ಷಿಯ ಮೇಲೆ ಅವನು ಕಂಡ ರೋಗಗಳು, ಕೀಟಗಳು, ಅವುಗಳಿಗೆ ಪರಿಹಾರಗಳೆಲ್ಲವೂ ಅವನಿಗೆ ಗೊತ್ತಿದ್ದವು. ಹೀಗಿರುವಾಗ ಒಂದು ರೀತಿಯಲ್ಲಿ ಆತ ಹೀಗೆ ಭಾವಿಸಿದ್ದ. ರೋಗವನ್ನು ಪರೀಕ್ಷಿಸುವುದಕ್ಕೆ ಆತನ ಹತ್ತಿರ ಒಂದು ಸೂಕ್ಷ್ಮದರ್ಶಕ ಕೂಡ ಇತ್ತು. ಒಟ್ಟಿನಲ್ಲಿ ಆ ಭಾಗದಲ್ಲೇ ಅವನಷ್ಟು ಸುಧಾರಿಸಿದ ದ್ರಾಕ್ಷಿ ತೋಟದ ಮೇಲ್ವಿಚಾರಕರಾರೂ ಇದ್ದಿರಲಿಲ್ಲವೆಂದರೂ ನಡೆದೀತು. ಆತ ಒಮ್ಮೆ ಸಹಜವಾಗಿ ಸೂಕ್ಷ್ಮದರ್ಶಕದಲ್ಲಿ ಆ ಹಿಟ್ಟು ಏನೆಂದು ನೋಡಿದಾಗ ಅದು ದ್ರಾಕ್ಷಿಯ ಮೇಲೆ ಹಿಂದೆಂದೂ ಬಂದಿರದಂಥ 'ಬೂದಿ ರೋಗ' (Powdery Mildew)ದ ಶಿಲೀಂಧ್ರ ಎಂಬುದು ಕಂಡುಬಂತು. ಆದರೆ ರೋಗ ಹೊಸದಾಗಿದ್ದರಿಂದ ಅವನಿಗೆ ಅದರ ಹೆಸರಾಗಲಿ, ಪೂರ್ವಾಪರವಾಗಿ ಗೊತ್ತಾಗಲಿಲ್ಲ.

ಬೂದಿರೋಗ ಎಂಬುದು ಗೊತ್ತಾದ ತಕ್ಷಣ ಟುಕರ್ ತಡ ಮಾಡಲಿಲ್ಲ. ಆಗೆಲ್ಲ ಯಾವುದೇ ಬೆಳೆಯ ಮೇಲೆ ಈ ರೋಗ ಕಾಣಿಸಿಕೊಂಡರೆ ಗಂಧಕದ ಹಳದಿ ಪುಡಿಯನ್ನು ಉಪಯೋಗಿಸುವುದು ಸರ್ವೇಸಾಮಾನ್ಯವಾಗಿತ್ತು. ಟುಕರ್ ಈ

ವಿಷಯದಲ್ಲಿ ತುಂಬಾ ಅನುಭವಸ್ಥ. ಆತ ಗಂಧಕ ಹಾಗೂ ಸುಣ್ಣಗಳನ್ನು ತಣ್ಣೀರಿನಲ್ಲಿ ಕರಗಿಸಿದ ದ್ರಾವಣವನ್ನು ಬೂದಿ ಇರುವ ಬಳ್ಳಿಗಳ ಮೇಲೆಲ್ಲ ಎರಚಿದ. ಅವನ ಚಿಕಿತ್ಸೆ ಇಚ್ಛಿತ ಪರಿಣಾಮ ಬೀರಿತು...! ಕೆಲವೇ ದಿನಗಳಲ್ಲಿ ಬೂದಿರೋಗದ ಶಿಲೀಂಧ್ರ ಮಾಯವಾಗಿ ಬಳ್ಳಿಗಳೆಲ್ಲ ಪುನಃ ನಳನಳಿಸತೊಡಗಿ ಹಣ್ಣುಗಳನ್ನು ತಳೆದವು. ಆದರೆ ಈ ಉಪಚಾರ ಪಡೆಯದ ಇತರ ತೋಟಗಳಲ್ಲಿನ ಒಂದೇ ಒಂದು ಬಳ್ಳಿಯೂ ಹಣ್ಣನ್ನು ಬಿಡಲಿಲ್ಲ.

ಟುಕರ್ ತನ್ನ ಈ ಸಂಶೋಧನೆಯನ್ನು 'ಗಾರ್ಡನರ್ಸ್ ಜರ್ನಲ್'ನಲ್ಲಿ ಪ್ರಕಟಣೆಗಾಗಿ ಕಳಿಸಿದ. ಇನ್ನೊಂದು ಪ್ರಸಿದ್ಧ ಪ್ರಕಟಣೆಯಾಗಿದ್ದ 'ಗಾರ್ಡನರ್ಸ್ ಕ್ರೂನಿಕಲ್'ನಲ್ಲಿ ಟುಕರ್‌ನ ಸಂಶೋಧನೆಯ ಬಗ್ಗೆ ಬರೆಯುತ್ತ ರೆವರೆಂಡ್ ಎಂ.ಜೆ. ಬರ್ಕ್‌ಲಿ, ಅದೊಂದು ಹೊಸ ಅನ್ವೇಷಣೆಯೆಂದೂ, ತಾನು ಈವರೆಗೆ ಸಾವಿರಾರು ಶಿಲೀಂಧ್ರಗಳನ್ನು ನೋಡಿದ್ದರೂ ಬೂದಿರೋಗದ 'ಒಯಿಡಿಯಂ' ಶಿಲೀಂಧ್ರವನ್ನು ನೋಡಿದ್ದು ಅದೇ ಮೊದಲೆಂದೂ ಹೇಳಿ, ಅದನ್ನು ಕಂಡುಹಿಡಿದ ಟುಕರ್‌ನ ಹೆಸರನ್ನೇ ಸ್ವಲ್ಪ ಬದಲಾವಣೆ ಮಾಡಿ ಅದನ್ನು 'ಒಯಿಡಿಯಂ ಟುಕೆರಿ' ಎಂದು ಕರೆದು ನಿಜವಾಗಿಯೂ ತನ್ನ ದೊಡ್ಡತನವನ್ನು ಮೆರೆದ. ಏಕೆಂದರೆ ಆ ಶೋಧ ತನ್ನದೆಂದು ಹೇಳಬಹುದಾದ ಎಲ್ಲ ಅವಕಾಶಗಳೂ ಎಂ.ಜೆ. ಬರ್ಕಲಿಗೆ ಇದ್ದವು.

### ಕವಿದ ಕಾರ್ಮೋಡಗಳು

ಫ್ರಾನ್ಸ್‌ನ ವರ್ಸೇಲ್ಸ್‌ನಲ್ಲಿ ಕಾಣಿಸಿಕೊಂಡ ನಂತರ ಒಯಿಡಿಯಂ ಶಿಲೀಂಧ್ರ ಯಾವುದೇ ತಡೆ ಇಲ್ಲದೆ ಯುರೋಪಿನಲ್ಲೆಲ್ಲ ಕಾರ್ಮೋಡದಂತೆ ಕವಿಯತೊಡಗಿತು. ೧೮೫೧ರಷ್ಟೊತ್ತಿಗೆ ಸಂಪೂರ್ಣ ಫ್ರಾನ್ಸನ್ನು ಆವರಿಸಿಕೊಂಡ ನಂತರ ಅದು ತನ್ನ ಯಾತ್ರೆಯನ್ನು ಮುಂದುವರೆಸಿ ಪೋರ್ಚುಗಲ್, ಇಟಲಿ, ಸ್ವಿಟ್ಜರ್‌ಲಂಡ್, ಜರ್ಮನಿಗಳಲ್ಲಿನ ಪ್ರತಿಯೊಂದು ತೋಟವನ್ನೂ ಆಕ್ರಮಿಸಿತು.

ದ್ರಾಕ್ಷಿ ಬೆಳೆಗಾರರಿಗೆ ಆಕಾಶವೇ ಮೈಮೇಲೆ ಬಿದ್ದಂತಾಗಿ ದಿಕ್ಕೇ ತೋಚದಂತಾಯಿತು. ದ್ರಾಕ್ಷಾರಸದ ಉದ್ಯಮ ಒಯಿಡಿಯಮ್ಮಿನ ಭೀಭತ್ಸ ನರ್ತನದಿಂದ ತತ್ತರಿಸಿತು. ಯುರೋಪಿನಲ್ಲಿದ್ದ ಅತ್ಯಂತ ಮಧುರವಾದ ತಳಿಗಳೆಲ್ಲ ಈ ಶಿಲೀಂಧ್ರದ ಉರವಣಿಗೆಗೆ ಆಹುತಿಯಾದವು! ೧೮೫೨ರಲ್ಲಿ ಮದೀರಾ ದ್ವೀಪದಲ್ಲಿದ್ದ ಒಳ್ಳೆಯ ತಳಿಗಳನ್ನೆಲ್ಲ ಈ ಶ್ವೇತ ಶಿಲೀಂಧ್ರ ನುಂಗಿ ಹಾಕಿದ್ದರಿಂದ ರೈತರೆಲ್ಲ ದ್ರಾಕ್ಷಿಯನ್ನು ಕೈಬಿಟ್ಟು ಕಿತ್ತಳೆಯನ್ನು ಬೆಳೆಯಲು ಯೋಚಿಸತೊಡಗಿದರು.

ಯಾವುದೋ ಒಂದು ಘಟನೆಗೆ ಕಾರಣ ಊಹಾತೀತವಾಗಿದ್ದರೆ ಅದರ ಬಗ್ಗೆ ಪ್ರತೀತಿಗಳು ಹುಟ್ಟಿಕೊಂಡುಬಿಡುತ್ತವೆ. ಇಲ್ಲೂ ಹಾಗೆಯೇ ಆಯಿತು. ಸಿಹಿಯಾದ, ಸ್ವಾದಿಷ್ಟವಾದ ದ್ರಾಕ್ಷಿ ತಳಿಗಳೇ ಏಕೆ 'ಮೊದಲ ಬಲಿ'ಯಾದವು ಎನ್ನುವುದಕ್ಕೆ ಜನ ಕತೆ ಕಟ್ಟತೊಡಗಿದರು. ಹಳ್ಳಿಗಳಲ್ಲಿದ್ದ ವೃದ್ಧ ಮಾಟಗಾತಿಯರು ಮಾಡಲು ಬೇರೇನೂ ಕೆಲಸವಿಲ್ಲದೆ ಅಂಥ ಉತ್ತಮ ತಳಿಯ ದ್ರಾಕ್ಷಿ ಬಳ್ಳಿಗಳು ತಮ್ಮ ಉತ್ಕೃಷ್ಟತೆಯ ಬಗ್ಗೆ ಸೊಕ್ಕಿನಿಂದ 'ದೇವರಿಗೇ ಸವಾಲು' ಹಾಕದವೆಂದೂ ಅದನ್ನು

• ಸೋಮಶೇಖರ ಎಸ್. ರುಳಿ

ತಡೆದುಕೊಳ್ಳಲಾಗದೆ ದೇವರು ಅವುಗಳಿಗೆ 'ಹಾಳಾಗಿ ಹೋಗಿ' ಎಂದು ಶಾಪ ಕೊಟ್ಟನೆಂದೂ ಜನರನ್ನು ನಂಬಿಸತೊಡಗಿದರು. ಕೆಲವು ಸಸ್ಯಶಾಸ್ತ್ರಜ್ಞರು ಅವು ಆರೋಗ್ಯದಿಂದ ನಳ-ನಳಿಸಿ, ರಸ-ರಸಿತವಾಗಿದ್ದುದರಿಂದಲೇ ಇಂಥ ರೋಗಕ್ಕೆ ಬಲಿಯಾದವು ಎಂದು ವಾದಿಸತೊಡಗಿದರು. ಅವರು ತಮ್ಮ ವಾದವನ್ನು ಪುಷ್ಟೀಕರಿಸುವ 'ಪ್ಲೆಥೋರಾ' ಎಂಬ ರೋಗದ ಸ್ಥಿತಿಯ ಬಗ್ಗೆ ವಿವರಿಸಿದರು. (ಹಾಗೆಂದರೆ ರಕ್ತದಲ್ಲಿ ಕೆಂಪು ರಕ್ತಕಣಗಳು ಹೆಚ್ಚಾಗಿರುವ ಸ್ಥಿತಿಯ ರೋಗಾವಸ್ಥೆ). ಆದರೆ ಒಳ್ಳೆಯ ಆರೋಗ್ಯವೇ ಬಳ್ಳಿಗಳ ಈ ವಿಪತ್ತಿಗೆ ಕಾರಣವೆಂಬ ಸಿದ್ಧಾಂತವನ್ನು ಏನಿದ್ದರೂ ಬರ್ಕಲಿಯಂಥ ಯುರೋಪಿನ ವಿವೇಕವುಳ್ಳ ಸಸ್ಯಶಾಸ್ತ್ರಿಗಳು ಒಪ್ಪಲು ತಯಾರಿದ್ದಿಲ್ಲ. ಆಕ್ರಮಣಕ್ಕೊಳಗಾದ ತಳಿಗಳಲ್ಲಿ ಮಧುರವಾದ ಜೀವರಸವಿತ್ತು. ಅದನ್ನು ಒಯಿಡಿಯಂ ನಿಜಕ್ಕೂ ಸವಿದು, ಆನಂದಿಸಿದ್ದರಿಂದಲೇ ಈ ಪಾಡಾಯಿತು

ಎಂಬ ವಿಚಾರವನ್ನು ಮಂಡಿಸಿದ ಬರ್ಕಲಿಯನ್ನು ಬಹುತೇಕರು ಬೆಂಬಲಿಸಿದರು.

## ಶರವೇಗದ ಶಿಲೀಂಧ್ರ

ಎಲೆಗಳ ಮೇಲೆ ಬದುಕು ಸಾಗಿಸುತ್ತಿದ್ದ ಶಿಲೀಂಧ್ರ ತನ್ನ ಅಸಂಖ್ಯ ಹೀರುನಳಿಕೆ (Suckers) ಗಳನ್ನು ಜೀವಕೋಶಗಳ ಒಳಗೆ ತೂರಿಸಿ ನೀರು, ಆಹಾರಗಳನ್ನು ಪಡೆದುಕೊಳ್ಳುತ್ತಿತ್ತಲ್ಲದೆ ಇವೇ ಅದಕ್ಕೆ ಎಲೆಯ ಮೇಲೆ ತಳವೂರಲು ಆಧಾರವಾಗಿದ್ದವು. ಅದರ ಹೀರುವ ಈ ಕ್ರಿಯೆ ಎಷ್ಟು ಬಲವಾಗಿರುತ್ತಿತ್ತೆಂದರೆ ಅದು ಬೇರು ಬಿಟ್ಟ ಜಾಗದಲ್ಲಿ ಎಲೆಗಳ ಮೇಲೆ ಬಿಳಿಚಿಕೊಂಡ, ಕಂದು ಬಣ್ಣದ ಕಲೆಗಳು ಹಾಗೆಯೇ ಉಳಿದುಕೊಂಡು ಬಿಡುತ್ತಿದ್ದವು. ಎಲೆಯ ಸ್ಥಿತಿ ಬಾವಲಿಯೊಂದು ಯಾವುದೋ ಒಂದು ಪ್ರಾಣಿಯ ರಕ್ತಹೀರಿ ಹಿಪ್ಪೆ ಮಾಡಿದಂತಾಗುತ್ತಿತ್ತು. ಎಲೆಗಳ ಮೇಲೆ ಹಿಟ್ಟು ಮೆತ್ತಿಕೊಂಡಂತಿರುತ್ತಿದ್ದ ಒಯಿಡಿಯಂನ ಬೀಜಗಳ ಪೈಕಿ ಕೆಲವು ನೆಲದ ಮೇಲೆ ಬಿದ್ದು ಸತ್ತುಹೋದರೂ, ಉಳಿದ ಲಕ್ಷಾಂತರ ಬೀಜಗಳು ಗಾಳಿ, ಕೀಟಗಳು, ಪ್ರಾಣಿಗಳು ಅಲ್ಲದೆ ಸರಕುಗಳ ಸಾಗಾಟದೊಂದಿಗೂ ಪ್ರಸಾರವಾಗುತ್ತಿದ್ದವು. ಕೇವಲ ನಾಲ್ಕು ವರ್ಷಗಳಲ್ಲಿ ಅದು ಇಡೀ ಯುರೋಪನ್ನೇ ಆವರಿಸಿಕೊಂಡಿತು. ಒಂದೇ ಒಂದು ಚೌರಸ ಇಂಚಿನ ಎಲೆಯ ಕ್ಷೇತ್ರದಲ್ಲಿ ಸುಮಾರು ಎರಡು ಮಿಲಿಯ ಒಯಿಡಿಯಂನ ಬೀಜಗಳು ಇರುತ್ತಿದ್ದವೆಂದರೆ ಅವು ಗಾಳಿಯ ಮೂಲಕ ಪ್ರಸಾರವಾಗುವಾಗ ಶಿಲೀಂಧ್ರದ ಮೋಡಗಳೇ ನಿರ್ಮಾಣವಾಗಿರಲಿಕ್ಕೂ ಸಾಕು...!

## ತೆರೆದ ತಲೆಬಾಗಿಲು

೧೮೪೫ಕ್ಕಿಂತ ಮೊದಲೆಂದೂ ಶಿಲೀಂಧ್ರ ಯುರೋಪಿನಲ್ಲಿ ಇರಲಿಲ್ಲ. ಅಮೆರಿಕ ಅದರ ತವರಾಗಿತ್ತು. ಶ್ವೆನಿಜ್ ಎಂಬಾತ ಅದನ್ನು ೧೮೩೦ರ ದಶಕದಲ್ಲಿ ದ್ರಾಕ್ಷಿಯ ಮೇಲೆ ಕಂಡಿದ್ದರಿಂದ ಹಾಗೆ ಊಹಿಸಲು ಅವಕಾಶವಿತ್ತು. ಹಾಗಾದರೆ ಅದು ಯಾವ ಮಾರ್ಗವಾಗಿ, ಹೇಗೆ ಮತ್ತು ಯಾವಾಗ ಯುರೋಪಿಗೆ ಬಂತು? ಎಂಬ ಪ್ರಶ್ನೆಯೀಗ ಉದ್ಭವವಾಯಿತು.

ಹೆಚ್ಚು ಕಡಿಮೆ ಇದೇ ಕಾಲಕ್ಕೆ ಯುರೋಪಿನ ಸುಮಾರು ಎಲ್ಲ ರಾಷ್ಟ್ರಗಳೂ ತಮ್ಮ ಸಸ್ಯ ಸಂಪತ್ತನ್ನು ವೃದ್ಧಿಸಿಕೊಳ್ಳುವಲ್ಲಿ ನಿರತವಾಗಿದ್ದವು. ವಿವಿಧ ಸಸ್ಯಗಳ ಮ್ಯೂಸಿಮ್‌ಗಳ ಸಸ್ಯೋದ್ಯಾನಗಳ ನಿರ್ಮಾಣದಲ್ಲಿ ಉತ್ಸುಕವಾಗಿ ಅವು ಪರದೇಶಗಳಲ್ಲಿರಬಹುದಾದ ಆರ್ಥಿಕವಾಗಿ ಲಾಭ ಕೊಡುವಂತಹ ಎಲ್ಲ ಸಸ್ಯ ಪ್ರಭೇದಗಳ ಆಮದಿಗೆ ಮುಕ್ತ ಅವಕಾಶ ಕಲ್ಪಿಸಿದ್ದವು. ಇದಕ್ಕಾಗಿ ಅಮೆರಿಕ, ಆಫ್ರಿಕ, ಏಶಿಯ ಹೀಗೆ ಎಲ್ಲ ಕಡೆಗಳಿಂದಲೂ ಯಾವುದೇ ಹೊಸ ಸಸ್ಯಕ್ಕೆ ಸದಾ ಸ್ವಾಗತವಿತ್ತು. ವಿಕ್ಟೋರಿಯಾ ರಾಣಿಯ ಆಡಳಿತದಲ್ಲಂತೂ ಅಂತಾರಾಷ್ಟ್ರೀಯ ವ್ಯಾಪಾರ ಭರದಿಂದ ಸಾಗಿತ್ತು. ಆಗಲೇ ಇಂಗ್ಲೆಂಡಿನ ವಾಣಿಜ್ಯೋದ್ಯಮಿ ಹಾಗೂ ಶ್ರೀಮಂತರಲ್ಲಿ ತೋಟಗಾರಿಕೆ ಮಾಡುವ, ಅಲಂಕಾರಿಕ ಸಸ್ಯಗಳ ಪಾಲನೆಯ ಒಂದು ಹೊಸ ಖಯಾಲಿ ಆರಂಭವಾಯಿತು. ಅವರು ತಾವು ಗಳಿಸಿದ್ದೆಲ್ಲವನ್ನೂ ಬೆಚ್ಚಗಿನ ಮನೆ (Hot Houses)ಗಳ ನಿರ್ಮಾಣದಲ್ಲಿ ತೊಡಗಿಸಿದರು. ವಿದೇಶಿ ಸಸ್ಯಗಳನ್ನು ತರಿಸಿ ಅವುಗಳನ್ನು ಸಂಗ್ರಹಿಸುವುದಕ್ಕಾಗಿ ವ್ಯಯಿಸತೊಡಗಿದರು. ಕೆಲವೇ ವರ್ಷಗಳಲ್ಲಿ ಈ 'ಖಯಾಲಿ' ಶ್ರೀಮಂತಿಕೆಯ, ರಾಜವೈಭವದ, ಶಿಷ್ಟ ಸಂಸ್ಕೃತಿಯ, ಕಲೆಯ, ಸುಖ-ಸಮೃದ್ಧಿಯ, ಉತ್ಕರ್ಷದ ಸಂಕೇತವಾಯಿತು. ಎಲ್ಲಿ ನೋಡಿದಲ್ಲೆಲ್ಲ ಬೆಚ್ಚಗಿನ ಮನೆಗಳು, ಅವುಗಳಲ್ಲಿ ವಿದೇಶೀ ಸಸ್ಯ ಸಂಪತ್ತು ಸಾಮಾನ್ಯವಾಗತೊಡಗಿದವು.

ಇವೆಲ್ಲವುಗಳಿಂದಾಗಿ ಒಯಿಡಿಯಮ್ಮಿಗೆ ಯುರೋಪಿನ ಮಹಾದ್ವಾರವೇ ತೆರೆದಂತಾಯಿತು. ಅದು (ಇತರ ಕೀಟ ಹಾಗೂ ರೋಗಕಾರಕ ಜೀವಿಗಳೊಂದಿಗೆ) ಅಲ್ಲಿಗೆ ಬಂದು ಬೀಡುಬಿಟ್ಟಿತು. ಆದರೆ ನಿಜಕ್ಕೂ ಯಾವ ಮಾರ್ಗವಾಗಿ ಅದು ಖಂಡಾಂತರಗೊಂಡಿತು ಎಂಬ ಬಗ್ಗೆ ಯಾರಲ್ಲಿಯೂ ಖಚಿತವಾದ ಪುರಾವೆಗಳಿಲ್ಲ. ಆದರೆ ಅದು ಎಲ್ಲಿಂದ ಬಂದರೇನು? ಅದು ಮಾಡಬೇಕಾದ ಕೆಲಸವನ್ನು ಮಾಡಿ ಮುಗಿಸಿತ್ತು...!

## ತರಹೇವಾರಿ ವಿಧಾನಗಳು

ಗಂಧಕದಿಂದ ಒಯಿಡಿಯಮ್ಮನ್ನು ನಿಯಂತ್ರಿಸ

ಬಹುದು ಎಂದು ಟುಕರ್ ಪ್ರಕಟಿಸಿದ ನಂತರ ವಿಜ್ಞಾನಿಗಳು, ಬೆಳೆಗಾರರು, ಹವ್ಯಾಸಿಗಳೆಲ್ಲ ಅದನ್ನು ತಮ್ಮದೇ ಆದ ವಿಧಾನಗಳನ್ನು ಆವಿಷ್ಕರಿಸಿ ಪ್ರಯೋಗಿಸತೊಡಗಿದರು. ವರ್ಸೇಲ್ಸ್‌ನ 'ಅಗ್ರಾನಾಮಿಕ್ ಇನ್‌ಸ್ಟಿಟ್ಯೂಟ್'ನ ಪ್ರೊಫೆಸರ್ ಡಚಾರ್ತ್ರ ನೀರಿನಲ್ಲಿ ಗಂಧಕವನ್ನು ಕರಗಿಸಿ, ಒಂದು ಚಿಕ್ಕ ಪಿಚಕಾರಿಯಿಂದ ಅದನ್ನು ಬಳ್ಳಿಗಳ ಮೇಲೆ ಸಿಡಿಸಿದರು. ಇದರಿಂದ ಶಿಲೀಂಧ್ರ ಪರಿಣಾಮಕಾರಿಯಾಗಿ ಹತೋಟಿಗೆ ಬಂತು. ಆದರೆ ಈ ವಿಧಾನದಿಂದ ಒಂದು ಚಿಕ್ಕ ಪಿಚಕಾರಿಯಿಂದ ಒಂದು ಸಲಕ್ಕೆ ಒಂದೆರಡು ಬಳ್ಳಿಗಳನ್ನು ಉಪಚರಿಸಬಹುದಾಗಿತ್ತು. ನೂರಾರು ಎಕರೆ ದ್ರಾಕ್ಷಿ ಇದ್ದವರಿಗೆ ಈ ಕ್ರಮ ಯಾವುದೇ ಕೆಲಸಕ್ಕೆ ಬರುತ್ತಿರಲಿಲ್ಲ.

ಈ ಅಂಶವನ್ನೇ ಗಮನದಲ್ಲಿಟ್ಟುಕೊಂಡು ಬೇರೆ ಪ್ರಯೋಗಗಳನ್ನು ಮಾಡಲಾಯಿತು. ಡಚಟೆಲ್ ಎಂಬಾತ ಸುಮಾರು ಹನ್ನೆರಡು ನೂರು ಎಕರೆ ದ್ರಾಕ್ಷಿಯ ಮೇಲ ಮೊದಲು ಬರೀ ನೀರು ಚೆಲ್ಲಿ ಬಳ್ಳಿಗಳನ್ನು ಚೆನ್ನಾಗಿ ತೋಯಿಸಿದ ನಂತರ ವಿಶೇಷವಾಗಿ ತಯಾರಿಸಿದ ಒಂದು ದೊಡ್ಡ ತಿದಿಯಿಂದ ಗಂಧಕದ ಹುಡಿಯನ್ನು ತೋಟದಲ್ಲೆಲ್ಲ ಹರಡಿದ. ಈ ವಿಧಾನ ಸರಳವಾಗಿತ್ತಲ್ಲದೆ, ಬಹಳಷ್ಟು ಶ್ರಮದ ಉಳಿತಾಯವೂ ಆಗುತ್ತಿತ್ತು. ಆದರೆ ಇಲ್ಲೊಂದು ತೊಂದರೆ ಇತ್ತು. ಎಲೆಗಳೇನೋ ನೀರಿನಿಂದ ತೊಯ್ದು, ಹಸಿಯಾಗಿದ್ದು ಗಂಧಕವನ್ನು ಹಿಡಿದಿಡುತ್ತಿದ್ದವು. ಆದರೆ ಹಣ್ಣುಗಳು ನುಣುಪಾಗಿದ್ದು, ಅವುಗಳ ಮೇಲೆ ಬಿದ್ದ ನೀರು ಜಾರಿ ಹೋಗಿ ಮತ್ತೆ ಒಣಗಿದಂತಾಗಿ ಬಿಡುತ್ತಿದ್ದವು. ಇದರಿಂದ ಗಂಧಕದ ಸರಿಯಾದ ಉಪಯೋಗವಾಗುತ್ತಿದ್ದಿಲ್ಲ.

ಮುಂಜಾನೆಯ ಇಬ್ಬನಿಯಿಂದ ಎಲೆಗಳೆಲ್ಲ ಹಸಿಯಾಗಿರುವುದರಿಂದ ಅವುಗಳಿಗೆ ನೀರನ್ನು ಹೊಡೆಯದೆ ಬರೀ ಗಂಧಕದ ಹುಡಿ ಹಾರಿಸಿದರೆ ಸಾಕು ಎಂದಾರೋ ಒಬ್ಬರು ತಿಳಿದುಕೊಂಡರು. ಇದು ನಿಜಕ್ಕೂ ಪ್ರಾಯೋಗಿಕವಾಗಿತ್ತು. ಆದರೆ ಬರಬರುತ್ತ ಇದರ ಹಿಂದಿನ ಉದ್ದೇಶವನ್ನು ಅರ್ಥ ಮಾಡಿಕೊಳ್ಳದೆ ರೈತರು ಮಧ್ಯಾಹ್ನದ ಸುಡು ಬಿಸಿಲಿನಲ್ಲೂ ಬರೀ ಹಳದಿ ಪುಡಿಯನ್ನು ಹಾರಿಸತೊಡಗಿದರು. ಫಲಿತಾಂಶ ಸಹಜವಾಗಿ ನಿರಾಶಾದಾಯಕವಾಗತೊಡಗಿದ್ದರಿಂದ ಈ ವಿಚಾರವನ್ನೂ ಕೈಬಿ



ಡಲಾಯಿತು.

ಫ್ರೆಂಚ್ ರಸತಜ್ಞರು (Chemists)ಗಂಧಕದ ಚಿಕಿತ್ಸೆಯನ್ನು ಸುಧಾರಿಸುವ ಹಾದಿಯಲ್ಲಿ ಅದರ ಪುಡಿ ಹಾಗೂ ಸುಣ್ಣವನ್ನು ನೀರಿನಲ್ಲಿ ಕುದಿಸಿದಾಗ, ಹಳದಿ ಬಣ್ಣದ, ಕೆಟ್ಟ ತತ್ತಿಯ ವಾಸನೆಯನ್ನು ಹೊಂದಿದ ದ್ರಾವಣ ಸಿಕ್ಕಿತು. ಇದನ್ನವರು 'ಕ್ಯಾಲ್ಸಿಯಂನ ಸಲ್ಫುರೆಟ್' ಎಂದು ಕರೆದರು. ನೀರಿನಲ್ಲಿ ಇದನ್ನು ತಿಳಿಗೊಳಿಸಿ, ಬಳ್ಳಿಗಳಿಗೆ ಎರಚಿದಾಗ ಒಳ್ಳೆಯ ಪರಿಣಾಮ ಕಂಡುಬಂತು. ಅದರ ವಾಸನೆ ಕೂಡ ಬಲವಾಗಿದ್ದರಿಂದ ರೈತರಿಗೂ ತಾವು ತುಂಬಾ ಬಲಶಾಲಿಯಾದ ಔಷಧಿಯನ್ನು ಉಪಯೋಗಿಸಿದ್ದರ ಅನುಭವವಾಗುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ವಾಸನೆ ಹೊರಟು ಹೋಗುತ್ತಿದ್ದರೂ ಸುಣ್ಣದ ಕಾರ್ಬೊನೇಟ್ ಮತ್ತು ಗಂಧಕ ಬಹಳ ಹೊತ್ತಿನವರೆಗೆ ಎಲೆಯ ಮೇಲಿದ್ದು ಶಿಲೀಂಧ್ರದೊಂದಿಗೆ ಸೆಣಸಾಡತೊಡಗುತ್ತಿದ್ದವು. ಬೆಕ್ವೆರೆಲ್ ಎಂಬ ರಸಜ್ಞ-ಗಂಧಕದೊಂದಿಗೆ ಪೊಟ್ಯಾಷ್ (ಅಥವಾ ಸುಣ್ಣ) ಮತ್ತು ಒಂದು ಆಮ್ಲವನ್ನು ಬೆರೆಸಿ ತಯಾರಿಸಿದ ದ್ರಾವಣವಂತೂ ತುಂಬಾ ಸಮರ್ಥವಾಗಿತ್ತು.

ಇಲ್ಲಿ ಗಮನಿಸಬೇಕಾದ ಇನ್ನೂ ಒಂದು ವಿಚಾರವೆಂದರೆ ಅಕಸ್ಮಾತ್ ಮಳೆ ಬಂದರೆ ಎಲೆಯ ಮೇಲಿನ ಗಂಧಕ ತೊಳೆದು ಹೋಗಿ ಬಿಡುತ್ತಿತ್ತು. ಶಿಲೀಂಧ್ರವನ್ನು ಹೊಡೆದೋಡಿಸಬೇಕಾದರೆ ಅದು ಬಹಳ ಹೊತ್ತಿನವರೆಗೆ ಎಲೆಯ ಮೇಲೆ ಇರಲೇಬೇಕಾಗಿತ್ತು. ಈ ನಿಟ್ಟಿನಲ್ಲಿ ಬಹಳಷ್ಟು ಜನ ಕೆಲಸ ಮಾಡಿದರು. ಕೊನೆಗೆ ಗಂಧಕ-ಸುಣ್ಣದ ಮಿಶ್ರಣದಲ್ಲಿ ಸೋಪನ್ನು ಬೆರೆಸುವುದರಿಂದ ಉದ್ದೇಶವನ್ನು ಸಾಧಿಸಬಹುದು ಎಂಬುದು ಗೊತ್ತಾಯಿತು. ಆದರೆ ಇಲ್ಲಿಯೂ ಒಂದು ಸಮಸ್ಯೆ ಉದ್ಭವಿಸಿತು. ಸೋಪನ್ನು ಹಾಕಿದ ಕೂಡಲೇ ದ್ರಾವಣ ಹೆಪ್ಪುಗಟ್ಟಿ ಪಿಚಕಾರಿಯ ರಂಧ್ರವನ್ನು ಮುಚ್ಚಿಬಿಡುತ್ತಿತ್ತು.

ಮತ್ತೆ ಒಳ್ಳೆಯ ರಸಾಯನಕ್ಕಾಗಿ ಹುಡುಕಾಟ ಆರಂಭವಾಯಿತು. ಯಾವ ಮಹಾಶಯನ ತಲೆಯಲ್ಲಿ ಏನಿತ್ತೋ. ಒಬ್ಬ ಸೋಪಿನ ಬದಲು ದ್ರಾವಣಕ್ಕೆ ಕೆನೆ ತೆಗೆದ ಹಾಲನ್ನು ಸೇರಿಸಿದ. ಆಶ್ಚರ್ಯವೆಂಬಂತೆ ಅದು ಹೆಪ್ಪುಗಟ್ಟಲಿಲ್ಲ! ಪಿಚಕಾರಿಯ ರಂಧ್ರದಿಂದ ಸಲೀಸಾಗಿ ಹೊರಚಿಮ್ಮುತ್ತಿತ್ತು!

ಪಿಚಕಾರಿಯಿಂದ ಸಿಂಪಡಿಸುವ ಕೆಲಸ ಶ್ರಮದಾಯಕವೂ ಆಗಿತ್ತು, ಖರ್ಚಿನದೂ ಆಗಿತ್ತು. ಮದ್ಯಕ್ಕಾಗಿ ಮೀಸಲಾದ ತಳಿಗಳ ಮೇಲೆ ಸಿಂಪಡಿಸುವಾಗ ಹೆಚ್ಚಿನ ಎಚ್ಚರ ವಹಿಸಬೇಕಾಗಿತ್ತು. ಆದ್ದರಿಂದ ಮತ್ತೆ ರೈತರು ಕೇವಲ ಒಣ ಗಂಧಕವನ್ನಷ್ಟೇ ಎರಚಲು ಆರಂಭಿಸಿದರು. ಹಸಿರು ಮನೆ (Green Houses)ಗಳಲ್ಲಿ ಬಿಸಿನೀರಿನ ಪೈಪುಗಳ ಮೇಲೆ ಪುಡಿಯನ್ನು ಸವರಿದಾಗ ಗಂಧಕದ ಹೊಗೆಯೆದ್ದು ಶಿಲೀಂಧ್ರ ಹತೋಟಿಗೆ ಬರುತ್ತಿತ್ತು.

## ಬಾಲಂಗೋಚಿ

೧೮೫೦ರ ದಶಕದಲ್ಲಿ ನಿಜಕ್ಕೂ ಒಯಿಡಿಯಂನ ಉಪಟಳದಿಂದಾಗಿ ಯುರೋಪಿನಲ್ಲಿ ದ್ರಾಕ್ಷಿಯ ಕೃಷಿಕರಿಗೆಲ್ಲರಿಗೂ ಹುಚ್ಚು ಹಿಡಿಯುವಂತಾಗಿತ್ತು. ರೋಗದ ಹತೋಟಿಗಾಗಿ ಗಂಧಕದಂಥ ಒಂದು ರಾಸಾಯನಿಕ ಬಹಳ ಬೇಗನೇ ಸಿಕ್ಕರೂ ಅದನ್ನು ಉಪಯೋಗಿಸುವಾಗ ಸಾಕಷ್ಟು ಸಮಸ್ಯೆಗಳು ಹುಟ್ಟಿಕೊಂಡವು. ಒಂದು ವಿಶೇಷವೆಂದರೆ ಗಂಧಕದ ಸ್ಪರ್ಶವಾದ ಕೂಡಲೇ ಶಿಲೀಂಧ್ರ ಒಣಗಿ ಸತ್ತು ಹೋಗುತ್ತಿತ್ತು. ಹೊಸ ಚಿಗುರಿನ ಮೇಲೆ ಅದರ ಛಾಯೆ ಕೂಡ ಇರುತ್ತಿರಲಿಲ್ಲ. ಒಂದು ವೇಳೆ ಕೆಲವೇ ದಿನಗಳಲ್ಲಿ ಹಳದಿ ಪುಡಿ ಚಿಗುರೆಲೆಗಳ ಮೇಲೆ ಬೀಳದೆ ಇದ್ದರೆ ಒಯಿಡಿಯಂ ಅವುಗಳ ಮೇಲೆ ಸಂಸಾರ ಹೂಡುವುದು ಖಾತ್ರಿಯಾಗಿತ್ತು. ಇದರಿಂದಾಗಿ ಸುಮಾರು ಮೂರು ಸಲವಾದರೂ ಗಂಧಕದ 'ಹೋಮ' ಮಾಡಲೇಬೇಕಿತ್ತು. ಬರ ಬರುತ್ತ ಗಂಧಕದ ಶಕ್ತಿ ಕಡಿಮೆಯಾಗುತ್ತಿದೆ ಎಂಬ ಗುಲ್ಲೆದ್ದಿತು. ಜನ ಶ್ವೇತ ಶಿಲೀಂಧ್ರ ಈ ಚಿಕಿತ್ಸೆಗೆ ಒಗ್ಗಿಕೊಂಡು ಬಿಟ್ಟಿದೆ ಎಂದರು. ಆದರೂ ಆರೋಗ್ಯಕರವಾದ ದ್ರಾಕ್ಷಿಗೊಂಚಲುಗಳಿಗಾಗಿ ಬೆಳೆಗಾರರು ಎಷ್ಟು ಸಲ ಬೇಕಾದರೂ ಉಪಚರಿಸಲು ತಯಾರಿದ್ದರು. ಹೇಗಿದ್ದರೂ ಅದರ ಸುಧಾರಣೆಗಾಗಿ ವಿಜ್ಞಾನಿಗಳು, ಹವ್ಯಾಸಿಗಳು, ಆಸಕ್ತರು ಇದ್ದೇ ಇದ್ದರಲ್ಲ....!?

●




## ಗಣಿತದ ಮೋಜುಗಳು

೧) ನಲವತ್ತು ಕಿಲೋ ಗ್ರಾಂ ಭಾರವಿರುವ ಒಂದು ಬಂಡೆ ಬೆಟ್ಟದಿಂದ ಕೆಳಗೆ ಉರುಳಿ ನಾಲ್ಕು ಚೂರುಗಳಾಗಿ ಒಡೆದಿದೆ. ಆ ನಾಲ್ಕು ಚೂರುಗಳಿಂದ ೧ ರಿಂದ ೪೦ರ ವರೆಗಿನ ಯಾವ ತೂಕವನ್ನಾದರೂ ಮಾಡಬಹುದು. ಹಾಗಾದರೆ ಆ ತುಣುಕುಗಳ ತೂಕವೆಷ್ಟಿರಬಹುದು?

೨) ಒಂದು ರೂಪಾಯಿಯ ೧೦೦ ನಾಣ್ಯಗಳನ್ನು ಏಳು ಚೀಲಗಳಲ್ಲಿ ಹಾಕಿದೆ. ಚೀಲಗಳನ್ನು ಬಿಚ್ಚದೆ, ಆ ಏಳು ಚೀಲಗಳ ಸಹಾಯದಿಂದಲೇ ೧ ರಿಂದ ೧೦೦ರ ವರೆಗಿನ ಯಾವ ಮೊತ್ತವನ್ನಾದರೂ ಇನ್ನೊಬ್ಬರಿಗೆ ಕೊಡಬಹುದು. ಹಾಗಾದರೆ ಆ ಏಳು ಚೀಲಗಳಲ್ಲಿ ಎಷ್ಟೆಷ್ಟು ನಾಣ್ಯಗಳಿರಬಹುದು?

೩) ಎಂಟರ ಅಂಕಿಯನ್ನು ಎಂಟು ಬಾರಿ ಮಾತ್ರ ಉಪಯೋಗಿಸಿ ಅದರ ಮೊತ್ತ ಒಂದು ಸಾವಿರ ಆಗುವಂತೆ ಹೇಗೆ ಬರೆಯಬಹುದು?

೪) ಒಬ್ಬ ಎಣ್ಣೆಯ ವ್ಯಾಪಾರಿ ತಾನು ಸಾಯುವಾಗ ತನ್ನ ಮೂರು ಜನ ಗಂಡುಮಕ್ಕಳಿಗೆ ತುಂಬಿದ ಏಳು, ಅರ್ಧ ತುಂಬಿದ ಏಳು ಮತ್ತು ಖಾಲಿ ಇರುವ ಏಳು ಬ್ಯಾರಲ್ಲುಗಳನ್ನು ಬಿಟ್ಟು ಹೋದನು. ತನ್ನ ಮೃತ್ಯುಪತ್ರದಲ್ಲಿ ಅವನು ಎಲ್ಲ ಬಗೆಯ ಬ್ಯಾರಲ್ಲುಗಳು ಎಲ್ಲರಿಗೂ ಸಮಾನವಾಗಿ ಬರಬೇಕೆಂದು ಸೂಚಿಸಿದ್ದನು. ಹಾಗಾದರೆ ಅವನ ಕೊನೆಯ ಇಚ್ಛೆಯನ್ನು ಈಡೇರಿಸುವದು ಹೇಗೆ?

• ಮುರಲೀಧರ ಕುಲಕರ್ಣಿ

ಉತ್ತರಗಳು:

೨) ೧, ೩, ೯, ೨೭

೩) ೧, ೨, ೪, ೮, ೧೬, ೩೨, ೩೭

೪) ೮೮೮
೮೮
೮
೮
೮
೧೦೦೦

೫) ಅರ್ಧ ತುಂಬಿದ ಬ್ಯಾರಲ್ಲುಗಳಲ್ಲಿರುವ ಎಣ್ಣೆಯನ್ನು ಅರ್ಧ ತುಂಬಿದ ಮತ್ತೆರಡು ಬ್ಯಾರಲ್ಲುಗಳಿಗೆ ಸುರುವಬೇಕು. ಇದರಿಂದ ಪೂರ್ತಿ ತುಂಬಿದ ಬ್ಯಾರಲ್ಲುಗಳ ಸಂಖ್ಯೆ ೯ ಆಗುವದು. ಅರ್ಧ ತುಂಬಿದ ಬ್ಯಾರಲ್ಲುಗಳ ಸಂಖ್ಯೆ ೩ ಆಗುವದು ಮತ್ತು ಪೂರ್ತಿ ಖಾಲಿ ಇರುವ ಬ್ಯಾರಲ್ಲುಗಳ ಸಂಖ್ಯೆ ೯ ಆಗುವದು. ಇದರಿಂದ ಮೂವರಿಗೆ ಎಲ್ಲ ಬಗೆಯ ಬ್ಯಾರಲ್ಲುಗಳನ್ನು ಸಮವಾಗಿ ಹಂಚಬಹುದು.



# ಹಾವುಗಳ ಪ್ರಪಂಚ

• ಶಿ.ಜು. ಪಾಶ

ಹಾವುಗಳು ಹೆಚ್ಚಾಗಿ ಉಷ್ಣ ಮತ್ತು ಸಮಶೀತೋಷ್ಣ ಪ್ರದೇಶಗಳಲ್ಲಿ ಜೀವಿಸುತ್ತವೆ. ಧ್ರುವಪ್ರದೇಶ ಹತ್ತಿರವಾದಂತೆ ಹಾವುಗಳ ಜಾತಿಯ ಸಂಖ್ಯೆ ಕಡಿಮೆಯಾಗುತ್ತದೆ. ಸ್ಪೇನ್ ಮತ್ತು ಇಟಲಿಯಲ್ಲಿ ಹದಿನಾಲ್ಕು ಜಾತಿಯ ಹಾವುಗಳು, ಫ್ರಾನ್ಸಿನಲ್ಲಿ ಹನ್ನೊಂದು, ಹಾಲೆಂಡ್, ಬೆಲ್ಜಿಯಂ, ಇಂಗ್ಲೆಂಡ್ ಮತ್ತು ಸ್ಕಾಂಡಿನೇವಿಯದ ದೇಶಗಳಲ್ಲಿ ಮೂರು ಜಾತಿಯ ಹಾವುಗಳು ಮಾತ್ರ ಇವೆ. ಐಸ್‌ಲೆಂಡ್, ಐರ್ಲಂಡ್ ಮತ್ತು ನ್ಯೂಜಿಲೆಂಡುಗಳಲ್ಲಿ ಹಾವುಗಳೇ ಇಲ್ಲ.

ಜಗತ್ತಿನಲ್ಲಿ ಸುಮಾರು ೨,೬೦೦ ಜಾತಿಯ ಹಾವುಗಳು ಇವೆ. ಈ ಪೈಕಿ ೪೦೦ ವಿಷದ ಹಾವುಗಳೆಂದು ಅಂದಾಜು. ಭಾರತದಲ್ಲಿ ೩೫೦ ಜಾತಿಯ ಹಾವುಗಳಿವೆ. ಇವುಗಳಲ್ಲಿ ಸಮಾರು ೭೦ ವಿಷದ ಹಾವುಗಳು. ಪ್ರತಿವರ್ಷ ಪ್ರಪಂಚದಲ್ಲಿ ಸುಮಾರು ೨೦,೦೦೦ ಜನರು ಹಾವಿನ ಕಡಿತದಿಂದ ಸಾಯುತ್ತಾರೆ. ಭಾರತದಲ್ಲಿ ಹಾವಿನ ಕಡಿತ

ದಿಂದ ಸಾಯುವವರ ಸಂಖ್ಯೆ ಸುಮಾರು ೧೦,೦೦೦.

ಮುಖ್ಯವಾದ ವಿಷದ ಹಾವುಗಳೆಂದರೆ ಕಾಳಿಂಗ ಸರ್ಪ ಅಥವಾ ಕೃಷ್ಣಸರ್ಪ ಅಥವಾ ಕರಿನಾಗರ, ಗೋಧಿನಾಗರ, ಕನ್ನಡಿ ಹಾವು, ಹವಳದ ಹಾವು, ಬುಡಬುಡಿಕೆ ಹಾವು, ಕಟ್ಟು ಹಾವು, ಆಫ್ರಿಕಾದ ಕಪ್ಪು ಮಾಂಬಾ ಮತ್ತು ಸಮುದ್ರದ ಹಾವು. ಈ ಪೈಕಿ ಕಾಳಿಂಗ ಸರ್ಪ ಪ್ರಪಂಚದ ಅತ್ಯಂತ ಘೋರ ವಿಷಸರ್ಪ. ಇದರ ಕಡಿತದಿಂದ ಮನುಷ್ಯ ಐದೇ ನಿಮಿಷಗಳಲ್ಲಿ ಸಾಯಬಹುದು. ಇದು ಸುಮಾರು ಹದಿನೆಂಟು ಅಡಿಗಳಷ್ಟು ಉದ್ದ ಬೆಳೆಯುತ್ತದೆ.

ಕಾಳಿಂಗ ಸರ್ಪವನ್ನು ಬಿಟ್ಟರೆ ಆಫ್ರಿಕಾದ ಮಾಂಬಾ ಹಾವಿಗೆ ವಿಷದ ಹಾವುಗಳಲ್ಲಿ ಎರಡನೆಯ ಸ್ಥಾನ. ಇದು ನಂಬಲಸಾಧ್ಯವಾದ ವೇಗದಲ್ಲಿ ಎರಗಿಬಂದು ಕಚ್ಚುತ್ತದೆ. ಕಚ್ಚಿದ ಹತ್ತು ನಿಮಿಷಗಳಲ್ಲಿ ಮನುಷ್ಯ ಸಾಯುವುದು ನಿಶ್ಚಿತ.

ಸಾಮಾನ್ಯವಾಗಿ ಹಾವಿನ ವಿಷ ಗಟ್ಟಿಯಾದ ಹಳದಿ ಮಡ್ಡಿಯಂತಿರುತ್ತದೆ. ಆದರೆ ಬೇರೆ ಬೇರೆ ಬಣ್ಣಗಳೂ ಉಂಟು. ಅದಕ್ಕೆ ರುಚಿಯೆಂಬುದಿಲ್ಲ.

ವಿಷದ ಹಾವುಗಳಲ್ಲಿ ಕಣ್ಣುಗಳ ಹಿಂದೆ ವಿಷದ ಚೀಲ ಇರುತ್ತದೆ. ವಿಷದ ಚೀಲದಿಂದ ಹೊರಟ ಒಂದು ಕೊಳವೆ ಬಾಯಿಯ ಕಡೆಗೆ ಇರುತ್ತದೆ. ಕೊಳವೆಯ ತುದಿಯಲ್ಲಿ ಎರಡು ದೊಡ್ಡದಾದ, ಬಾಗಿರುವ ಚೂಪಾದ ಹಲ್ಲುಗಳು ಇವೆ. ಹಲ್ಲುಗಳಲ್ಲಿ ತಲಾ ಒಂದೊಂದು ರಂಧ್ರವಿರುತ್ತದೆ. ಹಾವು ಕಚ್ಚಿದಾಗ ವಿಷ ರಂಧ್ರದ ಮೂಲಕ ಹರಿದು ಹಾವು ಮಾಡಿರುವ ಗಾಯದ ಮೂಲಕ ದೇಹವನ್ನು ಸೇರುತ್ತದೆ. ವಿಷದ ಹಲ್ಲು ಬಿದ್ದುಹೋದರೆ ಹೊಸ ಹಲ್ಲು ಮೊಳೆಯುತ್ತದೆ. ವಿಷದ ಚೀಲ ಖಾಲಿಯಾದರೆ ಮತ್ತೆ ತುಂಬುತ್ತದೆ.

ತನ್ನ ಉದ್ದವಾದ ದೇಹದ ನೆರವಿನಿಂದ ಹಾವು ನೀರಿನಲ್ಲಿ, ಕಲ್ಲು ಪೊಟರೆಗಳಲ್ಲಿ, ಮುಳ್ಳು ಪೊದೆಗಳ ಸಂದಿಯಲ್ಲಿ ಮತ್ತು ಮರಗಳ ಮೇಲೆ ಸರಾಗವಾಗಿ ಚಲಿಸುತ್ತದೆ. ಮೈಯನ್ನು ಮರಕ್ಕೆ ಸುತ್ತಿಕೊಳ್ಳುವ ಹಸಿರು ಹಾವು ಮತ್ತು ಮರದ ಹಾವುಗಳು ಹೆಚ್ಚು ಕಡಿಮೆ ತಮ್ಮ ಜೀವಮಾನವೆಲ್ಲ ಮರದ ಮೇಲೆಯೇ ಕಳೆಯುತ್ತವೆ. ಆಫ್ರಿಕಾದ ಮಾಂಬಾ ಗಂಟೆಗೆ ೩೦ ಮೈಲುಗಳ ವೇಗದಲ್ಲಿ ಚಲಿಸಬಲ್ಲದು.

ಸಾಧಾರಣವಾಗಿ ಪ್ರಾಣಿಗಳು ಆಹಾರ



## ಜ್ಞಾನನಿಧಿ

ವನ್ನು ಅಗಿದು ತಿನ್ನುತ್ತವೆ. ಆದರೆ ಹಾವು ತನ್ನ ಆಹಾರವನ್ನು ಇಡಿಯಾಗಿಯೇ ನುಂಗುತ್ತದೆ. ತನ್ನ ತಲೆಯ ಗಾತ್ರಕ್ಕಿಂತ ದೊಡ್ಡದಾದ ಆಹಾರವನ್ನೂ ಹಾವು ನುಂಗಬಲ್ಲದು. ಆಹಾರವನ್ನು ನುಂಗುವಾಗ ಹಾವು ೧೨೫ ಅಂಶಗಳಷ್ಟು ಪ್ರಮಾಣದಲ್ಲಿ ಬಾಯನ್ನು ಅನಾಯಾಸವಾಗಿ ತೆರೆಯಬಲ್ಲದು.

ಹಾವು ಇಲಿ, ಹೆಗ್ಗಣ, ಮೊಲ, ಕೋಳಿ ಮೊಟ್ಟೆ, ಕೋಳಿಮರಿ, ಪಾರಿವಾಳ, ಹಕ್ಕಿಗಳು ಮತ್ತಿತರ ಪ್ರಾಣಿಗಳನ್ನು ಹಾಗೂ ಕೀಟಗಳನ್ನು ತಿನ್ನುತ್ತದೆ. ನಾಗರಹಾವಿಗೆ ತನಗಿಂತ ಚಿಕ್ಕದಾದ ಕಾಳಿಂಗ ಸರ್ಪ ಆಹಾರ. ಮತ್ತು ಕಾಳಿಂಗ ಸರ್ಪಕ್ಕೆ ನಾಗರಹಾವು ಆಹಾರವಾಗುವುದೂ ಉಂಟು. ಹಾವುಗಳು ಮೊಟ್ಟೆಯನ್ನು ನುಂಗುತ್ತವೆ. ಆದರೆ ಹಾಲು ಕುಡಿಯಲು ಹಾವುಗಳು ಹಸುವಿನ ಕೆಚ್ಚಲಿಗೆ ಬಾಯಿ ಹಾಕುತ್ತವೆ ಎನ್ನುವುದು ಕಟ್ಟುಕಥೆ. ಮಹಾಗಾತ್ರದ ಹೆಬ್ಬಾವೊಂದು ಸುಮಾರು ೨೦೦ ಪೌಂಡು ತೂಕದ ಕರಡಿಯನ್ನು ತಿಂದು ಹಾಕಿದ್ದೂ ಉಂಟು. ದೊಡ್ಡ ಹೆಬ್ಬಾವು ಸಣ್ಣ ಹೆಬ್ಬಾವನ್ನು ನುಂಗಿದ್ದೂ ಇದೆ.

ಹಾವುಗಳು ಸುಮಾರು ೨೫ ರಿಂದ ೩೦ ವರ್ಷ ಬದುಕಬಲ್ಲವು. ಮಲೇಶಿಯದ ಒಂದು ಹೆಬ್ಬಾವು ೭೫ ವರ್ಷ ಬದುಕಿರುವ ಉದಾಹರಣೆಯಿದೆ.

ಚೀನ ಮತ್ತು ಮ್ಯೆನ್‌ಮಾರ್‌ಗಳಲ್ಲಿ ಹೆಬ್ಬಾವು ಅನೇಕರಿಗೆ ಪ್ರಿಯವಾದ ಆಹಾರ. ಮಧ್ಯಪ್ರದೇಶ ಮತ್ತು ನೇಫಾ ಪ್ರದೇಶದಲ್ಲಿ ಹಾವು ತಿನ್ನುವ ಬುಡಕಟ್ಟು ಜನಾಂಗದವರಿದ್ದಾರೆ. ಕೆಲವು ಕಾಡು ಜನರು ಹಾವಿನ ಮೊಟ್ಟೆಯನ್ನು ತಿನ್ನುತ್ತಾರೆಂದು ವರದಿಯಾಗಿದೆ.

ಪಶ್ಚಿಮ ಆಫ್ರಿಕಾದ ಒಂದು ಜಾತಿಯ ಹೆಬ್ಬಾವಿನ ಉದ್ದ ಮೂರೇ ಅಡಿ. ಆದರೆ ಇದು ಬಲು ಚುರುಕು. ಮರಳಿನ ಮೇಲೆ ಇಟ್ಟ ಕೆಲವೇ ಸೆಕೆಂಡುಗಳಲ್ಲಿ ಮರಳಿನೊಳಗೆ ಹುದುಗಿ ಮಾಯವಾಗುತ್ತದೆ.

ಥೈಲೆಂಡ್ ಮತ್ತಿತರ ಪ್ರದೇಶಗಳಲ್ಲಿ ಕಾಣಬರುವ ಕೊಳವೆ ಹಾವು ಹೆಸರೇ ಹೇಳುವಂತೆ ತುದಿಯಿಂದ ಬಾಯಿಯವರೆಗೆ ಕೊಳವೆಯಂತೆಯೇ ಇರುತ್ತದೆ. ಹೀಗಾಗಿ ತಲೆ ಯಾವುದು ಬಾಲ ಯಾವುದು ಎಂಬುದು ಕೂಡಲೇ ಗೊತ್ತಾಗುವುದಿಲ್ಲ. ಶತ್ರು ಎದುರಾದಾಗ ಈ ಹಾವು ಬಾಲವನ್ನೇ ತಲೆಯಂತೆ ಮೇಲೆತ್ತುತ್ತದೆ.

ಏಶಿಯದ ಓರಿಯೆಂಟಲ್ ರ್‍ಯಾಟ್ ಎಂಬ ಹಾವು ದಾಳಿ ಮಾಡುವವರ ಮೇಲೆ ನೇರವಾಗಿ ನೆಲದಿಂದ ಮೇಲಕ್ಕೆ ಎದ್ದು ನಿಂತು ಅವರತ್ತ ನೆಗೆಯುತ್ತದೆ.

ಮಡಗಾಸ್ಕರ್‌ನಲ್ಲಿ ಕಂಡುಬರುವ ಕೊಲು-ಬ್ರಿನ್ ಎಂಬ ಒಂದು ಜಾತಿಯ ಹಾವು ವಿಷದ ಹಾವಲ್ಲ. ಆದರೆ ಇದು ಮರದ ಮೇಲಿಂದ ಮನುಷ್ಯ ಅಥವಾ ಪ್ರಾಣಿಯ ಮೇಲೆ ಬಿದ್ದು ಅತ್ಯಂತ ಘೋರ ರೀತಿಯಲ್ಲಿ ಕಚ್ಚುತ್ತದೆ.

ಆಫ್ರಿಕದ ಕಪ್ಪು ಕುತ್ತಿಗೆಯ ನಾಗರಹಾವು ಸುಮಾರು ಆರು ಅಡಿ ದೂರದಲ್ಲಿರುವ ತನ್ನ ಶತ್ರುವಿನ ಕಣ್ಣಿಗೆ ಸರಿಯಾಗಿ ವಿಷವನ್ನು ಉಗುಳುತ್ತದೆ. ವಿಷ ಕಣ್ಣಿಗೆ ಬಿದ್ದರೆ ಶತ್ರುವಿನ ದೃಷ್ಟಿ ತಾತ್ಕಾಲಿಕವಾಗಿ ಕುರುಡವಾಗುತ್ತದೆ.

ಅಮೇರಿಕದ ಹವಳದ ಹಾವಿಗೆ ಕಪ್ಪು, ಕೆಂಪು ಮತ್ತು ಹಳದಿಯ ಪಟ್ಟೆಗಳಿರುತ್ತವೆ. ಮೂರು ಅಡಿಗಿಂತ ಹೆಚ್ಚು ಬೆಳೆಯದ ಈ ಹಾವು ನಾಗ ಪ್ರಪಂಚದಲ್ಲೇ ಅತಿ ಸುಂದರ.

(ವಿವಿಧ ಮೂಲಗಳಿಂದ)

## ಈ ವಿಚಿತ್ರ ಕಾನೂನುಗಳು

* ಫಿಲಿಪೀನ್ಸ್ ದೇಶದಲ್ಲಿ ಪೊಲೀಸರು ಮೀಸೆಯನ್ನು ಬೆಳೆಸುವಂತಿಲ್ಲ.
* ಸಿಂಗಪೂರ್‌ನಲ್ಲಿ ನಾಯಿಗಳು ಊರಿನೊಳಗೆ ಬರಕೂಡದೆಂಬ ಕಾನೂನಿದೆ.
* ಜರ್ಮನಿಯಲ್ಲಿ ಟ್ಯಾಕ್ಸಿ ಡ್ರೈವರುಗಳು ವಾಹನ ನಡೆಸುತ್ತಿರುವಾಗ ಪ್ರಯಾಣಿಕರೊಂದಿಗೆ ಮಾತನಾಡಬಾರದು.
* ಚೀನೀ ದೇಶದ ಬೀಜಿಂಗ್ ನಗರದಲ್ಲಿ ನಾಯಿಗಳನ್ನು ಸಾಕುವುದು ಕಾನೂನಿಗೆ ವಿರುದ್ಧ.
* ಜಿನೀವಾ ನಗರದಲ್ಲಿ ೧೮ ವರ್ಷಗಳೊಳಗೆ ಇರುವ ಮಕ್ಕಳು ಸಿನಿಮಾ ನೋಡಕೂಡದು.
* ರುಮಾನಿಯಾದಲ್ಲಿ ಗಡ್ಡ ಬೆಳೆಸಿಕೊಳ್ಳುವುದಕ್ಕೆ, ಕೆಲವು ಪ್ರಾಣಿಗಳನ್ನು ಭೇಟಿಯಾಡುವುದಕ್ಕೆ ಲೈಸೆನ್ಸ್ ತೆಗೆದುಕೊಳ್ಳುವುದು ಅಗತ್ಯ.
* ಪೋರ್ಚುಗಲ್ಲಿನಲ್ಲಿ ಸಿಗರೇಟ್ ಲೈಟರ್ ಇಟ್ಟುಕೊಳ್ಳುವುದಕ್ಕೂ ಲೈಸೆನ್ಸ್ ಬೇಕು.
* ನೆಬ್ರಾಸ್ಕಾ (ಅಮೇರಿಕಾ)ದಲ್ಲಿ ಕ್ಷೌರಿಕರು ಬೆಳಿಗ್ಗೆ ಐದು ಗಂಟೆಯಿಂದ ಸಾಯಂಕಾಲ ಏಳುಗಂಟೆಯ ಅವಧಿಯಲ್ಲಿ ಬೆಳ್ಳುಳ್ಳಿ ಸೇವಿಸಕೂಡದು.
* ಭಾನುವಾರಗಳಲ್ಲಿ ಬೆಳ್ಳುಳ್ಳಿ ತಿಂದು ನಾಲ್ಕು ಗಂಟೆಗಳಾಗುವವರೆಗೂ ಬಸ್ಸಿನಲ್ಲಿ ಪ್ರಯಾಣಿಸುವುದನ್ನು ಇಂಡಿಯಾನಾ ಪ್ರಭುತ್ವ ನಿಷೇಧಿಸಿದೆ.

• ಕೋಲಾರ್ ಕೃಷ್ಣ ಅಯ್ಯರ್

### ಜ್ಞಾನನಿಧಿ

ಆತನ ಹೆಸರು ಸ್ವಾನ್. ವಯಸ್ಸು ನಲವತ್ತೊಂಭತ್ತು. ಆತನಿಗೆ ಎಪ್ಪತ್ತುಸಲ ಹೃದಯ ಬಡಿತ ನಿಂತಿತ್ತು. ಅದಕ್ಕಿಂತಲೂ ಆಶ್ಚರ್ಯವೇನೆಂದರೆ ಒಂದೇ ದಿನದಲ್ಲಿ ೨೭ ಸಲ ಹೃದಯ ಬಡಿತ ನಿಂತಿತ್ತು ಆತನಿಗೆ.

ಮೊದಲ ಸಲ ಆತನಿಗೆ ಹೃದಯಾಘಾತ ಬಂದದ್ದು ನಲವತ್ತೈದರ ಪ್ರಾಯದಲ್ಲಿ. ೧೯೭೭ರ ಏಪ್ರಿಲ್‌ನಲ್ಲೊಂದು ದಿನ ಮಧ್ಯಾಹ್ನ ಕಾರು ನಡೆಸುತ್ತಿದ್ದಾಗ ನೋವು ಬಂದಿತ್ತು. ಆದರೂ ಹೇಗುಹೇಗೋ ಸುಧಾರಿಸಿಕೊಂಡು ಮನೆಯನ್ನು ತಲುಪಿದ. ಅನಂತರ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು, ಮೊದಲಿನಂತಾಗಿ ಮತ್ತೆ ಡ್ಯೂಟಿಗೆ ಸೇರಿಕೊಂಡ.

## ಎಪ್ಪತ್ತು ಸಲ ಹೃದಯಬಡಿತ ನಿಂತ ಮನುಷ್ಯ

• ಕಂಬಳಿ, ಆದವಾನಿ

ಆ ಹೃದಯಘಾತವನ್ನು ಮನಸ್ಸಿಗೆ ಅಷ್ಟು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ ಸ್ವಾನ್.

೧೯೮೦ರ ಪ್ರಾರಂಭದಲ್ಲಿ ಮತ್ತೊಮ್ಮೆ ಹೃದಯಾಘಾತ ಸಂಭವಿಸಿತು. ಹೃದಯದ ಸ್ಥಿತಿ ಗಂಭೀರವಾಗಿದ್ದರಿಂದ ಆಪರೇಶನ್ ಮಾಡಬೇಕಾಯಿತು. ಆಪರೇಷನ್ ನಂತರ ಮುಖವೆಲ್ಲಾ ಬಿಳಿಚಿಕೊಂಡಿತು. ಆಸ್ಪತ್ರೆಯಿಂದ ಹೊರಬರುವಾಗ ಅವನ ನೆಂಟರಿಷ್ಟರಿಗೆ 'ಸ್ವಾನ್' ಇನ್ನು ಹೆಚ್ಚು ದಿನಗಳು ಬದುಕುವ ಅವಕಾಶಗಳಿಲ್ಲವೆಂದು ಡಾಕ್ಟರ್ ಹೇಳಿದರು.

ಆನಂತರ ಒಂದು ವಾರದ ಬಳಿಕ ಪೇಟೆಯಲ್ಲಿ ಸಾಮಾನು ಕೊಳ್ಳುತ್ತಿರುವಾಗ ಮತ್ತೆ ಹೃದಯಾಘಾತ ಸಂಭವಿಸಿತು. ಇದು ಮೂರನೆಯ ಸಲವಾದ್ದರಿಂದ ಸ್ಕಾನ್ ಬದುಕುಳಿಯುವ ಸಾಧ್ಯತೆ ಇಲ್ಲವೆಂದುಕೊಂಡರು ಎಲ್ಲರೂ.

ಈ ಸಲ ತೆರೆದ ಹೃದಯದ ಶಸ್ತ್ರಚಿಕಿತ್ಸೆ ಮಾಡಿ ಹೃದಯದಲ್ಲಿ ಕೆಟ್ಟುಹೋದ ಸ್ವಲ್ಪ ಅಂಗಾಂಶವನ್ನು ತೆಗೆದು ಹಾಕಬೇಕಾಯಿತು. ಆಪರೇಷನ್ ಮುಗಿದನಂತರ ಬದುಕಿ ಉಳಿಯುವ ಅವಕಾಶ ಕಾಣಿಸಲಿಲ್ಲ. ಸಾವು ಬದುಕಿನ ನಡುವೆ ನರಳಾಡಿದ ಸ್ಕಾನ್.

ಕೆಲವು ದಿನಗಳಲ್ಲೇ ಮೊದಲಿನಂತಾಗಿ ಮನೆಗೆ ಸೇರಿದ ಸ್ಕಾನ್. ೧೯೮೮ರ ಡಿಸೆಂಬರ್‌ನಲ್ಲಿ ಒಂದು ದಿನ ನಾಯಿಯೊಂದಿಗೆ ವಾಯುವಿಹಾರಕ್ಕೆ ಹೋದಾಗ ಆಯತಪ್ಪಿ ಬಿದ್ದುಬಿಟ್ಟ. ಆಸ್ಪತ್ರೆಯಲ್ಲಿ ಎರಡು ದಿನ ಇದ್ದು ಚೇತರಿಸಿಕೊಂಡ.

ಎಲ್ಲರೂ ಮೂಗಿನಮೇಲೆ ಬೆರಳಿಟ್ಟುಕೊಂಡರು. ಮೂರನೆಯ ಸಲ ಹೃದಯಾಘಾತಕ್ಕೆ ಗುರಿಯಾದವರು ಸಾಮಾನ್ಯವಾಗಿ ಬದುಕುಳಿಯುವುದಿಲ್ಲ. ಆದರೆ ಸ್ಕಾನ್‌ಗೆ ಇದು ನಾಲ್ಕನೆಯ ಸಲ. ಮತ್ತೆ ಎರಡನೆಯ ದಿನವೇ ಮತ್ತೊಂದು ಸಲ ಹೃದಯಾಘಾತ! ಈ ಬಾರಿ ಜೀವಾಧಾರ ವ್ಯವಸ್ಥೆಯನ್ನು ಅಳವಡಿಸಿದರು ಡಾಕ್ಟರರು. ಏತನ್ಮಧ್ಯೆ ಸ್ಕಾನನ ಹೃದಯಬಡಿತ ಒಂದು ರಾತ್ರಿಯಲ್ಲೇ ೨೭ ಸಲ ನಿಂತಿತ್ತು!

ಹೀಗೆ ನಿಲ್ಲುತ್ತಾ ಕೆಲಸ ಮಾಡುತ್ತಿರುವ ಹೃದಯ ಬಹಳ ದೃಢವಾದದ್ದೇ ಎಂದುಕೊಂಡಿದ್ದಾರೆ ಡಾಕ್ಟರರು. ಆದರೆ ಇದೆಲ್ಲಾ ಹೇಗೆ ಸಾಧ್ಯ? ಎನ್ನುವುದು ತಿಳಿದುಕೊಳ್ಳಲು ಇಂದಿಗೂ ಅವರಿಂದ ಸಾಧ್ಯವಾಗಿಲ್ಲ. ●

# ಪರಲೋಕದಿಂದ ಬಂದವರು

● ಕೆ. ಗಣೇಶ್

ಪ್ರವಾದಿ ಎಜೆಕಿಲ್‌ನನ್ನು ದೇವರು ಆಕಾಶಕ್ಕೆ ಕೊಂಡೊಯ್ದ ಎಂದು ಹಳೆ ಒಡಂಬಡಿಕೆಯಲ್ಲಿ ಬಂದಿರುವುದನ್ನು ಉಲ್ಲೇಖಿಸಿ, ಎರಿಕ್‌ವಾನ್. ಡೆನಿಕೆನ್ ತನ್ನ 'ದೇವರ ರಥಗಳು?' ಎಂಬ ಪುಸ್ತಕದಲ್ಲಿ ಪ್ರವಾದಿ ಎಜೆಕಿಲ್ ನೋಡಿದ್ದು ಒಂದು ಆಕಾಶನೌಕೆ ಎಂದು ಪ್ರತಿಪಾದಿಸಿದ್ದರು. ಇದನ್ನು ಓದಿದ ನಾಸಾ ವಿಜ್ಞಾನಿ ಜೋಸೆಫ್ ಎಸ್. ಬ್ಲೂಮ್‌ರಿಚ್‌ಗೆ ಅಸಾಧ್ಯಕೋಪ ಬಂತು. ಇದು ತಪ್ಪು ಎನ್ನುವುದನ್ನು ತೋರಿಸಿಕೊಡಲೆಂದೇ ಆತ ಸಂಶೋಧನೆ ಕೈಗೊಂಡ. ಪರಿಣಾಮ ಆಶ್ಚರ್ಯಕರವಾಗಿತ್ತು. ಎಜೆಕಿಲ್ ಕಂಡದ್ದು ಆಕಾಶ ನೌಕೆಯೇ ಹೌದೆಂಬ ತೀರ್ಮಾನಕ್ಕೆ ಆತ ಬರಬೇಕಾಯಿತು. ಈ ವಿಜ್ಞಾನಿ ತಮ್ಮ ಸಂಶೋಧನೆಗಳನ್ನು 'ಎಜೆಕಿಲ್‌ನ ಆಕಾಶ ನೌಕೆಗಳು' ಎಂದು ಪುಸ್ತಕದಲ್ಲಿ ಪ್ರಕಟಿಸಿದ್ದಾರೆ. ಸಾಟರ್ನ್ ೫, ಅಪೋಲೋ, ಭೂಕಕ್ಷ್ಯಾ ಪರಿಭ್ರಮಣ ಕೇಂದ್ರಗಳು ಇಂತಹ ಅತ್ಯಾಧುನಿಕ ರಾಕೆಟ್‌ಗಳ ನಿರ್ಮಾಣದಲ್ಲಿ ನಡೆಸಿದ ಸಂಶೋಧನೆಗಾಗಿ ನಾಸಾ ಪಾರಿತೋಷಕ ಪಡೆದ ವಿಜ್ಞಾನಿ ಈ ಬ್ಲೂಮ್‌ರಿಚ್.



# ಬಹುಪಯೋಗಿಯಾದ ದಾಳಿಂಬೆ

• ಜಿ.ವಿ. ಪ್ರಭು

ದಾಳಿಂಬೆಯನ್ನು ಬಹಳ ಹಿಂದಿನಿಂದಲೂ ಅನೇಕ ಉಪಮೇಯಗಳಿಂದ ಹೋಲಿಸುತ್ತಾ ಬಂದಿರುವುದು ಎಲ್ಲರಿಗೂ ತಿಳಿದ ವಿಷಯವೇ! ದೇವಿಯ ಪ್ರಭೆ 'ದಾಳಿಂಬೆ ಹೂವಿನ ಕುಸುಮದ ಪ್ರಭೆಯಂತೆ.' ಆದ್ದರಿಂದಲೇ ಅವಳಿಗೆ "ದಾಡಿಮೀ ಕುಸುಮ ಪ್ರಭಾ" ಎಂಬ ಹೆಸರು. ಅದರಂತೆಯೇ ಸುಂದರಿಯರ ದಂತ ಪಂಕ್ತಿಗಳನ್ನು ದಾಳಿಂಬೆ ಹಣ್ಣಿನ ಬೀಜಗಳಿಗೂ, ಮಾದಕ ತುಟಿಗಳನ್ನು ದಾಳಿಂಬೆಯ ಎಸಳಿಗೂ ಹೋಲಿಸಲಾಗುತ್ತದೆ. ದಾಳಿಂಬೆ ವರ್ಣದಲ್ಲಿ ಸುಂದರ, ಅತ್ಯಂತ ರುಚಿ, ಮಾಧುರ್ಯವುಳ್ಳ ಹಣ್ಣು.

ದಾಳಿಂಬೆಯ ಮೂಲಸ್ಥಾನ ಇರಾನ್ ಎಂದು ಭಾವಿಸಲಾಗಿದೆ. ಇರಾನ್, ಇರಾಕ್, ಪರ್ಶಿಯಾ, ಅಫಘಾನಿಸ್ಥಾನಗಳ ಅರಣ್ಯಗಳಲ್ಲಿ ಇದು ವಿಪುಲವಾಗಿ ಬೆಳೆಯುತ್ತದೆ. ಅಲ್ಲಿಂದ ದಾಳಿಂಬೆ ಬಹಳ ಹಿಂದೆಯೇ ಭಾರತ ದೇಶಕ್ಕೆ ಬಂದಿದೆ.

ದಾಳಿಂಬೆಯ ಗಿಡ ಸುಮಾರು ೧೦ ರಿಂದ ೧೫ ಅಡಿ ಎತ್ತರದವರೆಗೂ ಬೆಳೆಯುವುದು. ಹಲವು ಗೆಲ್ಲುಗಳಿಂದ ಕೂಡಿರುತ್ತದೆ. ಆಕರ್ಷಕ ಕೆಂಪು ಹೂಗಳು ಗಿಡಕ್ಕೆ ಬಹಳ ಅಂದ ನೀಡುತ್ತವೆ. ದಾಳಿಂಬೆಯಲ್ಲಿ ವಂಗ, ಅಲಂದ್, ಪಸಂದ್, ಕಂದಹಾರಿ, ದಂದನ್, ಸೋನ ಇತ್ಯಾದಿ ಹಲವಾರು ತಳಿಗಳಿವೆ. ಇದು ಮೆಕ್ಕಲ ಮಣ್ಣಿನಲ್ಲಿ ಚೆನ್ನಾಗಿ ಬೆಳೆಯುತ್ತದೆ. ದಾಳಿಂಬೆಯ ಹೂ, ಹಣ್ಣಿನ ಒಳ ತಿರುಳು, ಹಣ್ಣಿನ ಒಳಗಿನ ಬೀಜಗಳು, ಹಣ್ಣಿನ ತೊಗಟೆ, ಹಣ್ಣಿನ ರಸ, ಒಣಗಿದ ಕಾಂಡ ಇವುಗಳಿಗೆಲ್ಲ ಔಷಧೀಯ ಗುಣವಿದೆ.

ದಾಳಿಂಬೆ ಪಚನ ಶಕ್ತಿಯನ್ನು ಹೆಚ್ಚಿಸುವುದು. ಹೃದಯಕ್ಕೆ ಬಲವನ್ನು ಕೊಡುವುದು. ಕಫವನ್ನು ಸುಲಭವಾಗಿ ನಿರ್ಮೂಲಗೊಳಿಸುವುದು. ಅಲ್ಪ ಪ್ರಮಾಣದಲ್ಲಿ ಇದು ಪಿತ್ತ ನಾಶಕವೂ ಹೌದು ಎಂದು ಆಯುರ್ವೇದ ನಿಘಂಟು ಹೇಳುತ್ತದೆ. ಆಧುನಿಕ ವಿಜ್ಞಾನದ ದೃಷ್ಟಿಯಿಂದ ಪ್ರತಿ ೧೦೦ ಗ್ರಾಂ ದಾಳಿಂಬೆಯ ತಿರುಳಿನಲ್ಲಿ ೧೬ ಮಿಲಿಗ್ರಾಂ 'ಸಿ' ಜೀವಸತ್ವ, ಸಕ್ಕರೆ ಮತ್ತು ಕಬ್ಬಿಣಾಂಶವನ್ನೊಳಗೊಂಡಿದೆ. ದಾಳಿಂಬೆಯು ಗಂಟಲಿನ ಧ್ವನಿಯನ್ನು ಸುಧಾರಿಸುತ್ತದೆಂಬ ಭಾವನೆ ಸಾರ್ವತ್ರಿಕವಾಗಿದೆ.

ದಾಳಿಂಬೆ ಹಣ್ಣಿನ ರಸವನ್ನು ಜೇನಿನಲ್ಲಿ ಬೆರಸಿ ಸೇವಿಸಿದರೆ ಅರುಚಿಯ ನಿವಾರಣೆಯಾಗುತ್ತದೆ. ದಾಳಿಂಬೆ ಹಣ್ಣಿನ ರಸವನ್ನು ಬಿಸಿಮಾಡಿ ಕುಡಿದರೆ ವಾಂತಿಯಾಗುವುದು ಶೀಘ್ರವಾಗಿ ಶಮನಗೊಳ್ಳುತ್ತದೆ. ಪ್ರತಿನಿತ್ಯ ದಾಳಿಂಬೆ ರಸವನ್ನು ಸೇವಿಸುವುದರಿಂದ ಹೊಟ್ಟೆಯಲ್ಲಿ ಉರಿ, ಜ್ವರ ಹಾಗೂ ಅತಿಸಾ

ರವನ್ನು ದೂರವಿಡಬಹುದು. ಹೃದಯಕ್ಕೂ ಇದು ಒಳ್ಳೆಯದಂತೆ. ರಕ್ತ ವರ್ಧಕವಾದ ದಾಳಿಂಬೆಯ ರಸವು ರಕ್ತ ಪರಿಚಲನೆಯನ್ನು ಸುವ್ಯವಸ್ಥೆಯಲ್ಲಿಡುತ್ತದೆ. ದಾಳಿಂಬೆ ರಸದಲ್ಲಿ ಜೇನು, ಸಕ್ಕರೆಗಳುನ್ನು ಮಿಶ್ರಮಾಡಿ ಕೆಮ್ಮುವ ಮಕ್ಕಳಿಗೆ ಕೊಡಬಹುದು.

ರಕ್ತಹೀನತೆಗೆ ದಾಳಿಂಬೆ ಹಣ್ಣಿನ ರಸ ಸಿದ್ಧೌಷಧ. ದಾಳಿಂಬೆ ಹಣ್ಣಿನ ಒಣ ತೊಗಟೆಯನ್ನು ಅರೆದು ಮಾಡಿದ ತಂಬುಳಿ ಮತ್ತು ಕುದಿಸಿ ತಯಾರಿಸಿದ ಕಷಾಯ ರಕ್ತಾತಿಸಾರವನ್ನು ತಡೆಯುತ್ತದೆ.

ದಾಳಿಂಬೆ ಗಿಡದ ಎಲೆಯ ರಸದಿಂದ ನಿತ್ಯವೂ ಬಾಯಿ ತೊಳೆಯುತ್ತಿದ್ದರೆ ಬಾಯಿ ಹುಣ್ಣು, ಕಂಠರೋಗಗಳು ಬರುವುದಿಲ್ಲ. ಎಲೆಯ ರಸದಿಂದ ರಕ್ತಸಾರ, ಮೂಲವ್ಯಾಧಿಯ ರಕ್ತಸ್ರಾವ ಹಾಗೂ ವಾಂತಿಯನ್ನು ನಿವಾರಿಸಬಹುದು. ದಾಳಿಂಬೆ ಹೂವನ್ನು ಜಜ್ಜಿ ತೆಗೆದ ರಸವನ್ನು ಮೂಗಿನಲ್ಲಿ ರಕ್ತಸ್ರಾವವಾಗುತ್ತಿರುವ ಮಕ್ಕಳಿಗೆ ಸವರಿದರೆ ಶೀಘ್ರವೇ ನಿಲ್ಲುತ್ತದೆ.

ಹೀಗೆ ಹಲವಾರು ಕಾಯಿಲೆಗಳಿಗೆ ದಾಳಿಂಬೆಯನ್ನು ಔಷಧವಾಗಿ ಬಳಸಬಹುದು. ದಾಡಿಮಚೂರ್ಣ, ಕೆಲವು ಆಯುರ್ವೇದ ದಾಡಿಮಾಸವ, ದಾಡಿಮಾದಿಲೇಹ್ಯಗಳಂತಹ ಕೆಲವು ಆಯುರ್ವೇದ ಔಷಧಗಳಲ್ಲಿ ದಾಳಿಂಬೆಯನ್ನು ತಪ್ಪದೇ ಬಳಸಲಾಗುತ್ತದೆ. ಹೀಗಾಗಿ ಕೆಲವೆಡೆ ದಾಳಿಂಬೆಯನ್ನು ಔಷಧಿ ದಾಳಿಂಬೆ ಎಂದೇ ಕರೆಯುವುದು ರೂಢಿಯಲ್ಲಿದೆ. ●

## 'ಪಂಚ'ಗಳ ಸಂಗ್ರಹ

● ಅನಂತ ಭಟ್, ಹುದೆಂಗಾಜೆ

೧) ಪಂಚ ಪತಿವ್ರತೆಯರು- ಅಹಲ್ಯಾ, ದ್ರೌಪದಿ, ಸೀತಾ, ತಾರಾ, ಮಂಡೋದರಿ.

೨) ಪಂಚ ಪಾಂಡವರು-- ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ.

೩) ಪಂಚಾಮೃತ- ಹಾಲು, ಜೇನು, ತುಪ್ಪ, ಸಕ್ಕರೆ, ಬಾಳೆಹಣ್ಣು.

೪) ಪಂಚಗವ್ಯ- ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ.

೫) ಪಂಚಾಕ್ಷರಿ ಮಂತ್ರ- ನಮಃ ಶಿವಾಯ.

೬) ಪಂಚೇಂದ್ರಿಯ- ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ.

೭) ಪಂಚದ್ರವ್ಯಗಳು- ಮುತ್ತು, ರತ್ನ, ಹವಳ, ವಜ್ರ, ವೈಢೂರ್ಯ.

೮) ಪಂಚಾಂಗ- ತಿಥಿ, ವಾರ, ಯೋಗ, ಕರಣ, ನಕ್ಷತ್ರ.

೯) ಪಂಚಭೂತಗಳು- ಅವನಿ, ಅನಿಲ, ಅಗ್ನಿ, ಆಕಾಶ, ಅಂಬು.

೧೦) ಪಂಚೋಪಚಾರ- ಗಂಧ, ಪುಷ್ಪ, ದೀಪ, ಧೂಪ, ನೈವೇದ್ಯ.

೧೧) ಪಂಚಪ್ರಾಣ- ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ.

೧೨) ಪಂಚಾಯತನ- ಶಿವ, ವಿಷ್ಣು, ಶಕ್ತಿ(ದೇವಿ), ಸೂರ್ಯ, ಗಣಪತಿ.

೧೩) ಪಂಚಲೋಹ- ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಸೀಸ.

೧೪) ಪಂಚಕಜ್ಜಾಯ- ಹುರಿದ ಧಾನ್ಯ, ಬೆಲ್ಲ, ತೆಂಗಿನಕಾಯಿ, ಏಲಕ್ಕಿ, ಎಳ್ಳು.

೧೫) ಪಂಚನಾಟಕ- ವಿಕ್ರಮೋರ್ವಶೀಯ, ಸ್ವಪ್ನವಾಸವದತ್ತ, ಶಾಕುಂತಲಾ, ಮೃಚ್ಛಕಟಿಕ, ಉತ್ತರ ರಾಮ ಚರಿತೆ.

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

---

೧. ಉಪಶ್ರುತಿ
- (ಅ) ಕೆಟ್ಟದನಿ
- (ಆ) ಕೋಪ
- (ಇ) ಪುರಾಣ
- (ಈ) ಆಲಿಸುವಿಕೆ

೨. ಉಪ್ಪಯಣ
- (ಅ) ಹೊರಡುವಿಕೆ
- (ಆ) ಕಾಣಿಕೆ
- (ಇ) ಪಯಣವನ್ನು ನಿಲ್ಲಿಸುವುದು
- (ಈ) ಸಮುದ್ರ ಪ್ರಯಾಣ

೩. ಉಪ್ಪವಡಿಸು
- (ಅ) ಎದ್ದೇಳು
- (ಆ) ಹತ್ತಿರ ಬಾ
- (ಇ) ಹೊರಟುಹೋಗು
- (ಈ) ನಿದ್ದೆಹೋಗು

೪. ಹದುಳ
- (ಅ) ಹೊದಿಸುವಿಕೆ
- (ಆ) ಒಳ್ಳಿತು
- (ಇ) ಒದಗುವಿಕೆ
- (ಈ) ಆಳತೆ

೫. ಪರಪಿಂಡಿ
- (ಅ) ಹೊರಗಿನ ಬಂಡವಾಳ
- (ಆ) ಬೇರೆಯವರ ಆಶ್ರಯಕ್ಕೆ ಬಿದ್ದವ
- (ಇ) ಸಾಲ
- (ಈ) ಚರಟ

೬. ಪರಮಾರ್ಥ
- (ಅ) ಮಿಗಿಲಾದ ಸತ್ಯ
- (ಆ) ಬೇರೊಂದು ಅರ್ಥ
- (ಇ) ಬಹಳ ದುಃಖ
- (ಈ) ದೊಡ್ಡ ಆಶೆ.

೭. ನೀವು
- (ಅ) ಮುಟ್ಟು
- (ಆ) ತೇವ
- (ಇ) ಮೆತ್ತಗೆ ತಿಕ್ಕು
- (ಈ) ತುಂಬು

೮. ವಿಪಥ
- (ಅ) ಪ್ರತಿಜ್ಞೆ
- (ಆ) ಪ್ರತಿಜ್ಞೆ ಮುರಿ
- (ಇ) ಆಪತ್ತು
- (ಈ) ತಪ್ಪುದಾರಿ

೯. ಪದಪು
- (ಅ) ಗುಡ್ಡ
- (ಆ) ಒಳ್ಳೇ ದಾರಿ
- (ಇ) ಉತ್ಸಾಹ
- (ಈ) ಸವಿಮಾತು

೧೦. ಶ್ಲಥವಿಶ್ಲಥ
- (ಅ) ತುಂಡು ತುಂಡು
- (ಆ) ಕೇಳಿ ಕೇಳಿ ಬೇಜಾರಾದದ್ದು
- (ಇ) ಹಿತಕರವಾದ
- (ಈ) ಸಡಿಲು ಸಡಿಲಾದ

೧೧. ಕ್ಷತವಿಕ್ಷತ
- (ಅ) ಗಾಯದಿಂದ ತುಂಬಿದ
- (ಆ) ಸಡಿಲು ಸಡಿಲಾದ
- (ಇ) ಅಂಕುಡೊಂಕು
- (ಈ) ಬಿಸಿ ಬಿಸಿ

೧೨. ನಿಸ್ತೂಕ
- (ಅ) ನಿರ್ಭಯ
- (ಆ) ಅಶಕ್ತ
- (ಇ) ತಪ್ಪಿಲ್ಲದ
- (ಈ) ಬಹಳ ಕಡಿಮೆ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ಉಪಶ್ರುತಿ

(ಈ) ಆಲಿಸುವಿಕೆ: ಇಬ್ಬರು ಮಾತಾಡುವಾಗ ಮೂರನೆಯವರಿಂದ ಕೇಳಿಬಂದ ಮಾತು; ಭವಿಷ್ಯವನ್ನು ಕುರಿತು ಅಶರೀರ ವಾಣಿ. (ಸಂ.ಉಪ= ಹತ್ತಿರ, ಶ್ರುತಿ=ಕೇಳಿದ್ದು)

೨. ಉಪ್ಪಯಣ

(ಇ) ಪಯಣವನ್ನು ನಿಲ್ಲಿಸುವುದು; ಪ್ರಯಾಣ ಮುಗಿಸುವುದು. ಉದಾ- ಯಾತ್ರೆಯಲ್ಲಿ ನಾವು ಕಾಶಿಯನ್ನು ತಲುಪಿಯೇ ಉಪ್ಪಯಣ ಮಾಡಿದೆವು. (ಉತ್‌ಪ್ರಯಾಣ)

೩. ಉಪ್ಪವಡಿಸು

(ಅ) ಎದ್ದೇಳು, ನಿದ್ದೆಯಿಂದ ಏಳು; ವಿಶ್ರಾಂತಿ ಮುಗಿಸಿ ಎದ್ದು ಬಾ. ಉದಾ- ಉಪ್ಪವಡಿಸಯ್ಯ ಕೃಷ್ಣಾ (ಪವಡಿಸು = ಮಲಗು ಎಂಬುದರಿಂದ)

೪. ಹದುಳ

(ಆ) ಒಳ್ಳಿತು, ಕ್ಷೇಮ, ಮಂಗಳ, ಶುಭ: ಸ್ಥೈರ್ಯ. ಉದಾ- ಹದುಳವಾಗಿರುವ ಸಂಸಾರ ಅವನದು. (ಕನ್ನಡ)

೫. ಪರಪಿಂಡಿ

(ಅ) ಬೇರೆಯವರ ಅನ್ನಕ್ಕೆ ಬಿದ್ದವ, ಸ್ವಂತ ಗಳಿಕೆಯಿಲ್ಲದವ, ಪರಾಶ್ರಯಿ, ಉದಾ- ಪರಪಿಂಡಿಯಾಗಿರುವುದು ಮರಣಕ್ಕೂ ಕೀಳು. (ಸಂ ಪರ=ಇನ್ನೊಬ್ಬರ, ಪಿಂಡಿ = ಅನ್ನ ತಿನ್ನುವವ)

೬. ಪರಮಾರ್ಥ

(ಅ) ಮಿಗಿಲಾದ ಸತ್ಯ, ನಿಜವಾದ ಸತ್ಯ ವಾಸ್ತವತೆ: ಶ್ರೇಷ್ಠವಾದ ಗುರಿ. (ಸಂ. ಪರಮ= ಎಲ್ಲಕ್ಕೂ ಹೆಚ್ಚಿನ, ಅರ್ಥ=ಗುರಿ)

೭. ನೀವು

(ಇ) ಮೆತ್ತಗೆ ತಿಕ್ಕು, ಮೆಲ್ಲಗೆ ತಟ್ಟು, ಕೂದಲು, ಗಡ್ಡ, ಬಟ್ಟೆ, ಇತ್ಯಾದಿಗಳ ಮೇಲೆ ಮೆಲ್ಲಗೆ ಕೈಯಾಡಿಸು ಇಲ್ಲವೆ ನಯ ಮಾಡು (ಕನ್ನಡ).

೮. ವಿಪಥ

(ಈ) ತಪ್ಪುದಾರಿ, ಅಡ್ಡದಾರಿ; ಕೆಟ್ಟ ರಸ್ತೆ ಉದಾ- ಅವನು ವಿಪಥಗಾಮಿಯಾಗಿದ್ದಾನೆ. (ಸಂ. ವಿ=ಸಲ್ಲದ ಪಥ=ದಾರಿ)

೯. ಪದಪು

(ಇ) ಉತ್ಸಾಹ, ಸಂತೋಷ, ಸ್ವಭಾವ, ಹಿತಕರ ಭಾವನೆ, ಉಲ್ಲಾಸ. ಪದಪುಗಾರ ಎಂದರೆ ಉಲ್ಲಾಸಶೀಲ ಮನುಷ್ಯ. (ಕನ್ನಡ)

೧೦. ಶ್ಲಥವಿಶ್ಲಥ

(ಈ) ಸಡಿಲು ಸಡಿಲಾದ, ಶಿಥಿಲವಾದ. ಉದಾ- ಪ್ರಯಾಣದ ನಂತರ ಮೈ ಶ್ಲಥವಿಶ್ಲಥವಾಯಿತು. (ಸಂ. ಶ್ಲಥ=ಸಡಿಲು)

೧೧. ಕ್ಷತವಿಕ್ಷತ

(ಅ) ಗಾಯ ತುಂಬಿದ, ಮೈಯೆಲ್ಲ ಗಾಯ ಅಥವಾ ಪೆಟ್ಟು ಬಿದ್ದ. ಉದಾ- ಆ ಮೂರ್ತಿ ಕ್ಷತವಿಕ್ಷತವಾಗಿತ್ತು. (ಸಂ. ಕ್ಷತ=ಗಾಯ)

೧೨. ನಿಸ್ತೂಕ

(ಅ) ಅಶಕ್ತ ಕ್ಷೀಣವಾಗಿ ಹಗುರಾದ, ಉದಾ-ಜ್ವರದಿಂದ ಹುಡುಗ ನಿಸ್ತೂಕವಾಗಿದ್ದಾನೆ. (ನಿರ್=ಇಲ್ಲ, ತೂಕ.)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | |
|---|---|
| ೬-೮ ಸರಿಯಿದ್ದರೆ... | ಸಾಧಾರಣ |
| ೯-೧೦ ಸರಿಯಿದ್ದರೆ... | ಉತ್ತಮ |
| ೧೧-೧೨ ಸರಿಯಿದ್ದರೆ.. | ಅತ್ಯುತ್ತಮ |

# ಸಂಜೆ ನಾಲ್ಕರಿಂದ ರಾತ್ರಿ ಏಳೂವರೆವರೆಗೆ....

**ಡಾ.** ಬೇಂದ್ರೆಯವರು ೧೯೨೪ರಿಂದ, ಅಂದರೆ ನನ್ನ ವಿದ್ಯಾರ್ಥಿ ದೆಸೆಯಿಂದ ನನಗೆ ಗೊತ್ತು. ಅನೇಕರಿಗೆ ಗೊತ್ತಿರದ ಕೆಲವು ಘಟನೆಗಳನ್ನು ಇಲ್ಲಿ ಓದುಗರ ಮುಂದೆ ಇಡುತ್ತಿದ್ದೇನೆ. ಅವರ ಜ್ಞಾನಭಾಂಡಾರ ಅಗಾಧವಾಗಿತ್ತು. ಮೇ ತಿಂಗಳದ ಬಿಡುವಿನಲ್ಲಿ ಹಲವರು ಊಟ, ನಿದ್ರೆಯಲ್ಲಿ ಪರವಶರಾಗುತ್ತಿದ್ದಾಗ ಬೇಂದ್ರೆಯವರು ಮಾತ್ರ ವ್ಹಿಕ್ಟೋರಿಯಾ ಹೈಸ್ಕೂಲಿನ ಕೋಣೆಯಲ್ಲಿ ತಮ್ಮ ಸುತ್ತ ಅನೇಕ ದೊಡ್ಡ ದೊಡ್ಡ ಗ್ರಂಥಗಳನ್ನು ಹರವಿಕೊಂಡು ಓದುವುದರಲ್ಲಿ ಮಗ್ನರಾಗಿರುತ್ತಿದ್ದರು. ವಾಸ್ತವವಾಗಿ ಅವರ ಕಾವ್ಯ ಸ್ಫೂರ್ತಿಗೆ ಜ್ಞಾನಭಾಂಡಾರದ ಬೆಂಬಲವೂ ಇತ್ತು. ವಿದ್ಯಾರ್ಥಿಗಳಲ್ಲಿ ಓದುವ ಅಭಿರುಚಿ ಬೆಳೆಸಬೇಕೆಂಬ ಹೆಬ್ಬಯಕೆಯಿಂದ ನನ್ನನ್ನೊಳಗೊಂಡು ಇನ್ನು ಮೂರು ವಿದ್ಯಾರ್ಥಿಗಳಿಗೆ ಸೂಟಿಯಲ್ಲಿ ಶಾಲೆಗೆ ಬರಹೇಳಿ, ಕೆಲವೊಂದು ಪುಸ್ತಕಗಳನ್ನು ನಮಗೆ ಕೊಟ್ಟು, ಓದುವಂತೆ ಹೇಳಿ, ತಾವು ತಮ್ಮ ಓದಿನಲ್ಲಿ ತಲ್ಲೀನರಾಗುತ್ತಿದ್ದರು. ಆದರೆ ನಮ್ಮದು ಹುಡುಗು ಬುದ್ಧಿ! ಅವರ ಇಂಗಿತವನ್ನರಿಯದೆ ಅವರ ಕಣ್ಣು ತಪ್ಪಿಸಿ ಆಟಕ್ಕೆ ಹೋಗುತ್ತಿದ್ದೆವು. ಅವರು ಮೇಲು ಕೀಳು, ಚಿಕ್ಕವ ದೊಡ್ಡವ ಎಂಬ ಯಾವದೇ ಭಾವನೆಗಳನ್ನಿಟ್ಟುಕೊಳ್ಳದೆ ಅನೇಕರ ಮನೆಗೆ ಹೋಗುತ್ತಿದ್ದಂತೆ ನಮ್ಮ ಮನೆಗೂ ಬರುತ್ತಿದ್ದರು. ಅವರ "ಮುಗಿಲ ಮಾರಿಗೆ ರಾಗರತಿಯ" ಕವನವನ್ನು ಕರ್ನಾಟಕ ಕಾಲೇಜಿನ ಕಾವ್ಯ ಸ್ಪರ್ಧೆಯಲ್ಲಿ ಹಾಡಿ ಬಹುಮಾನವನ್ನು ಪಡೆದೆ. ಅವರ ಮನೆಯವರಿಗೆಲ್ಲ ನನ್ನ ಪರಿಚಯವೆಂತೆಂದರೆ, ಬೇಂದ್ರೆಯವರ ಕವನಗಳನ್ನು ಸುಶ್ರಾವ್ಯವಾಗಿ ಹಾಡುವವನೆಂದೇ!



## ಬೇಂದ್ರೆ ನೆನಪು

• ಎಚ್.ಎಸ್. ನೆಗಳೂರ

ಸುಮಾರು ೧೯೩೭ರಲ್ಲಿ ಅವರು ಮುಗದದಿಂದ ಪೆರೋಲ್‌ದಲ್ಲಿದ್ದು ಆದೇತಾನೆ ಬಂದಿದ್ದರು. ನಾನು ಆಗ ವ್ಹಿಕ್ಟೋರಿಯಾ ಹಾಯಸ್ಕೂಲ್

ದಲ್ಲಿ ಶಿಕ್ಷಕನಾಗಿ ಕೆಲಸಕ್ಕೆ ಸೇರಿದ್ದೆ. ಇವರು ಮತ್ತೆ ಧಾರವಾಡದಲ್ಲಿಯೆ ನೆಲೆಸುವಂತಾಗಬೇಕೆಂಬುದು ನನ್ನ ಇಚ್ಛೆಯಾಗಿತ್ತು. ಒಮ್ಮೆ ಧಾರವಾಡದ ಗಾಂಧೀ ಚೌಕಿನಲ್ಲಿ ಅವರ ಭೇಟಿಯಾದಾಗ, "ಶಾಲೆಗೆ ಮರಳಿ ಬರುವಿರೇನು?" ಎಂದೆ. "ತೆಗೆದುಕೊಂಡರೆ ಬರತೇನಿ," ಎಂದರು ಬೇಂದ್ರೆಯವರು. "ಹಾಗಾದರೆ ಒಂದು ಅರ್ಜಿಯನ್ನು ಬರೆದು ಕೊಡ್ರಿ," ಎಂದೆ. "ಅದು ಆಗದು," ಎಂದು ಹೇಳಿ ಹೊರಟೇಬಿಟ್ಟರು. ಬೇಂದ್ರೆಯವರು ಅತ್ಯಂತ ಆತ್ಮಾಭಿಮಾನಿಗಳು. ಯಾರಿಗೂ 'ಜೀ' ಎಂದವರಲ್ಲ. ಅರ್ಜಿ ಇಲ್ಲದೆ ವಿಚಾರ ಮಾಡಲು ಸಾಧ್ಯವಿಲ್ಲವೆಂದು ಶಾಲೆಯ ಆಡಳಿತಗಾರರು ನಿರ್ಣಯಿಸಿದರು.

ನಾನು ಬಿ.ಎಡ್. ಕಾಲೇಜಿನಲ್ಲಿದ್ದಾಗ ಒಂದು ದಿನ ಬೇಂದ್ರೆಯವರು ನಮ್ಮ ಮನೆಗೆ ಬಂದು, "ವಾಮನನಿಗೆ ಯಾವುದೋ ಒಂದು ಭಾಗ ಸರಿಯಾಗಿ ಅರ್ಥವಾಗುತ್ತಿಲ್ಲವಂತೆ. ನೀನು ಹೇಗೂ ಅಲ್ಲಿಯೇ ಇದ್ದೀ; ಅವನಿಗಷ್ಟು ತಿಳಿಸಿಕೊಡು," ಎಂದರು.

"ನನಗೆ ತಿಳಿದಷ್ಟು ಹೇಳುವೆ" ಎಂದು ಸೌಜನ್ಯಪೂರಕವಾಗಿ ಹೇಳಿದ್ದಕ್ಕೆ ಅವರು, "ಎಲ್ಲರೂ ಮಾಡೋದಷ್ಟ! ತಿಳಿಯದಿದ್ದದನ್ನು ನೀನು ಏನು ಹೇಳಾವಾ,?" ಎಂದು ಹಾಸ್ಯ ಚಟಾಕಿಯನ್ನು ಹಾರಿಸಿದರು. ಡಾ. ವಾಮನ ಬೇಂದ್ರೆಯವರು ಬಿ.ಎಡ್. ಆಗಿದ್ದಾರೆಂಬುದು ಅನೇಕರಿಗೆ ಗೊತ್ತಿರಲಿಕ್ಕಿಲ್ಲ.

ಸೊಲ್ಲಾಪುರದಲ್ಲಿ ಪ್ರಾಧ್ಯಾಪಕರಾಗಿದ್ದಾಗ ಒಂದು ಸಲ ಧಾರವಾಡಕ್ಕೆ ಸೂಟಿಯಲ್ಲಿ ಬಂದಿದ್ದರು. ಆಗ ಒಂದು ರಾತ್ರಿ ನಮ್ಮ ಮನೆಯಲ್ಲಿಯೇ ಉಳಿದರು. ಅವರೊಡನೆ ಇನ್ನೊಬ್ಬ ಸಾಹಿತಿ ದಿ. ಶ್ರೀ ಎಚ್.ಪಿ. ಜೋಶಿ ಇದ್ದರು. ಸುಮಾರು ರಾತ್ರಿ ಒಂಭತ್ತೂವರೆಯಿಂದ ಒಂದೂವರೆಯವರೆಗೆ ಬೇಂದ್ರೆಯವರ ಹಾಡು, ಮಾತು ಕೇಳಿದ್ದೇ ಕೇಳಿದ್ದು. ಎರಡರ ಸುಮಾರಿಗೆ ಜೋಶಿಯವರು ಹೊರಟುಹೋದರು. ತದನಂತರ ಶ್ರೀ ಬೇಂದ್ರೆಯವರು ತಮ್ಮ ಅನೇಕ ಕವನಗಳ ಹಿನ್ನೆಲೆಯ ಬಗ್ಗೆ ನನ್ನೊಡನೆ ಮಾತಾಡಿದರು. ಅದರಲ್ಲಿ ಒಂದನ್ನು ಮಾತ್ರ ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತೇನೆ. ತಮ್ಮ ಭಾವೀ ಹೆಂಡತಿ ಇನ್ನೂ ಕನ್ಯೆಯಾಗಿದ್ದಾಗ ಒಂದು ಹಳ್ಳದ ದಂಡೆಗೆ ತಾವು, ಮತ್ತೊಂದು ದಂಡೆಗೆ ಆ ಕನ್ಯೆ ಮತ್ತು ಅವಳ ಪಕ್ಷದವರು. ಅವಳ ರೂಪ, ನಡಿಗೆ, ಉಡಿಗೆ ಇವರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದು, ಮುಂದೆ ಜೀವನದಲ್ಲಿ ಬಡತನದ ಬೇಗೆಯನ್ನು ಅನುಭವಿಸುತ್ತಿದ್ದಾಗ ಅವರ ಧರ್ಮಪತ್ನಿ ಚಿಂತಾಕ್ರಾಂತರಾಗಿ ಒಂದು ಗೋಡೆಗೆ ಆತುಕೊಂಡು ಕುಳಿತಾಗ, "ದುಃಖಪಡುವದ್ಯಾಕೆ" ಎಂದು ಹೇಳುತ್ತ "ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ" ಎಂಬ ಕವನದಲ್ಲಿ ಅದನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಸೊಲ್ಲಾಪುರದಲ್ಲಿದ್ದಾಗ ಒಬ್ಬ ಕ್ಷೌರಿಕನನ್ನು ಹೊರತುಪಡಿಸಿ ಬೇರಾರೂ ಇವರ ಕ್ಷೌರ ಮಾಡುವಂತಿಲ್ಲ! ಅವನು ಇವರ ಮನೆಗೆ ಬಂದಾಗಲೇ ಅಂದು ಕ್ಷೌರ ಮಾಡಿಸಿಕೊಳ್ಳಬೇಕೆಂಬುದು ನೆನಪಾಗುತ್ತಿತ್ತಂತೆ. ಸಾಧಾರಣ ಇವರ ಕ್ಷೌರ ಒಂದೂವರೆಯಿಂದ ಎರಡು ತಾಸು ನಡೆಯುತ್ತಿತ್ತಂತೆ. ಏಕೆಂದರೆ ನಡುನಡುವೆ ಬೇಂದ್ರೆಯವರು ಆ ಮಾತು ಈ ಮಾತು ಹೇಳುತ್ತ ನಕ್ಕು ಎದ್ದು ಓಡಾಡುತ್ತಿದ್ದರಂತೆ. ಕ್ಷೌರಿಕನಿಗೂ ಆ ಮಾತು ಕೇಳುವುದರಲ್ಲಿ ಆನಂದ! ಒಂದು ಸಲ ಕ್ಷೌರಿಕ ತನ್ನ ಮನೆಗೆ ಬಹಳ ತಡಮಾಡಿ ಹೋದ. ಅವನ ಹೆಂಡತಿ ತಡವಾದದ್ದಕ್ಕೆ ಬಹಳ ಬೇಸರಗೊಂಡಿದ್ದಳು. ಕ್ಷೌರಿಕ ಅಂದ, "ಜಗತ್ತಿನೊಳಗ ನಕ್ಕೋತ ಇರೋದss ಬಾಳು; ಇದನ್ನ ಬಿಟ್ರ ಮತ್ತೇನೈತಿ?" ಅದಕ್ಕ ಅವನ ಹೆಂಡತಿ ಅಂದಳಂತೆ: "ಯಾಕ, ಇವತ್ತ ಬೇಂದ್ರೆಯವರ ಕ್ಷೌರ ಮಾಡಿ ಬಂದೀ ಏನು?" ಎಂದು. "ಅದು ನಿನಗ ಹ್ಯಾಂಗ ಗೊತ್ತಾಯ್ತು?" ಅಂತ ಕ್ಷೌರಿಕ ಕೇಳಿದನಂತೆ. "ಗೊತ್ತಾಗದ ಏನು? ಇಷ್ಟೊಂದು ಮಜಾ ಮಾತಾಡ್ತೀ ಅಂದಮೇಲೆ ಬೇಂದ್ರೆಯವರ ಕ್ಷೌರಕ್ಕೆ ಹೋಗಿರಲಿಕ್ಕೆ ಬೇಕು," ಅಂದಳಂತೆ. ಈ ಮಾತನ್ನು ಬೇಂದ್ರೆಯವರು ಸ್ವತಃ ನಗುತ್ತಾ ನನ್ನ ಮುಂದೆ ಹೇಳಿದ್ದರು.

ಒಂದು ಸಲ ಬೇಂದ್ರೆಯವರು ನಮ್ಮಲ್ಲಿಯೆ ತಂಗಿದ್ದರು. ಅಂದು ಏಕಾದಶಿ. ಮರುದಿನ ಮುಂಜಾನೆ ಯಥಾಪ್ರಕಾರ ಬೇಂದ್ರೆಯವರು ಪ್ರಾತರ್ವಿಧಿಯನ್ನು ಮುಗಿಸುತ್ತಿದ್ದಂತೆ, "ಸ್ನಾನಕ್ಕೆ

ನೀರು ತೋಡಿದ್ದೇನೆ," ಎಂದು ಹೇಳಿದೆ. "ಒಳ್ಳೇದss ಆತು ಬಿಡು," ಅಂದರು. ಸ್ನಾನ ಮಾಡಿ ದೇವರ ಮನೆಗೆ ಬಂದಾಗ ಎಲೆ ಹಾಕಿ ಊಟಕ್ಕೆ ತಯಾರು ಮಾಡಿದ್ದೆ. "ಇದೇನಿದು?" ಅಂದರು. "ಈವತ್ತು ದ್ವಾದಶಿ ನಮ್ಮ ತಾಯಿ ಅಡಿಗೆ ಮಾಡಿದ್ದಾರೆ; ನೀವು ಇಲ್ಲಿಯೇ ಊಟಮಾಡಬೇಕೆಂದು ನಮ್ಮೆಲ್ಲರ ವಿನಂತಿ," ಎಂದೆ. "ಊಟಕ್ಕ ಯಾಕ ವಿನಂತಿ? ಛಲೋ ಆತು ಬಿಡು," ಎಂದು ಊಟ ಮಾಡಿ, ವೀಳ್ಯವನ್ನು ತೆಗೆದುಕೊಂಡು ಹೋದರು. ಹೋಗುವಾಗ, "ಪಂಡಿತ ತಾರಾನಾಥರು ಧಾರವಾಡಕ್ಕೆ ಬಂದಿದ್ದಾರೆ. ನಿಮ್ಮ ಮನೆಗೆ ಕರೆದುಕೊಂಡು ಬರುತ್ತೇನೆ," ಎಂದು ಹೇಳಿ ಹೋದರು. ನಾನು ಅಂದು ಸಂಜೆಯ ೬ರ ವರೆಗೆ ದಾರಿ ಕಾಯ್ದೆ. ಇನ್ನೇನು ಬರಲಿಕ್ಕಿಲ್ಲ ಅಂದುಕೊಳ್ಳುತ್ತಿರುವಾಗಲೆ ಟಾಂಗಾದಿಂದ ಬೇಂದ್ರೆಯವರೂ ಜತೆ ಪಂ.ತಾರಾನಾಥರು ಒಳಗೆ ಬಂದರು. ನಿಂತಲ್ಲಿಯೇ ಎರಡು ಮಾತಾಡಿ, ಇನ್ನೊಂದು ಯಾವುದೋ ಅಗತ್ಯದ ಕಾರ್ಯವಿದ್ದುದರಿಂದ, "ಇವನೂ ಮುಂದೆ ಸಾಹಿತಿ ಆಗಾವಾ," ಅನ್ನುತ್ತಾ ಬೇಂದ್ರೆಯವರು ಹೊರಬಿದ್ದರು. ದುರ್ದೈವದಿಂದ ನನಗೆ ಆ ಯೋಗ ಲಭ್ಯವಾಗಲಿಲ್ಲ!

ಬೇಂದ್ರೆಯವರು ತಮ್ಮ ಹಿರಿಯ ಮಗನ ಅಗಲುವಿಕೆಯಿಂದ ಬಹಳ ದುಃಖಿತರಾಗಿದ್ದರು. ಒಂದು ರಾತ್ರಿ ಅವರಿಗೆ ಒಂದು ಕನಸು. ಅದರಲ್ಲಿ ರಾಮ, "ಅಣ್ಣಾ, ನಾ ನಿಮ್ಮನ್ನ ಬಿಟ್ಟುಹೋಗಿಲ್ಲ! ನಿನ್ನೆ ಆಟ ಆಡೋ ಮುಂದ ಶ್ರೀ ನೆಗಳೂರ ಅವರಿಗೆ ಭೆಟ್ಟಿಯಾಗೇನಿ," ಅಂದನಂತೆ. ಅಷ್ಟಕ್ಕೇ ಬೇಂದ್ರೆಯವರಿಗೆ ಎಚ್ಚರಾಯಿತು. ಅದನ್ನು ತಮ್ಮ ಪತ್ನಿಗೆ ಹೇಳಿ, "ಇಂಥ ಕನಸು ನೆಗಳೂರಗೆ ಏನಾದರೂ ಬಿದ್ದಿತ್ತೇನು? ಅಂತ ಕೇಳತೇನಿ," ಅಂದರಂತೆ. ಮುಂದೆ ನಾಲ್ಕಾರು ದಿನಗಳ ನಂತರ ನನಗೆ ಅವರ ಭೆಟ್ಟಿಯಾದಾಗ, "ನಿನಗೇನಾದರೂ ನಮ್ಮ ರಾಮ ಕನಸಿನೊಳಗ ಭೆಟ್ಟಿಯಾಗಿದ್ದನೇನು?" ಎಂದು ಕೇಳಿದರು. ಅದೇ ಸಮಯಕ್ಕೆ ನನಗೊಂದು ಕನಸು. ಸಂಜೆಯ ಮುಂದೆ ವಿಹಾರಕ್ಕಾಗಿ ಹೊರಟಿದ್ದೆ. ಈಗಿನ ಚೆನ್ನಮ್ಮ ಪಾರ್ಕಿನ ಹತ್ತರ ನಾಲ್ಕು ರಸ್ತೆಗಳು ಕೂಡುವ ಸ್ಥಳದಲ್ಲಿ ಎಂಟು ಹತ್ತು ಹುಡುಗರು ಹುಡುತುತು



ಆಡುತ್ತಿದ್ದರು. ರಾಮ ಹೊರಗೆ ನಿಂತಿದ್ದ. ನಾನು ಅವನಿಗೆ, "ನೀ ಯಾಕ ಆಡೂದಿಲ್ಲ?" ಅಂತ ಕೇಳಿದೆ. ಅದಕ್ಕೆ ಆತ ಅಂದ: "ನಾನು ಔಟ್ ಆಗೇನಿ." ಇಷ್ಟಕ್ಕೇ ನನಗೆ ಎಚ್ಚರಿಕೆಯಾಯಿತು. ಇದನ್ನು ಕೇಳಿ ಬೇಂದ್ರೆಯವರು, "ಅವ ಇಲ್ಲೇ ಎಲ್ಲೋ ಇದ್ದಾನ. ನನಗ ಕಾಣಸವಲ್ಲ," ಎಂದರು. ಮುಂದೆ ಅವರ ಕನಸಿನ ಬಗ್ಗೆ ಸುದೀರ್ಘವಾಗಿ ಅಧ್ಯಯನ ಮಾಡಿದ್ದರ ಹಿನ್ನೆಲೆ ಇದೇ ಆಗಿರಬಹುದೇನೊ.

ನಾವು ೫-೬ ಜನರು ತಿರುಗಾಡಿ ಬಂದು ಚೆನ್ನಮ್ಮ ಪಾರ್ಕಿನಲ್ಲಿ ಕೂಡುತ್ತಿದ್ದೆವು. ಒಂದು ಸಲ ಬೇಂದ್ರೆಯವರು ತಮ್ಮ ಚಿರಂಜೀವಿ ವಾಮನನೊಂದಿಗೆ ನಮ್ಮೆಡೆಗೆ ಬಂದರು. ಎಲ್ಲರೂ ಕೆಳಗೆ ಹುಲ್ಲಿನ ಮೇಲೆ ಕುಳಿತೆವು. ಬೇಂದ್ರೆಯವರೆಂದರು, "ನಾನು ಈಗ ಋಕ್ ರಚನೆ ಮಾಡಲಿಕ್ಕೆ ಹತ್ತೇನಿ." ಕತ್ತಲಾಗಿತ್ತು. ಕೈಚೀಲದಿಂದ ಒಂದು ನೋಟಬುಕ್ ಮತ್ತು ಟಾರ್ಚ್ ತೆಗೆದು ಅದರ ಬೆಳಕಿನಲ್ಲಿ ಓದಲಿಕ್ಕೆ ಪ್ರಾರಂಭಿಸಿದರು. ಅದರಲ್ಲಿಯ ಧ್ವನಿ ಮತ್ತು ಅಕ್ಷರ ಬಿಟ್ಟು ಯಾವುದರ ಅರ್ಥವೇ ನಮಗೆ ಆಗಲಿಲ್ಲ. ಧೈರ್ಯದಿಂದ ನಾನು ಕೇಳಿದೆ:

"ಇದರ ಅರ್ಥ ಏನು?" ಎಂದು. ಅದಕ್ಕೆ ಅವರು ಅಂದರು, "ಕಾವ್ಯ ಬರೆದ ಖುಶ್‌ಗೆ ಪ್ರೊ. ಬೇಂದ್ರೆ ಅರ್ಥ ಹಚ್ಚಬೇಕು," ಎಂದು.

ಅವರು ಆಕಾಶವಾಣಿಯಲ್ಲಿ ಕೆಲಸಕ್ಕಿದ್ದಾಗ ಒಂದು ಸಲ ಸಾಧನಕೇರಿಯ ಜರ್ಮನ್ ದವಾಖಾನೆಯ ಹತ್ತಿರ ಅವರ ಭೆಟ್ಟಿಯಾಯಿತು. ಸುಮಾರು ಸಂಜೆಯ ೪ ಗಂಟೆಗೆ ಮಾತಾಡುತ್ತ ನಿಂತವರು ರಾತ್ರಿ ಏಳೂವರೆಯಾದರೂ ಮಾತು ಮುಗಿಯಲೇ ಇಲ್ಲ. ನಾವೀರ್ವರೂ ನಿಂತು ಮಾತಾಡುತ್ತಿದ್ದುದನ್ನು ಹೋಗಿ ಬರುವವರು ನೋಡುತ್ತಲೇ ಸಾಗುತ್ತಿದ್ದರು. ಒಬ್ಬರು ಮಾತ್ರ ದೂರ ನಿಂತು ನಮ್ಮ ಮಾತು ಕೇಳುತ್ತಿದ್ದಂತೆ ನನಗೆ ಭಾಸವಾಯಿತು. ನಾನು ಬೇಂದ್ರೆಯವರಿಗೆ, "ಯಾರೋ ನಿಮ್ಮ ಹಾದೀ ಕಾಯುತ್ತ ನಿಂತಂತೆ ಕಾಣುತ್ತದೆ," ಎಂದೆ. ಅದಕ್ಕೆ ಅವರು, "ನನ್ನ ಹಾದೀ ಕಾಯುತ್ತಿಲ್ಲ, ನಿನಗ ಸಾಕಾಗಿರಬೇಕು, ಹೋಗು," ಎಂದು ಹೇಳಿ ತಮ್ಮ ಮನೆಗೆ ಹೊರಟೇಬಿಟ್ಟರು. ಯಾವುದೇ ವಿಷಯ ಕುರಿತು ಚರ್ಚಿಸುವಾಗ ಅದರಲ್ಲಿ ಅಷ್ಟೊಂದು ತಲ್ಲೀನತೆ! ಮನೆಯ ಕಡೆಗಾಗಲಿ ವೇಳೆಯ ಕಡೆಗಾಗಲಿ, ಕೊನೆಗೆ ಹಸಿವು ನೀರಡಿಕೆಯ ಕಡೆಗಾಗಲಿ, ಅವರ ಲಕ್ಷ್ಯವೇ ಇರುತ್ತಿರಲಿಲ್ಲ.

ಕಟ್ಟಕಡೆಗೆ ಧಾರವಾಡದಿಂದ ಮುಂಬೈಗೆ ಚಿಕಿತ್ಸೆಗಾಗಿ ತೆರಳುವ ಮುಂದೆ ಡಾ. ತಾವರಗೇರಿಯವರ ದವಾಖಾನೆಯಲ್ಲಿ ಬೇಂದ್ರೆಯವರು ಸೇರಿಸಲ್ಪಟ್ಟಿದ್ದಾರೆ ಎಂಬ ಸುದ್ದಿ ತಿಳಿಯಿತು. ಅಲ್ಲಿಗೆ ಹೋದೆ. ಅವರ ಕೈಯಲ್ಲಿ ಒಂದು ಪುಸ್ತಕ; ತಲೆದಿಂಬಿಗೆ ಆನಿಕೊಂಡು ಕುಳಿತಿದ್ದರು. "ಬಹಳ ಮಾತಾಡಿಸಬೇಡಿರಿ," ಎಂದು ಡಾ. ವಾಮನ ಬೇಂದ್ರೆ ನಮಗೆ ಮೊದಲೇ ಹೇಳಿದ್ದರು. ಅದರಂತೆ ಹೋಗಿ ಅವರಿಗೆ ನಮಸ್ಕಾರ ಮಾಡಿ ಕುಳಿತುಕೊಳ್ಳುವಾಗ ನಾನು, "ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿರಿ, ಓದುವುದು ಬೇಡ," ಅಂದೆ. ಅದಕ್ಕೆ ಅವರು, "ಅಲ್ಲೊಽಽ ಓದತೇನಿ ಅಂತ ಜೀವಂತ ಇದ್ದೇನಿ; ಅದೂ ಬ್ಯಾಡಾ ಅಂತೀಯಲ್ಲ?" ಎಂದು ಹಾಸ್ಯ ಚಟಾಕಿ ಹಾರಿಸಿದರು.

ಒಂದು ಸಭೆಯಲ್ಲಿ ಇವರ ಪರಿಚಯ ಮಾಡುವ ಸಂದರ್ಭ ನನಗೆ ಬಂದಿತ್ತು. ಇವರ ಅನೇಕ ಕವನಗಳಲ್ಲಿಯ ಉಕ್ತಿಗಳನ್ನು ಹೇಳುತ್ತ, "ನಕ್ಕಾಂವಾ ಗೆದ್ದಾಂವಾ" ಅಂತ ಹೇಳಿ, ಜಗತ್ತಿನ ಶ್ರೇಷ್ಠ ಕವಿಗಳು ನಗೆಯ ಬಗೆಗೆ ಹೇಳಿದ್ದನ್ನು ನೆನೆಸಿ, ಜೋನ್ ಮೆಸ್‌ಫೀಲ್ಡರ "Laugh and be merry till the game is over..." ಎಂಬುದನ್ನು ಉಲ್ಲೇಖಿಸಿ, ಕವಿಗಳ ಹೃದಯಗಳಲ್ಲಿ ಒಂದೇ ತೆರನಾಗಿ ನಾಡಿ ಬಡಿಯುತ್ತಿದೆಯೇನೋ ಎಂಬುದನ್ನು ಹೇಳಿದಾಗ ಶ್ರೋತೃವೃಂದದವರು ಚಪ್ಪಾಳೆಯನ್ನಿಕ್ಕಿದರು. ತದನಂತರ ಬೇಂದ್ರೆಯವರು, "ಭಲೋ ಮಾತಾಡಿದಿ, ಅದರಂತೆ ಬರೆಯಲಿಕ್ಕೆ ಸುರುವು ಮಾಡು," ಎಂದರು. ಅವರಿಗೆ ರಸಾಯನಶಾಸ್ತ್ರ, ಸಂಖ್ಯಾಶಾಸ್ತ್ರ, ತತ್ವಜ್ಞಾನ ಇತ್ಯಾದಿಗಳ ಬಗ್ಗೆಯೂ ಅಪಾರವಾದ ಪಾಂಡಿತ್ಯವಿತ್ತು.

ಕಾಲಪ್ರವಾಹದಲ್ಲಿ ನನಗಿಂತ ಮೊದಲೇ ಅವರು ತೇಲಿಹೋದದ್ದರಿಂದ ಈಗ ಬೇಂದ್ರೆಯವರ ಒಡನಾಟ ನನಗಿಲ್ಲ. ನನ್ನ ಜೀವನದ ಸಂಧ್ಯೆಯಲ್ಲಿ ಮಧುರ ಸ್ಮೃತಿಗಳನ್ನು ಮೆಲುಕು ಹಾಕುವುದೇ ನನಗಿರುವ ಒಂದು ಆಸರೆ.

●

---

ತಾವು ನಾಲ್ಕು ಜನರೆದುರು ಎದ್ದು ಕಾಣುವಂತಾಗಬೇಕೆಂದು ಹವಣಿಸುವವರಿಂದಲೇ ಈ ಜಗತ್ತಿನಲ್ಲಿ ಅರ್ಧದಷ್ಟು ಕೆಡಕುಗಳು ಸಂಭವಿಸುತ್ತಿವೆ.

–ಟಿ.ಎಸ್. ಈಲಿಯಟ್

ಪರಸ್ಪರ ತಿಳಿವಳಿಕೆಯಿಂದ ಶಾಂತಿಯನ್ನು ಸ್ಥಾಪಿಸಬಹುದೇ ಹೊರತು ಬಲವಂತದಿಂದ ಮಾತ್ರ ಖಂಡಿತ ಅಲ್ಲ.

–ಆಲ್ಬರ್ಟ್ ಐನ್‌ಸ್ಟೈನ್

---

# ಆಸ್ಪತ್ರೆಯ ಕಸದಿಂದ ಏಡ್ಸ್?!

● ಡಾ. ಕೆ. ಕೆ. ಅಗರವಾಲ

ಮನೆಯ ಕಸವೇ ಆಗಿರಲಿ, ಆಸ್ಪತ್ರೆಯ ಕಸವೇ ಆಗಿರಲಿ, ಕಸವೆಂದರೆ ಕಸ; ಎರಡರಲ್ಲಿಯೂ ಭೇದವೇ ಇಲ್ಲ ಎಂದು ಭಾವಿಸಿದವರೇ ಹೆಚ್ಚು. ಹೀಗಾಗಿ ಎಷ್ಟೋ ಸಂದರ್ಭಗಳಲ್ಲಿ ಆಸ್ಪತ್ರೆಯ ಕಸ ಏಡ್ಸ್ ರೋಗ ಹಬ್ಬಲು ಕಾರಣವಾಗಬಲ್ಲದೆಂಬುದು ಅವರ ಗಮನಕ್ಕೆ ಬರುವುದೇ ಇಲ್ಲ.

ಮನೆಯ ಕಸ ಕೂಡ ರೋಗಾಣು ವಾಹಕವಾಗಿರಬಹುದಾದರೂ ತುಲನಾತ್ಮಕವಾಗಿ ಅದು ಆಸ್ಪತ್ರೆಯ ಕಸದಷ್ಟು ಅಪಾಯಕಾರವಲ್ಲ. ಅದನ್ನು ಪ್ಲಾಸ್ಟಿಕ್ ಚೀಲದಲ್ಲಿ ತುಂಬಿ, ಬಾಯಿಕಟ್ಟಿ, ತಿಪ್ಪೆಯಲ್ಲಿ ಎಸೆದರಾಯಿತು. ಆದರೆ ಆಸ್ಪತ್ರೆಯ ಕಸದ ಮಾತು ಹಾಗಲ್ಲ, ಚೂಪಾದ ವಸ್ತುಗಳನ್ನು ಅದು ಒಳಗೊಂಡಿರುತ್ತದೆ.

ಈ ಚೂಪಾದ ಪದಾರ್ಥಗಳು ಬಹುವೇಳೆ ರೋಗಾಣುರಹಿತವಾಗಿರುವುದಿಲ್ಲ. ಎಷ್ಟೋ ವೇಳೆ ಏಡ್ಸ್ ರೋಗಕ್ಕೆ ಕಾರಣವಾದ ಎಚ್‌ಐವಿ ವೈರಸ್ಸುಗಳೂ ಆ ಚೂಪಾದ ಪದಾರ್ಥಗಳ ಮೇಲೆ ಹರಡಿಕೊಂಡಿರಬಹುದು. ಇವುಗಳನ್ನೇನಾದರೂ ಪ್ಲಾಸ್ಟಿಕ್ ಚೀಲದಲ್ಲಿಟ್ಟು ಎಸೆದರೆ ಅವು ಚೀಲದ ಮೂಲಕ ತೂರಿಕೊಂಡು ಬಂದು, ಯಾರಿಗಾದರೂ ಚುಚ್ಚಿ, ಆ ಮೂಲಕ ಎಚ್‌ಐವಿ ವೈರಸ್ಸುಗಳು ದೇಹದಲ್ಲಿ ಪ್ರವೇಶಿಸಿ ಏಡ್ಸ್‌ರೋಗ ಬರಲು ಕಾರಣವಾಗಬಹುದು. ಚೂಪಾದ ವಸ್ತುಗಳಲ್ಲಿ ಅಷ್ಟೇ ಅಲ್ಲ, ಆಸ್ಪತ್ರೆಯ ಇತರ ಕಸದಲ್ಲಿಯೂ ಈ ಏಡ್ಸ್ ರೋಗಾಣುಗಳು ಕಂಡು ಬಂದಿದ್ದುಂಟು. ಇಂಥಾ ಪರಿಸ್ಥಿತಿಯಲ್ಲಿ ಭಸ್ಮಕಗಳ (**Incinerators**) ಮೂಲಕ ಕಸವನ್ನು ನಾಶಪಡಿಸುವುದು ಅತ್ಯುತ್ಕೃಷ್ಟವಾದ ವಿಧಾನ. ಆದರೆ ಎಲ್ಲ ಆಸ್ಪತ್ರೆಗಳಲ್ಲೂ ಭಸ್ಮಕಗಳ ಸೌಲಭ್ಯ ಲಭ್ಯವಿರುವುದಿಲ್ಲ. ಅಂಥಲ್ಲಿ ಕಸವನ್ನೆಲ್ಲ ಒಟ್ಟುಗೂಡಿಸಿ ಗಟ್ಟಿಯಾದ ಚೀಲಗಳಲ್ಲಿ ತುಂಬಿ ಆಳವಾದ ಕುಳಿಗಳಲ್ಲಿ ಹುಗಿಸಬೇಕು. ಈ ಕುಳಿಗಳಿಗಾಗಿಯೇ ಪ್ರತ್ಯೇಕವಾದ ಜಾಗವಿರಬೇಕು. ಜನರಾಗಲಿ ಪ್ರಾಣಿಗಳಾಗಲಿ ಸಂಚರಿಸದಂತೆ ಆ ಜಾಗದ ಸುತ್ತ ಬೇಲಿಯನ್ನು ನಿರ್ಮಿಸಬೇಕು. ಆದರೆ ಎಷ್ಟೋ ಆಸ್ಪತ್ರೆಗಳಲ್ಲಿ ಈ ಕೆಲಸಕ್ಕಾಗಿ ಸಾಕಷ್ಟು ಜಾಗವೂ ಇರುವುದಿಲ್ಲ. ಅಂತಹ ಪ್ರಸಂಗದಲ್ಲಿ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಕಸವನ್ನು ಹಾಕಿ, ಹೊಗೆ ಹೊರಗೆ ಹೋಗದ ಹಾಗೆ ಸೀಲ್ ಮಾಡಿ, ೧೬೦ ಸೆಲ್ಸಿಯಸ್ ಡಿಗ್ರಿಗಳಷ್ಟು ಉಷ್ಣತೆಯಲ್ಲಿ ಒಂದು ಗಂಟೆಯವರೆಗೆ ಸುಟ್ಟು ಕಸವನ್ನು ರೋಗಾಣುರಹಿತಗೊಳಿಸಬೇಕು. ಈ ಸೌಲಭ್ಯವೂ ಲಭ್ಯವಿಲ್ಲದಿದ್ದರೆ ಬ್ಲೀಚಿಂಗ್ ಪೌಡರ್ ಹಾಕಿ ಕಸದಲ್ಲಿರುವ ರೋಗಾಣುಗಳೆಲ್ಲವನ್ನೂ ನಾಶಗೊಳಿಸಬೇಕು.

ಆಸ್ಪತ್ರೆಯಲ್ಲಿ ಸಿರಿಂಜನ್ನಾಗಲಿ ಇಂಜೆಕ್ಷನ್ನಿನ ಮುಳ್ಳನ್ನಾಗಲಿ ಸಾಕಷ್ಟು ಕಾಲ ಕುದಿಯುವ ನೀರಿನಲ್ಲಿ ಮುಳುಗಿಸಿ, ರೋಗಾಣುರಹಿತಗೊಳಿಸದೆ ಬಳಸುವ ಸಂಭವವಿದೆ. ಹೀಗಾಗಿಯೂ ಎಚ್‌ಐವಿ ವೈರಸ್ಸುಗಳು ರೋಗಿಯಿಂದ ರೋಗಿಗೆ ಹಬ್ಬಲು ಸಾಧ್ಯ. ಇದರ ಬದಲು, ಒಂದೇ ಸಲ ಉಪಯೋಗಿಸಬಹುದಾದ ಸಿರಿಂಜನ್ನಾಗಲಿ ಮುಳ್ಳನ್ನಾಗಲಿ ಬಳಸಿ, ನಂತರ ಅವುಗಳನ್ನು ನಾಶಗೊಳಿಸುವುದು ಒಳ್ಳೆಯದು. ಆಸ್ಪತ್ರೆಗೆ ಬರುವ ರಕ್ತದ ಮಾದರಿಯಲ್ಲೂ ಏಡ್ಸ್ ರೋಗಕ್ಕೆ ಕಾರಣವಾದ ಎಚ್‌ಐವಿ ವೈರಸ್ಸುಗಳಿರಬಹುದು. ಆದ್ದರಿಂದ ರಕ್ತವನ್ನು ತಿಪ್ಪೆಯಲ್ಲಾಗಲಿ ವಾಷ್‌ಬೇಸಿನ್ನಿನಲ್ಲಾಗಲಿ ಹಾಗೆಯೆ ಸುರಿಯುವ ಬದಲು ಪೂರ್ತಿ ನಾಶಕಗಳಿಂದ

ರೋಗಾಣುಗಳನ್ನು ನಾಶಗೊಳಿಸಿದ ನಂತರವೇ ಅದನ್ನು ಎಸೆಯಬೇಕು.

ಐನೂರು ಜನರಿಗೆ ಸ್ಥಳಾವಕಾಶವಿರುವ ಆಸ್ಪತ್ರೆಯಲ್ಲಿ ಸುಮಾರು ಐದು ಜನರಲ್ಲಿ ಎಚ್‌ಐವಿ ವೈರಸ್ಸುಗಳು ಕಂಡು ಬರುತ್ತವೆ ಎಂಬುದೊಂದು ಲೆಕ್ಕಾಚಾರ. ಆದರೆ ಏಡ್ಸ್ ರೋಗದ ಲಕ್ಷಣಗಳು ವ್ಯಕ್ತವಾಗಿ ಕಂಡುಬರುವುದಿಲ್ಲವಾದ್ದರಿಂದ ಇವರೆಲ್ಲ ಬೇರೆ ವ್ಯಾಧಿಯ ಚಿಕಿತ್ಸೆಗಾಗಿ ಸೇರಿಸಲ್ಪಟ್ಟ ಸಂಭವವೇ ಹೆಚ್ಚು. ನೀರಿನಲ್ಲಿ ಸರಿಯಾಗಿ ಕುದಿಸದೆ ಇಂಥವರಿಗೆ ಮಾಡಿದ ಇಂಜೆಕ್ಷನ್ನನ್ನು ಇನ್ನೊಬ್ಬರಿಗೂ ಉಪಯೋಗಿಸಿದರೆ ಏಡ್ಸ್ ಇಲ್ಲದವರಿಗೂ ಅದು ತಗುಲೀತು. ಒಮ್ಮೆ ಮಾತ್ರ ಉಪಯೋಗಿಸಬೇಕಾದ ಸಿರಿಂಜುಗಳನ್ನು ಸೋಂಕಿಲ್ಲದಂತೆ ಸರಿಯಾಗಿ ಶುದ್ಧಗೊಳಿಸದೆ ಉಪಯೋಗಿಸುವುದರಿಂದ ಇಂಜಿಕ್ಷನ್ ಪಡೆದವರಿಗಷ್ಟೆ ಅಲ್ಲ, ಇಂಜೆಕ್ಷನ್ ಮಾಡುವವರಿಗೂ ಏಡ್ಸ್‌ರೋಗ ಹಬ್ಬುವ ಅಪಾಯವಿದೆ.

ಡಾಕ್ಟರರು ಪರೀಕ್ಷಾರ್ಥವಾಗಿ ಸ್ಪರ್ಶಮಸೂರಗಳನ್ನು ಅಳವಡಿಸುವಲ್ಲಿಯೂ ಏಡ್ಸ್‌ರೋಗ (ಹಾಗೆ ನೋಡಿದರೆ ರೋಗಾಣುಗಳ ಮೂಲಕ ಹಬ್ಬುವ ಇತರ ರೋಗಗಳು ಸಹ) ಹಬ್ಬುವ ಪ್ರಮೇಯವಿದೆ. ಆದ್ದರಿಂದ ರೋಗಾಣುಗಳನ್ನು ನಾಶಗೊಳಿಸಲು ಸ್ಪರ್ಶಮಸೂರಗಳಿಗಾಗಿಯೆ ಇರುವ ವಿಶೇಷವಾದ ದ್ರಾವಣದಿಂದ ತೊಳೆದ ನಂತರವೇ ಅವುಗಳನ್ನು ಅಳವಡಿಸಬೇಕು.

ಎಷ್ಟೋ ಆಸ್ಪತ್ರೆಗಳಲ್ಲಿ ರೋಗಿಗಳ ಬಟ್ಟೆಗಳನ್ನು ತೊಳೆಯಲು ಅವರ ಸಂಬಂಧಿಕರಿಗೇ ಕೊಡುವುದುಂಟು. ಇದರಿಂದಾಗಿಯೂ ರೋಗ ಸಂಬಂಧಿಕರಿಗೆ ಹಬ್ಬಬಹುದು. ಬದಲು, ರೋಗಿಗಳ ಬಟ್ಟೆಯನ್ನು ಪೂತಿನಾಶಕಗಳಿಂದ ನಾಶಗೊಳಿಸಿ ಅಥವಾ ಅರ್ಧಗಂಟೆಯವರೆಗೆ ನೀರಿನಲ್ಲಿ ಕುದಿಸಿ ನಂತರವೇ ಅವುಗಳನ್ನು ಸಂಬಂಧಿಕರಿಗೆ ಕೊಡಬೇಕು.

ಕಣ್ಣಿಗೆ ಕಾಣುವುದಿಲ್ಲ ನಿಜ, ಆದರೆ ರಕ್ತ ಹಾಗೂ ಮಲ-ಮೂತ್ರದ ಸೂಕ್ಷ್ಮಾತಿಸೂಕ್ಷ್ಮವಾದ ಕಣಗಳು ರೋಗಿಗೆ ನೀಡಲ್ಪಟ್ಟ ಔಷಧ ಚೀಟಿಯನ್ನೊಳಗೊಂಡು ಅವನು ಉಪಯೋಗಿಸುವ ಶೇಕಡಾ ೮ ರಷ್ಟು ಪದಾರ್ಥಗಳಿಗೆ ಅಂಟಿರುತ್ತದೆ ಎನ್ನುವುದು ಪರಿಶೀಲನೆಗಳಿಂದ ದೃಢಪಟ್ಟಿದೆ. ಇದು ಸಹ ಏಡ್ಸ್ ಹಬ್ಬಲು ಕಾರಣವಾಗಬಹುದು.

ಹೆರಿಗೆ ಆಸ್ಪತ್ರೆಗಳಲ್ಲಿ ಕರುಳಬಳ್ಳಿಗಳನ್ನು ವಿಶೇಷ ಮುತುವರ್ಜಿ ವಹಿಸದೇ ಬೇಕಾಬಿಟ್ಟಿಯಾಗಿ ಒಗೆಯಲಾಗುತ್ತದೆ. ಅವುಗಳನ್ನು ಬೆಕ್ಕು-ನಾಯಿಗಳಂತಹ ಸಾಕು ಪ್ರಾಣಿಗಳು ತಿನ್ನುವುದೂ ಸಾಮಾನ್ಯ. ಹೆರಿಗೆಯಾದ ಹೆಂಗಸಿಗೆ ಏಡ್ಸ್ ಇದ್ದುದಾದರೆ ಹೀಗೆ ತಿಪ್ಪೆಗೆ ಎಸೆಯಲ್ಪಟ್ಟ ಕರುಳಬಳ್ಳಿಯಿಂದ ಸುತ್ತಮುತ್ತಲಿನ ಪ್ರದೇಶದಲ್ಲಿ ಏಡ್ಸ್ ಹಬ್ಬಲು ತಡವಾಗುವುದಿಲ್ಲ. ರೋಗಾಣುರಹಿತಗೊಳಿಸಿದ ನಂತರವೇ ಪ್ರತಿಯೊಂದು ಕರುಳಬಳ್ಳಿಯನ್ನು ತಿಪ್ಪೆಗೆಸೆಯುವುದು ಇಂತಹ ಪ್ರಸಂಗದಲ್ಲಿ ಏಡ್ಸ್‌ರೋಗವನ್ನು ತಡೆಯಲು ಇರುವ ಏಕೈಕ ಮಾರ್ಗ.

ಇಲ್ಲಿ ವಿವರಿಸಿದ್ದು ಕೆಲವೊಂದು ಕಾರಣಗಳನ್ನು ಮಾತ್ರ. ಇದಲ್ಲದೆ ಇನ್ನೂ ಅನೇಕ ಕಾರಣಗಳೂ ಇವೆ. ಏಡ್ಸ್‌ರೋಗ ಭರದಿಂದ ಹಬ್ಬುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಡಾಕ್ಟರರಾಗಲಿ ಆಸ್ಪತ್ರೆಯ ಸಿಬ್ಬಂದಿಯಾಗಲಿ ಮೈಯೆಲ್ಲ ಕಣ್ಣಾಗಿ ಆ ಕುರಿತು ಲಕ್ಷ್ಯಹರಿಸುವದು ಅಗತ್ಯ. ●

(ದೇ ಆಷ್ಟರ್'ನಿಂದ ಸಾಭಾರ)

ಪಕ್ಕದ ಮನೆಗೆ ಬೆಂಕಿ ಬಿದ್ದಾಗ ಅದನ್ನು ನೀನು ನಂದಿಸದೇ ನಿರ್ವಾಹವೇ ಇಲ್ಲ.

–ಹೋರೇಸ್

ನನ್ನನ್ನು ನಾನು ಅರಿತುಕೊಳ್ಳುವ ಬುದ್ಧಿಯನ್ನು ಕೊಡು ಪ್ರಭುವೇ; ಆಗ ನೀನು ತಂತಾನೆ ಅರ್ಥವಾಗುವಿ.

–ಸಂತ ಅಗಸ್ಟೈನ್

# ಅಕಬರ ಬಾದಶಹನ ಪುಸ್ತಕ ಪ್ರೀತಿ

● ಆರ್.ಆರ್. ಅತಗೂರ

**ಆತನೊಬ್ಬ ಸಾಹಿತ್ಯಪ್ರೇಮಿ. ತನಗೆ ಪ್ರಮುಖವೆಂದು ಕಂಡ ಸಂಸ್ಕೃತ, ಹಿಂದಿ, ಅರಬ್ಬೀ ಭಾಷೆಯ ಪುಸ್ತಕಗಳನ್ನು ಪರ್ಶಿಯನ್ ಭಾಷೆಗೆ ತರ್ಜುಮೆಗೈಯಲು ಆತ ಆಸಕ್ತಿ ವಹಿಸಿದ.**

ಮೊಗಲರ ಆಡಳಿತದಲ್ಲಿ ಅಕಬರ ಬಾದಶಹನ ಕಾಲ ಸುವರ್ಣಯುಗ. ರಾಜ್ಯ ವಿಸ್ತಾರದೊಡನೆ ಸುಖ ಶಾಂತಿ, ಸುವ್ಯವಸ್ಥೆ, ಒದು ಬಗಹದ ಚಟುವಟಿಕೆಗಳು ಉತ್ತುಂಗ ಶಿಖರ ಕಂಡ ಕಾಲವದು. ಬೃಹದ್ಗ್ರಂಥಗಳ ಸಂಯೋಜನೆ, ಭಾಷಾಂತರ ಕಾರ್ಯ, ಪುಸ್ತಕಗಳ ಶೃಂಗಾರ ಬಾದಶಹನ ಪುಸ್ತಕಪ್ರೀತಿಯ ಜೀವಂತ ನಿದರ್ಶನಗಳು.

ಕಿಸ್ತಶಕ ೧೫೪೨ರ ಅಕ್ಟೋಬರ್ ೧೫ರಂದು ಅಕಬರನ ಜನನ. ಉಮರಕೋಟ ಅವನ ಜನ್ಮಸ್ಥಳ. ಇದು ಇಂದು ಪಾಕಿಸ್ತಾನದ ಸಿಂಧ ಪ್ರಾಂತದಲ್ಲಿದೆ. ಬಾದಶಹನ ರಾಜ್ಯಾಡಳಿತದ ರೀತಿ ಮೆಚ್ಚುವಂತಹದು. ಅದು ರಾಜಕೀಯ ಸ್ಥಿರತೆ ಒದಗಿಸಿತಲ್ಲದೆ, ಸಾಂಸ್ಕೃತಿಕ ಜೀವನದಲ್ಲಿ ಮಹತ್ತರ ಬದಲಾವಣೆ ತಂದಿತು. ಭಾವನೆಗಳ ಪ್ರವಾಹವೆನಿಸಿದ ಗ್ರಂಥಗಳ ಬಗ್ಗೆ ಆತನಿಗೆ ಅಪಾರ ಪ್ರೀತಿ. ಅವುಗಳ ಶೃಂಗಾರ, ಮೆರಗು, ಗ್ರಂಥಗಳ ಭಾಷಾಂತರ ಕಾರ್ಯ, ಗ್ರಂಥಾಲಯಗಳ ಸ್ಥಾಪನೆ ಹಾಗೂ 'ಳೆಳವಣಿ'ಗೆ ವಿಶೇಷವಾಗಿ ಅವನ ಮನಸೆಳೆದವು. ವೈಯಕ್ತಿಕ ಹಾಗೂ ಸಂಘ ಸಂಸ್ಥೆಗಳ ಗ್ರಂಥಾಲಯಗಳು ಭರದಿಂದ ಬೆಳೆಯತೊಡಗಿದವು.

ಅಕಬರ ಬಾದಶಹ ಅನಕ್ಷರಸ್ಥನಾಗಿದ್ದರೂ ಸುಸಂಸ್ಕೃತನಾಗಿದ್ದನೆಂದು ತನ್ನ ಗ್ರಂಥವಾದ "ತುರುಖ-ಇ-ಜಹಾಂಗೀರಿ"ಯಲ್ಲಿ ಆತನ ಮಗನಾದ ಜಹಾಂಗೀರ ವಿವರಿಸಿದ್ದಾನೆ. ಕಾವ್ಯದ ಮಾಧುರ್ಯವನ್ನೂ ಗದ್ಯದ ಸವಿಯನ್ನೂ ಕಂಡು ಬಾದಶಹ ತಲೆದೂಗುತ್ತಿದ್ದನಂತೆ. ಈ ಸವಿಯು ಅನ್ಯ ಸಾಹಿತ್ಯದಲ್ಲಿ ಅವನ ಅಭಿರುಚಿಯನ್ನು ಹೆಚ್ಚಿಸಿತು. ಅವನ ದರ್ಬಾರದಲ್ಲಿದ್ದ ಪಂಡಿತರಿಗೆ, ಕವಿಗಳಿಗೆ, ತತ್ವಜ್ಞಾನಿಗಳಿಗೆ, ಇತಿಹಾಸಕಾರರಿಗೆ ಅಗ್ರತಾಂಬೂಲ ಸಲ್ಲುತ್ತಿತ್ತು. ಆತನ ಆಸ್ಥಾನದಲ್ಲಿದ್ದ ನವರತ್ನಗಳೆಂದು ಕರೆಯಲ್ಪಡುತ್ತಿದ್ದ ಪಂಡಿತರೇ ಇದಕ್ಕೆ ಸಾಕ್ಷಿ.

ಇತಿಹಾಸ ಬಾದಶಹನ ಅಚ್ಚುಮೆಚ್ಚಿನ ವಿಷಯ. ಸುಮಾರು ಒಂದು ಸಾವಿರ ವರ್ಷದ ಮಹಮ್ಮದೀಯ ಇತಿಹಾಸ ಹೊರಬರಬೇಕೆಂದು ಆತ ಕನಸು ಕಾಣುತ್ತಿದ್ದ. ಪ್ರವಾದಿ ಮಹಮ್ಮದರ ಕಾಲ

(ಲೇಖಕರು ಮುಂಬಯಿ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪ್ರೌಢ ಪ್ರಬಂಧದಿಂದ ಆಯ್ದ ಭಾಗ.)

ಇದರ ಪ್ರಾರಂಭದ ಘಟ್ಟ. ಇದಕ್ಕಾಗಿ ರಾಜಾಜ್ಞೆ ಇತ್ತ. ಮುಖ್ಯ ಸಂಪಾದಕರು ಪದೇ ಪದೇ ಬದಲಾದರೂ ಕೆಲಸ ಸುಸೂತ್ರವಾಗಿತ್ತು. ಮೂವತ್ತೈದು ವರ್ಷಗಳ ಕಠಿಣ ಪರಿಶ್ರಮದಿಂದ ಈ ಗ್ರಂಥ ಸಜ್ಜಾಯಿತು. 'ತಾರೀಖ್-ಇ-ಅಲ್ಫ್' ಯೆಂದು ಹೆಸರಿಸಲಾಯಿತು. ಈ ದೀರ್ಘ ಕೃತಿಗೆ ಅಬುಲ್‌ಫಜಲ್ ಮುನ್ನುಡಿ ಬರೆದಿದ್ದಾನೆ. ಇನ್ನುಳಿದ ವಿಷಯಗಳ ಬಗ್ಗೆ ಹೇಳುವುದಾದರೆ ವಿಜ್ಞಾನದ ಮಹತ್ತರ ಸಾಧನೆಗಳನ್ನೂ ಬಾದಶಹ ಪ್ರೋತ್ಸಾಹಿಸುತ್ತಿದ್ದ. ಅಲ್ಲದೆ ಖಗೋಳ, ಗಣಿತ ಮತ್ತು ಔಷಧಿಶಾಸ್ತ್ರ ಪಂಡಿತರನ್ನೂ ಪ್ರೋತ್ಸಾಹಿಸಿದ.

ಶಾಸ್ತ್ರೀಯ ಗ್ರಂಥಗಳನ್ನು ಅನ್ಯರಿಂದ ಓದಿಸಿ ಕೇಳಿ ಆನಂದಿಸುತ್ತಿದ್ದ ಅಕಬರ ಪ್ರಕಾಂಡ ಪಂಡಿತರನ್ನು ಸಾಹಿತಿಗಳನ್ನು ಮಾತ್ರ ಈ ಕೆಲಸಕ್ಕೆ ನೇಮಿಸುತ್ತಿದ್ದ. ಅಂದಿನ ಓದು ಮುಗಿದಮೇಲೆ ತಾನೇ ಆ ಪುಟದ ಮೇಲೆ ಗುರುತು ಹಾಕುತ್ತಿದ್ದ. ಬಾದಶಹನಿಗಾಗಿ ಬಂದ ಓದುಗ ಬೆಳ್ಳಿ, ಬಂಗಾರ ಇಲ್ಲವೆ ನಗದು ರೂಪದ ಕಾಣಿಕೆ ಪಡೆಯುತ್ತಿದ್ದ. ಅಗಾಧ ಸ್ಮರಣಶಕ್ತಿ ಹೊಂದಿದ್ದ ಅಕಬರ, ತನಗಾಗಿ ಓದಲ್ಪಟ್ಟ ಪುಸ್ತಕಗಳ ತಿರುಳನ್ನು ನೆನೆಯುತ್ತ ಕಾಲ ಕಳೆಯುತ್ತಿದ್ದ. ಶಾಹನಾಮಾ ಹಾಗೂ ಅಮೀರ ಖುಸ್ರೋನ ಕೆಲ ಗ್ರಂಥಗಳು ಅವನನ್ನು ವಿಶೇಷವಾಗಿ ಆಕರ್ಷಿಸಿದ್ದವು. ವಿದ್ವಾಂಸರ ಸಂಗದಿಂದ ಅವನ ಜ್ಞಾನದ ದಾಹ ಹೆಚ್ಚಾಯಿತು.

## ಪುಸ್ತಕ ಪ್ರೀತಿ

ಬಾದಶಹ ತನ್ನ ಪೂರ್ವಜರಂತೆಯೆ ಸಾಹಿತ್ಯದ ಅಭಿರುಚಿಯನ್ನು ಮುಂದುವರಿಸಿದ. ಅವರ ಶಿಕ್ಷಣ ನೀತಿಯ ಬಗ್ಗೆ ಮೆಚ್ಚಿಗೆ ಸೂಚಿಸಿದ. ತನ್ನ ಅರಮನೆಯ ಗ್ರಂಥಭಾಂಡಾರದಲ್ಲಿ ಹೊತ್ತಿಗೆಗಳನ್ನು ಶೇಖರಿಸುವುದೆಂದರೆ ಅಕಬರನಿಗೆ ಎಲ್ಲಿಲ್ಲದ ಆನಂದ. ಲೇಖಕರು ತಮ್ಮ ಕೃತಿಯ ಒಂದು ಪ್ರತಿಯನ್ನು ಅರಮನೆಯ ಗ್ರಂಥ ಭಾಂಡಾರಕ್ಕೆ ಕೊಡಬೇಕಾಗುತ್ತಿತ್ತು. ಅಲ್ಲದೆ ಹಾಜ್ ಯಾತ್ರಿಕರು ಅಲ್ಲಿಂದ ಮರಳುವಾಗ ಪುಸ್ತಕಗಳನ್ನು ತರಬೇಕಾಗುತ್ತಿತ್ತು. ಬಾದಶಹ ತಾನು ದಾಳಿಮಾಡಿದಾಗ ವಶಪಡಿಸಿಕೊಂಡ ವಸ್ತುಗಳಲ್ಲಿ ಪುಸ್ತಕಗಳಿದ್ದರೆ ಅವುಗಳನ್ನು ಅರಮನೆ ಗ್ರಂಥಭಾಂಡಾರಕ್ಕೆ ಕಳಿಸುತ್ತಿದ್ದ.

ಧಾರ್ಮಿಕ ಗ್ರಂಥಗಳ ಭಾಷಾಂತರ ಬಾದಶಹನ ಆಸಕ್ತಿಯ ಇನ್ನೊಂದು ಮುಖ. ಇದಕ್ಕಾಗಿ ಒಂದು ಇಲಾಖೆಯನ್ನು ತೆರೆದು, ಉದ್ದಾಮ ಪಂಡಿತರನ್ನು ಈ ಕೆಲಸಕ್ಕಾಗಿ ನೇಮಿಸಿದ. ಹಿಂದೂ ಮುಸಲ್ಮಾನರು ಭಾವನಾತ್ಮಕವಾಗಿ ಒಮ್ಮತಕ್ಕೆ ಬರುವಂತೆ ಮಾಡಿದ.

ಪರಧರ್ಮ ಸಹಿಷ್ಣುತೆ ಬಾದಶಹನ ಬೀಜ ಮಂತ್ರವಾಗಿತ್ತು. ಕ್ರಿಶ್ಚಿಯನ್ ಪಾದ್ರಿಗಳು ಅಕಬರನ ಮೇಲೆ ಒಳ್ಳೆಯ ಪ್ರಭಾವ ಬೀರಿದ್ದರು. ಅಲ್ಲದೆ ಅವನೊಡನೆ ಸಂಭಾಷಣೆ ನಡೆಸುತ್ತಿದ್ದರು. ಮೊದಲು ಪಾದ್ರಿಗಳಿಗೆ ಉತ್ಸಾಹದ ಚಿಲುಮೆಯಾದ ಬಾದಶಹ, ಕ್ರಮೇಣ ಒಡೆಯಲಾರದ ಒಗಟಾದ, ಕೊನೆಗೆ ನಿರಾಶೆಯ ಮೂರ್ತಿಯಾದ.

ಮೊದಲ ಪಾದ್ರಿಗಳ ತಂಡ ಅಕಬರ ಬಾದಶಹನನ್ನು ಕಂಡದ್ದು ಕ್ರಿಸ್ತಶಕ ೧೫೮೦ರಲ್ಲಿ. ಈ ಭೆಟ್ಟಿಯ ಸವಿ ನೆನಹಿನ ಕಾಣಿಕೆ ಬೈಬಲ್ಲಿನ ಕೊಡುಗೆಯಾಗಿತ್ತು. ಹೀಬ್ರು, ಚಾಲ್ಡಿ, ಲ್ಯಾಟಿನ್ ಹಾಗೂ ಗ್ರೀಕ್ ಭಾಷೆಗಳಲ್ಲಿದ್ದ ಇದು ಏಳು ಸಂಪುಟಗಳಷ್ಟು ವಿಸ್ತಾರವಾಗಿದೆ. ವೊಂಟೆಸಿಸ್ ಈ ಗ್ರಂಥದ ಸಂಪಾದಕನಾಗಿದ್ದ. ಇದು ಮುದ್ರಣಗೊಂಡದ್ದು ಕ್ರಿಸ್ತಶಕ ೧೫೬೯-೭೨ರಲ್ಲಿ. ಈ ಗ್ರಂಥ ಅರಮನೆಯ ಗ್ರಂಥಭಾಂಡಾರದ ಶೋಭೆಯನ್ನು ಹೆಚ್ಚಿಸಿತು. ಇನ್ನುಳಿದ ಯುರೋಪದ ಪುಸ್ತಕಗಳ ಜೊತೆ ಇದನ್ನು ಇರಿಸಲಾಯಿತು.

## ಭಾಷಾಂತರ ಸಂಸ್ಥೆ

ತನಗೆ ಪ್ರಮುಖವಾಗಿ ಕಂಡ ಸಂಸ್ಕೃತ, ಹಿಂದಿ, ತುರ್ಕಿ, ಅರಬ್ಬೀ ಭಾಷೆಯ ಪುಸ್ತಕಗಳನ್ನು ಪರ್ಶಿಯನ್ ಭಾಷೆಗೆ ಭಾಷಾಂತರಿಸಲು ಅಕಬರ ಆಸಕ್ತಿ ವಹಿಸಿದ. ಕ್ರಿಸ್ತಶಕ ೧೫೮೨ರಲ್ಲಿ ಮಹಾಭಾರತವನ್ನು 'ಝುಂನಾಮಾ' ಎಂಬ ಹೆಸರಿನಲ್ಲಿ ಭಾಷಾಂತರಿಸಲಾಯಿತು. ಉದ್ದಾಮ ಪಂಡಿತರಾದ ನಕೀಬ್‌ಖಾನ್, ಮೌಲಾನಾ ಅಬ್ದುಲ್ ಕಾದಿರ್ (ಬಡೋಣಿ) ಮತ್ತು ಶೇಖ್ ಸುಲ್ತಾನ ಈ ಕಾರ್ಯವನ್ನು ಕೈಗೆತ್ತಿಕೊಂಡವರಲ್ಲಿ ಪ್ರಮುಖರು. 'ಐನೆ ಅಕಬರಿ' ವಿಶ್ವಕೋಶದ ಗ್ರಂಥಕರ್ತ ಅಬುಲ್ ಫಜಲ್ ಈ ಗ್ರಂಥಕ್ಕೆ ಎರಡು ಪುಟಗಳ

ಮುನ್ನುಡಿ ಬರೆದಿದ್ದಾನೆ. ಕ್ರಿಸ್ತಶಕ ೧೫೮೯ರಲ್ಲಿ ಈ ವಿದ್ವಾಂಸರ ತಂಡ 'ರಾಮಾಯಣ'ವನ್ನು ಪರ್ಶಿಯನ್ ಭಾಷೆಗೆ ತರ್ಜುಮೆ ಮಾಡಿತು. ನಾಲ್ಕು ವರ್ಷ ಸತತ ಪ್ರಯತ್ನದ ವ್ಯಥೆ ಕಥೆ ಇದರ ಹಿಂದೆ ಅಡಗಿದೆ.

ಸರಹಿಂದ ಗ್ರಾಮದ ಹಾಜಿ ಇಬ್ರಾಹಿಮ 'ಅಥರ್ವ(ಣ) ವೇದ'ವನ್ನು ಭಾಷಾಂತರಿಸಿದರೆ, ಶಬ್ದುಲ್ ಫೈಜಿ 'ಲೀಲಾವತಿ' ಗ್ರಂಥದ ಭಾಷಾಂತರಕ್ಕೆ ಕೈಹಾಕಿದ. ಕಲ್ಹಣನ 'ರಾಜತರಂಗಿಣಿ'ಯನ್ನು ಶಹಾಬಾದದ ಮೌಲಾನಾ ಶಾಹ ಮಹಮ್ಮದ್ ಪರ್ಶಿಯನ್ ಭಾಷೆಗೆ ಇಳಿಸಿದ. 'ಹರಿವಂಶ' ಪರ್ಶಿಯನ್ ಭಾಷೆಗೆ ಭಾಷಾಂತರ ರೂಪದಿಂದ ಬಂದದ್ದು ಮೌಲಾನಾ ಶೇರಿಯಿಂದ. ಇದೇ ಸಮಯದಲ್ಲಿ 'ಪಂಚತಂತ್ರ' ಮತ್ತು 'ಬೈಬಲ್' ಕೂಡ ಭಾಷಾಂತರವಾದ ಮುಖ್ಯ ಗ್ರಂಥಗಳು.

## ಗ್ರಂಥಗಳ ಅಲಂಕರಣ

ಪುಸ್ತಕಗಳ ಅಲಂಕರಣ ಕಂಡರೆ ಮೊಗಲ್ ದೊರೆಗಳ ಮನ ಅರಳುತ್ತಿತ್ತು. ಅದು ಅವರಿತ್ತ ಅಮೋಘ ಕೊಡುಗೆಯಾಗಿದೆ. ಗ್ರಂಥಗಳ ಒಳಗಿನ ವಿಷಯದ ಕಡೆಗೆ ಮನ ಹತ್ತಬೇಕಾದರೆ, ಹೊರ ಮೈಯ ರೂಪ ರೇಷೆ ಓರಣದಿಂದ ಕೂಡಿರಬೇಕು. ಇದನ್ನು ಮನಗಂಡು ಬಾದಶಹನು ಪುಸ್ತಕಗಳ ಹೊರಮೈಯ ಅಂದ ಚಂದಗೊಳಿಸುವಿಕೆಯನ್ನು ಪ್ರೋತ್ಸಾಹಿಸಿ, ಈ ಪುಸ್ತಕ ಅಲಂಕಾರವನ್ನು ಒಂದು ಕಲೆಯ ಮಟ್ಟಕ್ಕೆ ತಂದ. ಕಲಾವಿದರು ಪುಸ್ತಕಗಳಲ್ಲಿ ಚಿತ್ರ ಬಿಡಿಸುವುದನ್ನು ಒಂದು ಹವ್ಯಾಸವಾಗಿ ಮುಂದುವರೆಸಿದರು. ಉತ್ತಮೋತ್ತಮ ಚಿತ್ರಕಾರರು ಸುಂದರವಾಗಿ ಬಿಡಿಸಿದ ಚಿತ್ರಗಳನ್ನು ನಾವು ಇಂದಿಗೂ 'ಚಾಂಗೀಸನಾಮಾ,' 'ಅಕಬರನಾಮಾ,' 'ರಾಮಾಯಣ,' 'ಮಹಾಭಾರತ' ಮೊದಲಾದ ಉದ್ಗ್ರಂಥಗಳಲ್ಲಿ ಕಾಣುತ್ತೇವೆ. ಚಿತ್ರಕಾರರ ಅನೇಕ ವರ್ಷಗಳ ಕಠಿಣ ಪರಿಶ್ರಮ ಇದರಲ್ಲಿ ಅಡಗಿದೆ.

## ಅರಮನೆಯ ಗ್ರಂಥಾಲಯ

ಬಾದಶಹನ ತಂದೆ ಹುಮಾಯೂನ ಅರಮನೆಯ ಗ್ರಂಥಾಗಾರವನ್ನು ಕಟ್ಟಿ ಬೆಳೆಸತೊಡಗಿದ್ದ. ಆಗ್ರಾ ಕೋಟೆಯ ಗೋಪುರದ ಪಕ್ಕದಲ್ಲಿಯ ಅಷ್ಟಪೈಲಿ ಕೋಣೆಯಲ್ಲಿ ಅದನ್ನು ಸ್ಥಾಪಿಸಿದ್ದ. ಬಾದಶಹ ಅಪಾರ ಪುಸ್ತಕ ಪ್ರೀತಿಯಿಂದ ಕಲೆಹಾಕಿದ ಹಾಗೂ ಭಾಷಾಂತರವಾಗುವಂತೆ ಮಾಡಿದ ಪುಸ್ತಕಗಳಿಂದ ಈ ಗ್ರಂಥಾಗಾರ ಭರದಿಂದ ಬೆಳೆಯಿತು. ವಿನ್ಸೆಂಟ್ ಸ್ಮಿಥ್‌ರು ತಮ್ಮ ಗ್ರಂಥವಾದ 'ಹಿಸ್ಟರಿ ಆಫ್ ಇಂಡಿಯಾ'ದಲ್ಲಿ ತೆಗೆದ ಉದ್ಗಾರ ಇಂತಿದೆ: "ಆಗಿನ ಕಾಲದಲ್ಲಿ ಈ ಗ್ರಂಥಾಲಯಕ್ಕೆ ಸರಿಸಾಟಿ ಇನ್ನೊಂದಿರಲಿಲ್ಲ!"

ಅಕಬರ ಬಾದಶಹನ ಶಿಕ್ಷಣ ನೀತಿ, ಅದರಲ್ಲಿಯೂ ಅಪಾರ ಪುಸ್ತಕ ಪ್ರೀತಿ ಅವನ ನೆನಹನ್ನು ಹಚ್ಚಹಸುರಾಗಿಸಿದೆ. ●

---

ರಾಜಕಾರಣ ಒಂದು ನಿರ್ದಿಷ್ಟವಾದ ವಿಜ್ಞಾನವಲ್ಲ.

–ಬಿಸ್‌ಮಾರ್ಕ್ ದೊರೆ

ನೀವು ಸಂತೋಷದ ಜೀವನವನ್ನು ನಡೆಸುವುದನ್ನು ನೋಡಲೆಂದೇ ನಾನು ಮಾನವ ಜಾತಿಯನ್ನು ಸೃಷ್ಟಿಸಿರುವುದು.

–ಒಪ್ಪುಡೆಸಾಕಿ

ಬರೀ ದೋಷಗಳೇ ತುಂಬಿರುವ ಅಥವಾ ಬರೀ ಸದ್ಗುಣಗಳಿಂದಲೇ ಭರಿತನಾದ ಮನುಷ್ಯ ಹಿಂದೆಯೂ ಜನಿಸಿಲ್ಲ, ಈಗಲೂ ಜನಿಸಿಲ್ಲ ಅಲ್ಲದೆ ಮುಂದೆಂದೂ ಜನಿಸುವುದಿಲ್ಲ.

–ಗೌತಮ ಬುದ್ಧ



ವಿದ್ವಾಂಸ
ಸಂಶೋಧಕ
ಸಂಘಟಕ
ಸಾಹಿತಿ

# ಡಾ. ಜೀ.ಶಂ. ಪರಮಶಿವಯ್ಯ

• ಪುರುಷೋತ್ತಮ ಬಿಳಿಮಲೆ

೧೯೯೪ರ ಜನವರಿ ತಿಂಗಳ ಮೊದಲ ವಾರ. ಮೈಸೂರಿನಲ್ಲಿ ಅಂತಾರಾಷ್ಟ್ರೀಯ ಜಾನಪದ ಸಮಾವೇಶ. ೪೬ ದೇಶಗಳಿಂದ ೨೫೦ಕ್ಕೂ ಹೆಚ್ಚು ಜನ ಜಾನಪದ ವಿದ್ವಾಂಸರು ಅಲ್ಲಿ ಭಾಗವಹಿಸಿದ್ದರು. ಪ್ರಬಂಧವೊಂದರ ಮಂಡನೆಗಾಗಿ ನಾನೂ ಅಲ್ಲಿ ಸೇರಿಕೊಂಡಿದ್ದೆ. ಮೊದಲ ದಿನವೇ ಬೆಳಗ್ಗೆ ಇನ್ನೂ ಸಂಕಿರಣ ಆರಂಭವಾಗುವ ಮುನ್ನ ಕಲ್ಕತ್ತದ ದುಲಾಲ್ ಚೌಧುರಿ ಮತ್ತು ಗೌಹಾತಿಯ ಬೀರೇಂದ್ರನಾಥ ದತ್ತರು ಓಡೋಡಿ ಬಂದು, "ಬಿಳಿಮಲೆ, ಬನ್ನಿ, ಜೀಶಂಪ ಅವರ ಮನೆ ತೋರಿಸಿ," ಎಂದರು. ನಾನು ಹಾಸಿಗೆಯಲ್ಲಿ ಮಲಗಿದ್ದ ಜೀಶಂಪ ಅವರನ್ನು ಆಗಷ್ಟೇ ನೋಡಿ ಮಾತಾಡಿಸಿ ಬಂದಿದ್ದೆ. "ಸರಿ," ಎಂದು ಆ ಇಬ್ಬರು ವಿದ್ವಾಂಸರನ್ನು ಕರೆದುಕೊಂಡು ಜೀಶಂಪ ಅವರ ಮನೆಗೆ ಹೋದೆ. ಬಹುದೂರದ ಜಾನಪದ ವಿದ್ವಾಂಸರಿಬ್ಬರನ್ನು ಕಂಡು ಜೀಶಂಪ ಮುಗುಳ್ನಕ್ಕರು. ಜಾನಪದ ವಿಷಯಗಳ ಬಗ್ಗೆ ಮಾತಾಡಿದರು. ಹಿಂದಿನ ಕೆಲವು ಘಟನೆಗಳನ್ನು ನೆನಪಿಸಿಕೊಂಡು ಮಗುವಿನಂತೆ ನಕ್ಕರು. ಸ್ವಲ್ಪ ಹೊತ್ತಾದ ಅನಂತರ ನಾವು ಹಿಂದಿರುಗಿದೆವು. ಸಂಕಿರಣದ ಮೊದಲ ಹಂತ ಮುಗಿಯುವ ಮುನ್ನವೇ ಅಮೆರಿಕಾದ ಲಿಂಡಾಡೇಗ್, ಅಟ್ಲಾಂಟಾದ ಫ್ಲೂಕಿಗರ್,

ಫಿಲಡೆಲ್ಫಿಯಾದ ಮಾರ್ಗರೇಟ್ ಮಿಲ್, ಜೆರುಸಲೆಂನ ಹಿಬ್ರೂ ಯೂನಿವರ್ಸಿಟಿಯ ಡೇವಿಡ್ ಶುಲ್ಮನ್ ಮತ್ತು ನ್ಯೂಯಾರ್ಕಿನ ಸೂಸಾನ್ ವಾಡ್ಲಿ ಅವರು ಕೂಡ ಜೀಶಂಪ ಅವರನ್ನು ಭೇಟಿ ಮಾಡುವ ಇಚ್ಛೆಯನ್ನು ಪ್ರಕಟಪಡಿಸಿದ್ದರು. ಮಧ್ಯಾಹ್ನದ ಹೊತ್ತಿಗೆ ಈ ವಿದ್ವಾಂಸರೆಲ್ಲ ಜೀಶಂಪ ಅವರನ್ನು ಭೇಟಿ ಮಾಡಿದ್ದರು. ಅಷ್ಟರಲ್ಲಿ ಫಿನ್ಲೆಂಡಿನ ವಿದ್ವಾಸರೆಲ್ಲ ಜೀಶಂಪ ಅವರನ್ನು ಭೇಟಿಮಾಡಿ ಬಂದಾಗಿತ್ತು. ಹೀಗೆ ಅಂತಾರಾಷ್ಟ್ರೀಯ ಸಮ್ಮೇಳನವೊಂದರ ಪ್ರತಿನಿಧಿಗಳೆಲ್ಲ ಜೀಶಂಪ ಅವರನ್ನು ಭೇಟಿ ಮಾಡಲು ಹೋಗುತ್ತಿದ್ದುದು ಸಣ್ಣ ಸಂಗತಿಯೇನಲ್ಲ. ಹಾಗೆ ನೋಡಿದರೆ ಜೀಶಂಪ ಅವರ ಅನುಪಸ್ಥಿತಿಯಿಂದ ಸಮ್ಮೇಳನ ಬಡವಾಗಿತ್ತು. ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಅಂಬರ ಜೀರಹಳ್ಳಿಯಲ್ಲಿ ಜನಿಸಿದ (೧೯೩೩) ಹುಡುಗನೊಬ್ಬ ಹೀಗೆ ಅಂತಾರಾಷ್ಟ್ರೀಯ ಖ್ಯಾತಿ ಪಡೆದದ್ದು ನಮ್ಮ ಸಾಮಾಜಿಕ ಸಂದರ್ಭದಲ್ಲಿ ಅತ್ಯಂತ ಮಹತ್ವದ ಸಂಗತಿಯಾಗಿದೆ.

ಜೀ.ಶಂ. ಪರಮಶಿವಯ್ಯನವರ ತಂದೆಯ ಹೆಸರು ಶಂಕರೇಗೌಡ, ತಾಯಿಯ ಹೆಸರು ರಂಗಮ್ಮ. ಆದಿಚುಂಚನಗಿರಿಯ ಪರಿಸರದಲ್ಲಿ ಓಡಾಡಿ ಬೆಳೆದ ಜೀಶಂಪ ಶೂಲಿಮಠದಲ್ಲಿ ಅಕ್ಷರಾದಿ ಕಲಿತು, ಬೆಳ್ಳೂರು, ಮೈಸೂರುಗಳಲ್ಲಿ ಪ್ರಾಥಮಿಕ, ಪ್ರೌಢಶಾಲಾ ಶಿಕ್ಷಣ ಪಡೆದರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಆನರ್ಸ್ ಪದವಿ ಪಡೆದು ೧೯೬೩ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡ ಎಂ.ಎ. ಪದವಿಯನ್ನು ಪಡೆದರು. ಮರುವರ್ಷವೇ ಮದುವೆಯಾದ ಅವರು, ಅದೇ ವರ್ಷ ಅಂದರೆ ೧೯೬೪ರಲ್ಲಿ ಮೈಸೂರ ಜೆ.ಎಸ್.ಎಸ್. ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇರಿಕೊಂಡರು. ೧೯೬೮ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಜಾನಪದ ಅಧ್ಯಾಪಕರಾಗಿ ನೇಮಕಗೊಂಡರು. ೧೯೭೧ರಲ್ಲಿ ಅವರು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಎಂಬ ಸಂಶೋಧನ ಮಹಾಪ್ರಬಂಧಕ್ಕೆ ಡಾಕ್ಟರೇಟ್ ಪದವಿ ದೊರೆಯಿತು. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ೧೯೭೨ರಲ್ಲಿ ರೀಡರ್ ಆಗಿ ಬಡ್ತಿ ಪಡೆದ ಅವರು ಮುಂದೆ ಎರಡೇ ವರ್ಷಕ್ಕೆ (೧೯೭೨) ಜಾನಪದ ಪ್ರಾಧ್ಯಾಪಕರಾಗಿ ಆಯ್ಕೆಯಾದರು. ೧೯೭೯ರಲ್ಲಿ ಅವರು ಇಂಗ್ಲಂಡ್, ಸ್ಕಾಟ್‌ಲೆಂಡ್, ಫ್ರಾನ್ಸ್, ಜರ್ಮನಿ, ಡೆನ್ಮಾರ್ಕ್, ಸ್ವೀಡನ್, ಫಿನ್‌ಲ್ಯಾಂಡ್ ಮತ್ತು ಜೆಕೋಸ್ಲೋವಾಕಿಯ ಮೊದಲಾದ ದೇಶಗಳಲ್ಲಿ ಪ್ರವಾಸ ಮಾಡಿದರು. ೧೯೮೨ರಲ್ಲಿ ಅಮೆರಿಕಾ ಪ್ರವಾಸದ ಅವಕಾಶವೂ ಅವರಿಗೆ ಒದಗಿಬಂತು. ೧೯೮೦ರಲ್ಲಿ ಮೈಸೂರಿನ ಪ್ರತಿಷ್ಠಿತ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದರು. ೧೯೮೯ರಲ್ಲಿ ಟರ್ಕಿ, ಟ್ಯುನೀಷಿಯ, ಸೈಪ್ರಸ್, ಮಾಲ್ಟಾಗಳಲ್ಲಿ ಪ್ರವಾಸ ಮಾಡಿದರು. ೧೯೯೧ರಲ್ಲಿ ಅವರು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾಗಿ ನೇಮಕಗೊಂಡರು. ಸಾಮಾಜಿಕ ಮನ್ನಣೆ ಇರದಿದ್ದ ಒಂದು ವರ್ಗದಲ್ಲಿ ಹುಟ್ಟಿ ಬೆಳೆದ ಅವರು ಹಂತಹಂತವಾಗಿ ಯಶಸ್ಸಿನಮೆಟ್ಟಲೇರಿದರು. ಕಠಿಣ ಶ್ರಮ ಮತ್ತು ತಾಳ್ಮೆ ಅವರನ್ನು ಬದುಕಿನುದ್ದಕ್ಕೂ ಕಾಯ್ದುಕೊಂಡು ಬಂದ ಸಂಗತಿಗಳಾಗಿದ್ದುವು. ೧೯೯೧ರಲ್ಲಿ ಅವರ ಅಭಿಮಾನಿಗಳು ಮತ್ತು ಮಿತ್ರರು 'ಜಾನಪದ ಸಂಭಾವನೆ' ಎಂಬ ಅಭಿನಂದನ ಗ್ರಂಥವನ್ನು ಅವರಿಗೆ ಅರ್ಪಿಸಿದರು.

ಪ್ರಶಸ್ತಿ ಮತ್ತು ಮನ್ನಣೆಗಳ ದೃಷ್ಟಿಯಿಂದ ನೋಡಿದಾಗ ಜೀಶಂಪ ಅಂಥ ಭಾಗ್ಯವಂತರೇನಲ್ಲ. ನಾಡಿನ ಅತ್ಯುನ್ನತ ಪ್ರಶಸ್ತಿಗಳೆಲ್ಲ ಸಾಹಿತ್ಯಕ್ಕೆ ಮೀಸಲಾಗಿದ್ದುದರಿಂದ ಹಾಗಾಗುವುದೂ ಸಹಜವೇ ಆಗಿತ್ತು. ೧೯೭೭ರಲ್ಲಿ ಅವರಿಗೆ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಪ್ರಶಸ್ತಿ ದೊರಕಿತ್ತು. ೧೯೮೧ರಲ್ಲಿ ಅವರು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯರಾಗಿ ನೇಮಕಗೊಂಡರು. ೧೯೮೭ರಲ್ಲಿ ಅವರನ್ನು ರಾಷ್ಟ್ರೀಯ ಅಧ್ಯಾಪಕರೆಂದು ಮಾನ್ಯ ಮಾಡಲಾಯಿತು. ೧೯೮೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದವರು ನಡೆಸಿದ ೧೩ನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಅವರು 'ಮೈಲಾರ ಲಿಂಗ'ನ ಸಂಪ್ರದಾಯದ ಬಗ್ಗೆ ಉಪಯುಕ್ತ ಭಾಷಣ ನೀಡಿದ್ದರು. ೧೯೮೭ರಲ್ಲಿ ಅವರಿಗೆ ರಾಜ್ಯ ಪ್ರಶಸ್ತಿ ದೊರೆಯಿತು.

೧೯೬೨ರಲ್ಲಿ ಫಿನ್ಲೆಂಡಿನ ಪ್ರತಿಷ್ಠಿತ ಜಾನಪದ ಸಂಶೋಧನ ಸಂಸ್ಥೆಯು ತನ್ನ ಸದಸ್ಯತ್ವವನ್ನು ನೀಡಿ ಅವರನ್ನು ಗೌರವಿಸಿತು. ತಾವು ಪಡೆದ ಮನ್ನಣೆ-ಪ್ರಶಸ್ತಿಗಳಿಗಿಂತಲೂ ತುಂಬ ದೊಡ್ಡವರಾಗಿದ್ದರು ಅವರು.

ಜೀ.ಶಂ.ಪರಮಶಿವಯ್ಯನವರು ಬಹಳ ಒಳ್ಳೆಯ ಸೃಜನಶೀಲ ಸಾಹಿತಿಗಳಾಗಿದ್ದರು ಎಂಬ ಅಂಶವನ್ನು ಬಹಳ ಜನ ತಿಳಿದಿಲ್ಲ. ಎಪ್ಪತ್ತರ ದಶಕದಲ್ಲಿ ಅವರು ಮಾಡಿದ ಜಾನಪದ ಸಂಶೋಧನೆ-ಸಂಘಟನೆಗಳ ಕೆಲಸದ ರಭಸದಲ್ಲಿ ಅವರ ಸಾಹಿತ್ಯಿಕ ಸಾಧನೆ ಅಷ್ಟಾಗಿ ಜನರ ಗಮನಕ್ಕೆ ಬಾರದೇ ಹೋಯಿತು. 'ಮೇದರಕಲ್ಲು' ಇಂದಿಗೂ ಅತ್ಯುತ್ತಮವಾದ ಪ್ರಬಂಧ ಸಂಕಲನವಾಗಿದೆ. ಹಾಗೆ 'ಮಬ್ಬುಜಾರಿದ ಕಣಿವೆಯಲ್ಲಿ' ಸೊಗಸಾದ ಕಥಾ ಸಂಕಲನವಾಗಿದೆ. ಮನುಷ್ಯ ಸಂಬಂಧದ ಸೂಕ್ಷ್ಮಗಳನ್ನು ಅವರು ಸೊಗಸಾದ ಪ್ರತೀಕಗಳ ಮೂಲಕ ದಾಖಲುಗೊಳಿಸಬಲ್ಲವರಾಗಿದ್ದರು. ದಿಬ್ಬದಾಚೆ, ಕಾವಲುಗಾರ, ಜೀವನಗೀತ, ಸೋಲು ತಂದ ಸ್ವಯಂವರ, ನಾಡಿನ ಕರೆ, ಉಕ್ಕಿನ ಮನುಷ್ಯ, ಸಿಡಿಲ ಮರಿಗಳು ಮೊದಲಾದ ಕೃತಿಗಳನ್ನು ನಾವೆಲ್ಲ ಈಗಲೂ ಓದಿ ಸಂತೋಷಿಸಬಹುದಾಗಿದೆ. ಹಾಗೆಯೇ ಜೀಶಂಪ ಅವರು ಶ್ರಮ ವಹಿಸಿ ಸಂಪಾದಿಸಿಕೊಟ್ಟ ದಾರಿ ದೀಪ, ಸಾಹಿತ್ಯ ಸಮೀಕ್ಷೆ, ಜ್ಞಾನೋಪಾಸಕ, ಸಹ್ಯಾದ್ರಿ, ಅಂತಃಕರಣ, ನಾಗವಲ್ಲಿ, ಕಬ್ಬಿನಹಾಲು, ಇಕ್ಷುಗಂಗಾ ಮೊದಲಾದ ಬೃಹತ್ ಗ್ರಂಥಗಳು ಇಂದಿಗೂ ಪರಾಮರ್ಶನ ಕೃತಿಗಳಾಗಿ ಕನ್ನಡಿಗರಿಗೆ ಉಳಿದಿವೆ. ಅತ್ಯುತ್ತಮವಾದದ್ದನ್ನು ಗುರುತಿಸುವ ಗೌರವಿಸುವ ಶಕ್ತಿ ಅವರಲ್ಲಿ ತಾನೇ ತಾನಾಗಿತ್ತು.

೧೯೭೨ರಲ್ಲಿ ಜೀಶಂಪ ಅವರು ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳ ಆಪ್ತಕಾರ್ಯದರ್ಶಿಯಾಗಿದ್ದರು. ಮುಂದೆ ಒಳ್ಳೆಯ ಆಡಳಿತಗಾರನಾಗಲು ಇದೇ ಅವರಿಗೆ ಮಾರ್ಗದರ್ಶನ ನೀಡಿತು. ಕನಕಕಿರಣ, ಮಧುಕರ, ಪ್ರಸಾದ, ಪರಂಪರೆ ಮೊದಲಾದ ಸಾಹಿತ್ಯಿಕ ಪತ್ರಿಕೆಗಳನ್ನೂ, ಜಾನಪದ, ಮೂಡಲಪಾಯ, ಜಾನಪದ ವಾರ್ತಾಪತ್ರಿಕೆ, ಜಾನಪದ ಗಂಗೋತ್ರಿ ಮೊದಲಾದ ಜಾನಪದ ಪತ್ರಿಕೆಗಳನ್ನೂ ಅವರು ಸಮರ್ಥವಾಗಿ ಸಂಪಾದಿ



ಜೀ.ಶಂ.ಪ.ಗೆ ಕುವೆಂಪು ಪ್ರೇರಣೆ

ಸಿಕೊಟ್ಟರು. ಜಾನಪದ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಪುಟ್ಟ ಪತ್ರಿಕೆಗಳು ನಿರ್ವಹಿಸಿದ ಜವಾಬ್ದಾರಿ ಮಹತ್ತರವಾದುದು.

ಜಾನಪದಕ್ಕೆ ಸಂಬಂಧಿಸಿದಂತೆ ಜೀಶಂಪ ಅವರು ನೀಡಿದ ಕೊಡುಗೆ ಚಾರಿತ್ರಿಕವಾದುದು. ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸುಮಾರು ೫೦ ವಿವಿಧ ಕೃತಿಗಳು ಅವರ ಹೆಸರಲ್ಲಿವೆ. ಫಿನ್ಲೆಂಡಿನ ಪ್ರಸಿದ್ಧ ಜಾನಪದ ವಿದ್ವಾಂಸರಾದ ಪ್ರೊ. ಲಾರಿ ಹಾಂಕೋ ಅವರು ಜೀಶಂಪ ಅವರ ಜಾನಪದ ಸಂಬಂಧಿಯಾದ ಕೆಲಸಗಳ ವ್ಯಾಪ್ತಿಯನ್ನು ಕಂಡು ಮನಸಾರೆ ಕೊಂಡಾಡಿದ್ದುಂಟು. ೧೯೭೪ರಲ್ಲಿ ಪ್ರಕಟವಾದ ಅವರ ಸಂಶೋಧನ ಕೃತಿ 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ನಿರ್ವಿವಾದವಾಗಿ ಕನ್ನಡದ ಶ್ರೇಷ್ಠ ಮಹಾಪ್ರಬಂಧಗಳಲ್ಲೊಂದು. ಕನ್ನಡ ಜಾನಪದವನ್ನು ವಿಶ್ವಜಾನಪದದ ಸಂದರ್ಭದಲ್ಲಿರಿಸಿ ಮೊದಲು ಚರ್ಚಿಸಿದವರು ಅವರೇ ಆಗಿದ್ದಾರೆ. ಈ ಮಹಾಪ್ರಬಂಧದಲ್ಲಿ ಕರ್ನಾಟಕದ ಜನಪದ ವೃತ್ತಿಗಾಯಕರನ್ನು ಮೊದಲ ಬಾರಿಗೆ ವ್ಯಾಪಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ವೃತ್ತಿಗಾಯಕರಲ್ಲಿರುವ ಅಪಾರವಾದ

ಸಾಹಿತ್ಯವನ್ನು ಕನ್ನಡಿಗರಿಗೆ ವ್ಯವಸ್ಥಿತವಾಗಿ ಪರಿಚಯಿಸಿದ ಕೀರ್ತಿ ಜೀಶಂಪ ಅವರಿಗೆ ಸಲ್ಲಬೇಕು. ದೇವರಗುಡ್ಡದ ಸಂಪ್ರದಾಯ, ನೀಲಗಾರರ ಸಂಪ್ರದಾಯ, ಚೌಡಿಕೆ ಸಂಪ್ರದಾಯ, ಜುಂಜಪ್ಪನ ಸಂಪ್ರದಾಯ, ಮೈಲಾರಲಿಂಗನ ಗೊರವರ ಸಂಪ್ರದಾಯ, ದೊಂಬಿದಾಸರು, ಕಿಂದರಿ ಜೋಗಿಗಳು, ಹೆಳವರು, ಕರಪಾಲದವರು, ಭಾಗವಂತಿಕೆ ಮೇಳ, ಅಂಟಿಕೆ-ಪಂಟಿಕೆ, ಯಕ್ಷಗಾನ ಹೀಗೆ ಇನ್ನೂ ಅನೇಕ ವಿಷಯಗಳ ಬಗ್ಗೆ ಅವರು ಅಧಿಕೃತವಾಗಿ ವಿವರ ನೀಡಬಲ್ಲವರಾಗಿದ್ದರು. ಮರವಂತೆಯಲ್ಲಿ ನಡೆದ ಶಿಬಿರವೊಂದರಲ್ಲಿ ಅವರು ವೃತ್ತಿಗಾಯಕರ ಬಗ್ಗೆ ಸುಮಾರು ಎರಡು ಗಂಟೆಗಳಷ್ಟು ದೀರ್ಘವಾದ ಭಾಷಣವನ್ನು ಯಾವುದೇ ಚೀಟಿಗಳ ಸಹಾಯವಿಲ್ಲದೆ ಮಾಡಿದ್ದು ನನಗಿನ್ನೂ ಚೆನ್ನಾಗಿ ನೆನಪಿದೆ. ಹೊಸದೆಹಲಿಯ ಸಾಹಿತ್ಯ ಅಕಾಡೆಮಿಯವರು ಪ್ರಕಟಿಸಿದ 'ದಕ್ಷಿಣ ಕರ್ನಾಟಕದ ಜನಪದ ಕತೆಗಳು' ಸಂಕಲನವನ್ನು ಜೀ.ಶಂ.ಪ. ಅವರೇ ಸಂಪಾದಿಸಿದ್ದಾರೆ. ಈ ಸಂಕಲನಕ್ಕೆ ಅವರು ಬರೆದ ಪ್ರಸ್ತಾವನೆ ಮತ್ತು ಸಂಕಲನಕ್ಕೆ ಆಯ್ದುಕೊಂಡ ಕತೆಗಳೇ ಅವರ ವಿದ್ವತ್ತು ಮತ್ತು ಸದಭಿರುಚಿಯನ್ನು ಸಾಬೀತುಪಡಿಸುತ್ತವೆ. ಇದೇ ರೀತಿ 'ಜನಪದ ಸಾಹಿತ್ಯ ಸಮೀಕ್ಷೆ', 'ಜಾನಪದ- ಕೆಲವು ಮುಖಗಳು,' ಜಾನಪದ,' 'ಜಾನಪದ ಸಂಗಮ,' 'ಜನಪದ ಕಲಾವಿಹಾರ,' ಮೊದಲಾದ ಕೃತಿಗಳು ಅವರ ವಿಶ್ಲೇಷಣಾ ಸಾಮರ್ಥ್ಯವನ್ನು ಪ್ರಸ್ತುತಪಡಿಸುತ್ತವೆ. ಸಾಹಿತ್ಯಿಕ ಹಿನ್ನೆಲೆಯಿಂದ ಅವರು ಜನಪದ ಸಾಹಿತ್ಯವನ್ನು ನೋಡುತ್ತಿದ್ದರಾದ್ದರಿಂದ ಅವರ ವಿಮರ್ಶೆಗೆ ಲವಲವಿಕೆ ಪ್ರಾಪ್ತಿಸುತ್ತಿತ್ತು.

ಜೀಶಂಪ ಅವರ ಜಾನಪದ ಸಂಗ್ರಹಗಳು ಮುಂದಿನ ಶತಮಾನದಲ್ಲಿ ಅಧ್ಯಯನಕಾರರಿಗೆ ಅಮೂಲ್ಯವಾದ ಆಕರಗಳಾಗಿ ಸಹಕರಿಸಲಿವೆ. 'ಕನ್ನಡ ವೃತ್ತಿಗಾಯಕ ಕಾವ್ಯಗಳು' ಎಂಬ ಹೆಸರಿನ ಬೃಹತ್ ಕೃತಿಯಲ್ಲಿ ಅವರು ೨೪ ಕಾವ್ಯಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಇದೇ ರೀತಿ ದೊಂಬಿದಾಸರ ಲಾವಣಿಗಳು, ಹೆಳವರ ಕಾವ್ಯಗಳು, ಜನಪದ ಕಾವ್ಯ ಕತೆಗಳು, ಅವರ ನೆನೆದೇವು, ಜನಪದ ಖಂಡ ಕಾವ್ಯಗಳು, ಜನಪದ ವೀರ ಕಾವ್ಯಗಳು, ಮಂಟೇಸ್ವಾಮಿ ಕಾವ್ಯ, ಪಿರಿಯಾ ಪಟ್ಟಣದ ಕಾಳಗ ಮೊದಲಾದ ಬೃಹತ್ ಪಠ್ಯಗಳನ್ನು ಅವರು ಸಂಗ್ರಹಿಸಿ ಕೊಟ್ಟಿದ್ದಾರೆ. ಇಂಥ ಪಠ್ಯಗಳ ಸಂಗ್ರಹದ ಹಿಂದಿನ ದುಡಿಮೆ ಅಪಾರವಾದುದು. ಜಾನಪದದ ಎಲ್ಲ ಮುಖಗಳ ಬಗೆಗೆ ಅವರಿಗೆ ಕುತೂಹಲವಿತ್ತು ಮಾತ್ರವಲ್ಲ, ಅವುಗಳ ಬಗೆಗೆ ಅಧಿಕೃತವಾಗಿ ಮಾತಾಡಬಲ್ಲ ಪರಿಣತಿಯಿತ್ತು.

ಜಾನಪದ ಪಠ್ಯಗಳ ಸಂಗ್ರಹ ಕಾರ್ಯದೊಂದಿಗೆ ಜಾನಪದ ಪುನರುಜ್ಜೀವನಕ್ಕಾಗಿಯೂ ಅವರು ಶ್ರಮಿಸಿದ್ದಾರೆ. ಮೂಡಲಪಾಯ ಯಕ್ಷಗಾನಕ್ಕೆ ಸಂಬಂಧಿಸಿದಂತೆ ಅವರು ಕೊನೆಹಳ್ಳಿಯಲ್ಲಿ ನಡೆಸಿದ ಪ್ರಯೋಗಗಳು ಎಲ್ಲರಿಗೂ ತಿಳಿದಿದೆ. ಅನೇಕ ಜನಪದ ಕಲೆಗಳನ್ನು ಉಳಿಸಿ, ಬೆಳೆಸಲು ಅವರು ಯೋಜನೆಗಳನ್ನು ಹಾಕಿಕೊಂಡಿದ್ದರು. ಕಲಾವಿದ ಪಿ.ಆರ್.ತಿಪ್ಪೇಸ್ವಾಮಿಯವರೊಡಗೂಡಿ ನಿರ್ಮಾಣ ಮಾಡಿದ ಮೈಸೂರಿನ ಜಾನಪದ ವಸ್ತು ಸಂಗ್ರಹಾಲಯವನ್ನು ಪ್ರಖ್ಯಾತ ಜಾನಪದ ವಿದ್ವಾಂಸರಾದ ಅಲೆನ್ ಲೆಂಡೆಸರೇ ಮುಕ್ತಕಂಠದಿಂದ ಶ್ಲಾಘಿಸಿದ್ದುಂಟು.

ಜೀಶಂಪ ಪೂರ್ವದಲ್ಲಿ ಅನೇಕ ಜನ ವಿದ್ವಾಂಸರು ಜಾನಪದಕ್ಕಾಗಿ ದುಡಿದಿದ್ದಾರೆ. ಜೀಶಂಪ ಅವರು ಅಂಥ ಕೆಲಸಗಳಿಗೆ ಶೈಕ್ಷಣಿಕವಾದ ಒಂದು ಶಿಸ್ತನ್ನು ತಂದುಕೊಟ್ಟರು. ವಿದ್ವಾಂಸರಿಂದ ಅಷ್ಟಾಗಿ ಮನ್ನಣೆ ದೊರಕದಿದ್ದ ಕ್ಷೇತ್ರವೊಂದರಲ್ಲಿ ನಿಷ್ಠೆಯಿಂದ ದುಡಿಯುತ್ತ, ತನ್ನ ದುಡಿಮೆಗೆ ಮತ್ತು ದುಡಿಮೆಯ ಕ್ಷೇತ್ರಕ್ಕೆ ಘನತೆ-ಗೌರವಗಳನ್ನು ತಂದು ಕೊಟ್ಟವರು ಅವರು. ಇಂದು ನಮ್ಮಲ್ಲಿ ಹಲವರಿಗೆ ಜಾನಪದದ ಮೇಲೆ ಪ್ರೀತಿ-ಗೌರವ ಇರುವುದು ಹೌದಾದರೆ ಅದಕ್ಕೆ ಜೀಶಂಪ ಅವರು ಮುಖ್ಯ ಕಾರಣರು. ತಾನು ಬದುಕಿದ ಕಾಲಘಟ್ಟದ ಅಗತ್ಯಗಳನ್ನು ಒಬ್ಬ ವಿದ್ವಾಂಸ ಸಮರ್ಥವಾಗಿ ಈಡೇರಿಸಿದ್ದಾನೆ ಎಂದರೆ ಆತನ ಬದುಕು ಸಾರ್ಥಕ ಎಂದೇ ಅರ್ಥ. ಈ ಅರ್ಥದಲ್ಲಿ ನಾವೆಲ್ಲ ಅವರಿಂದ ಕಲಿಯಬೇಕಾದ್ದು ಬಹಳವಿದೆ.

ಕನ್ನಡ ಜಾನಪದದ ರೂಪ-ಲಕ್ಷಣಗಳನ್ನು ಅಂತಾರಾಷ್ಟ್ರೀಯ ಚೌಕಟ್ಟಿನಲ್ಲಿರಿಸಿ, ಅಭ್ಯಾಸ ಮಾಡಿ, ಕನ್ನಡ ಜಾನಪದ ಘನತೆಯನ್ನು ಎತ್ತರಿಸಿದ ಕೀರ್ತಿ ಡಾ. ಜೀಶಂಪ ಅವರಿಗೆ ಸಲ್ಲುತ್ತದೆ. ●

# ಕಾಲು ಎಂಬುದು ಕೀಳಲ್ಲ

ಅಂಗರಚನೆಯಲ್ಲಿ ತಲೆಯು ಎತ್ತರವಾದ ಸ್ಥಾನ ಪಡೆದು ''ಉತ್ತಮಾಂಗ" ಎನಿಸಿತು. ಕಾಲಿನ ಪಾಲಿಗೆ ಬಂದುದು ಕೆಳಗಣ ಭಾಗ. ಅದನ್ನು ''ಅಧಮಾಂಗ" ಎಂದು ಕರೆಯುವ ಪದಪ್ರಯೋಗ ಪ್ರಚಾರದಲ್ಲಿ ಬಾರದೇ ಇದ್ದುದು ಪಾಪ, ಆ ಕಾಲಿನ ಪುಣ್ಯ!

ಕಾಲು ಎಂಬುದಕ್ಕೆ ಇನ್ನೂ ಒಂದು ಅರ್ಥ ಕೂಡ: ವಸ್ತುವಿನ ನಾಲ್ಕು ಭಾಗಗಳಲ್ಲಿ ಒಂದು ಭಾಗವೇ ಕಾಲು. (ಕಾಲು ಕೆ.ಜಿ. ಸಕ್ಕರೆ ಎನ್ನುವುದಿಲ್ಲವೆ?) ಇದನ್ನೇ ಕೆಲವರು, ವಿಶೇಷವಾಗಿ ಮಹಾರಾಷ್ಟ್ರದ ಸೀಮೆಗೆ ಹೊಂದಿಕೊಂಡ ಗಡಿನಾಡ ಕನ್ನಡಿಗರು, ಪಾವ್ ಕೆ.ಜಿ. ಎನ್ನುತ್ತಾರೆ. ಎಷ್ಟು? ಎಂದು ಕೇಳಿದರೆ ಐದೂ ಕಾಲು ಎನ್ನುವದರ ಬದಲು ಸವ್ವಾ ಐದು ಎಂದು. ಇಲ್ಲಿ ಪಾವ್ ಎಂಬದು ಸಂಸ್ಕೃತ ಪಾದ ಎಂಬುದರ ತದ್ಭವ. ಇಲ್ಲಿಯ ''ಸವ್ವಾ" ಸಂಸ್ಕೃತದ ''ಸಪಾದ"ಕ್ಕೆ ಸಮಾನ; ಪಾದಸಹಿತವೆಂದರ್ಥ. ಸಂಸ್ಕೃತದಲ್ಲಿಯ ಈ ಪಾದವೇ ಕನ್ನಡದ ಕಾಲು. ಪ್ರಾಯಶಃ ಚತುಷ್ಪಾದ ಪ್ರಾಣಿಯನ್ನು ಗಮನದಲ್ಲಿರಿಸಿ ಕೊಂಡು ಪಾದ, ಕಾಲು ಎಂಬಿವು ರೂಢಿಯಲ್ಲಿ ಬಂದಿರಲು ಸಾಕು.

ಚತುಷ್ಪಾದ ಕಾಲಾಂತರದಲ್ಲಿ ದ್ವಿಪಾದವಾಯಿತು, ಮಾನವನ ಆಕೃತಿಯಲ್ಲಿ. ನಾಲ್ಕರಲ್ಲಿಯ ಹಿಂದಿನ ಎರಡು ಪಾದಗಳು ಕಾಲುಗಳಾಗಿಯೇ ಉಳಿದುವು. ಮುಂದಿನವು ಕೈಗಳಾದುವು. ಬೇರೆ ಬೇರೆ ಕರ್ತವ್ಯ ಕರ್ಮಗಳ ಹೊಣೆಯನ್ನು ಅವುಗಳಿಗೆ ವಹಿಸಿದ್ದಾಯಿತು. ಮೇಲ್ಪದಿಯ ಕೈಗಳು ಎಲ್ಲದರಲ್ಲಿ ಮುಂದಾಗಿ ಹೆಚ್ಚು ಪ್ರಶಸ್ತವಾದ ಕಾರ್ಯಗಳನ್ನು ನಿರ್ವಹಿಸತೊಡಗಿದವು. ಆದರೆ ಕಾಲುಗಳ ಪಾಲಿಗೆ ಉಳಿದ ಕೆಲಸಗಳು.

ದೇಹರಚನೆಯಲ್ಲಿ ನಿಮ್ನ ಸ್ಥಾನ ಪಡೆದುದರ ಫಲವಾಗಿಯೋ ಏನೋ, ಪಾಪ! ಕೀಳಾದ ವಸ್ತುವಿನ ಸಂಸರ್ಗ, ಕೀಳು ಕೆಲಸಗಳ ಸಂಪರ್ಕ ಕಾಲಿನ ಪಾಲಿಗೆ! ಎಂತಲೇ ಮನೆಯಲ್ಲಿ ಯಾರ ಮನ್ನಣೆಯನ್ನೂ ಪಡೆಯದ ವ್ಯಕ್ತಿಯು ತನ್ನನ್ನು ಕುರಿತು, ''ಕಾಲು ಕಸವಾಗಿದ್ದೇನೆ" ಎಂದು ಗೊಣಗುವುದುಂಟು. ಎದುರಾಳಿಯನ್ನು ಅವಮಾನಗೊಳಿಸಲು ಕಾಲಿನಿಂದ ಒದೆಯುವುದುಂಟು. ಕುರುಕ್ಷೇತ್ರದ ರಣಭೂಮಿ ಯಲ್ಲಿ ಕೊನೆಯ ಗದಾಯುದ್ಧದ ಪರಿಣಾಮವಾಗಿ ನೆಲಕ್ಕುರುಳಿದ ಕೌರವೇಶ್ವರ ದುರ್ಯೋಧನನ ಕಿರೀಟ ಸಹಿತವಾದ ಶಿರವನ್ನು ಭೀಮಸೇನನು ಸಿಟ್ಟು-ಸೇಡುಗಳ ಸಮ್ಮಿಶ್ರವಾದ ಭಾವನೆಯಿಂದ ಒದ್ದನೆಂಬುದನ್ನು ಅರಿಯದವರಾರು? ಯಾರೊಬ್ಬರನ್ನು ತುಚ್ಛ ಎಂದು ಜರಿಯಬೇಕಾದಾಗ, ''ಅವನಿಗೋ ನನ್ನ ಕಾಲಲ್ಲಿಯ ಚಪ್ಪಲಿ ಸಹ ಆಗುವ ಯೋಗ್ಯತೆಯಿಲ್ಲ" ಎಂಬುದಾಗಿ ಹೀಯಾಳಿಸುವುದನ್ನು ಕಾಣುತ್ತೇವೆ.

ದೇಹವನ್ನೇ ದೇಗುಲವೆಂದು ಕಂಡ ಬಸವಣ್ಣನವರ ಕಣ್ಣಿಗೆ ಕಾಲು ಆ ದೇಗುಲದ ಕಂಬ. ಇಂತಹ ಪವಿತ್ರವಾದ, ಮಹತ್ತರವಾದ ಕಾರ್ಯ ಅದರದು.

''ಅಂಗಾಲಿಗೆ ಹೇಸಿಕೆಯಿಲ್ಲ, ತಾಯಿ ತರುಳಿಗೆ ನಾಚಿಕೆಯಿಲ್ಲ"ವೆಂದೆನ್ನುತ್ತದೆ ಕನ್ನಡದ ಗಾದೆ. ದೇಹದ ಭಾರ ಹೊತ್ತು-ಹೊತ್ತು ಸಹನಶೀಲತೆಯನ್ನು ಮೈಗೂಡಿಸಿಕೊಂಡ ಕಾಲು ದಾರಿಯಲ್ಲಿ ಬಿದ್ದುದನ್ನು ತಿಳಿದೋ ತಿಳಿಯದೆಯೋ ತುಳಿಯುತ್ತದೆ. ಒಂದೊಂದು ಸಲ ಕಲ್ಲು-ಮುಳ್ಳು ತಾಕಿ ನೋವಿನಿಂದ ಬಳಲುತ್ತದೆ. ಪೆಟ್ಟು ತಿಂದು ಕುಂಟುತ್ತದೆ. ಸ್ವತಃ ಇಷ್ಟೆಲ್ಲವನ್ನು ತೆಪ್ಪಗೆ ಅನುಭವಿಸಿಯೂ ''ಕಾಲಿಗೆ

ಕಣ್ಣಿಲ್ಲ" ಎಂಬ ಮೂದಲಿಕೆಗೆ ಸಹ ಗುರಿಯಾಗುತ್ತದೆ. ಹೇಗಿದೆ ಕಾಲಿನ ದುರ್-ಗತಿ?

ಬುದ್ಧಿ ಶಕ್ತಿಯನ್ನು ತನ್ನದೇ ಆದ ಏಕಸ್ವಾಮ್ಯವೆಂದೆನ್ನುವಷ್ಟರ ಮಟ್ಟಿಗೆ ಅದನ್ನು ತನ್ನಲ್ಲೇ ಇರಿಸಿಕೊಂಡಿರುವ ತಲೆಗೆ ಎಲ್ಲರ ಮನ್ನಣೆ. ಆದರೆ ದೇವರು ಬುದ್ಧಿಯನ್ನು ದಯಪಾಲಿಸದ ಕಾಲಿನ ಗತಿ? ಕಳ್ಳತನ ಮಾಡುವಾಗ ಸಿಕ್ಕು ಬೀಳುವೆವೆಂಬ ಭಯಮೂಡಿದ ಕಳ್ಳಕಾಕರು ಕಾಲಿಗೆ ಬುದ್ಧಿ ಹೇಳುತ್ತಾರೆ. ಅರ್ಥಾತ್ ಪಲಾಯನ ಮಾಡುತ್ತಾರೆ. ಅಂದರೆ ಕಾಲಿಗೆ ಇರದಿರುವ ಬುದ್ಧಿಯನ್ನು ಅವರು ಕಲಿಸಿಕೊಡುತ್ತಾರೆ! ಹೆರವರ ತೋಟದಲ್ಲಿ ಹೂವನ್ನೋ ಹಣ್ಣನ್ನೋ ಕಿತ್ತುಕೊಂಡು ಇನ್ನೇನು ಹೊರಡಬೇಕೆನ್ನುವಷ್ಟರಲ್ಲಿ ಕಾವಲುಗಾರನ ಕಣ್ಣಿಗೆ ಬಿದ್ದರೆ ಭಯದಿಂದ ನಡುಗಹತ್ತುವವು ಕಾಲುಗಳೇ! ಕಳವು ಮಾಡುವುದು ಕೈ, ಆದರೆ, ಹೊಡೆತ ತಿನ್ನುವುದು ಕೆನ್ನೆಯೋ ಬೆನ್ನೋ ಎಂಬುದನ್ನರಿಯುವ ಕಾಲು ತನ್ನ ಈ ತೆರನಾದ ಅನುಕಂಪೆಯಿಂದಾದ ಪ್ರೇರಣೆಯಿಂದ ಕಂಪಿಸುತ್ತದೆ. ಹೀಗೆ ಇತರರಿಗೆ ತೋರಲು ತಾನೇ ಮುಂದಾಗುವಂಥ ಕಾಲನ್ನು ಬುದ್ಧಿಹೀನ ಎಂದು ಹೇಗೆತಾನೇ ಹೇಳಲಾದೀತು. ಹತ್ತಿರದ ಬಂಧು ಮಿತ್ರರನ್ನು ಅಸ್ವಸ್ಥರಾದ, ರೋಗ ಉಲ್ಬಣಗೊಂಡ ಆಪ್ತಮಿತ್ರ-ಇಷ್ಟ ಬಂಧುಗಳನ್ನು ಕಾಣಲೆಂದು ಹೋದಾಗ ನಮಗೆ ಸಾಕಷ್ಟು ಇನ್ನಿತರ ಕರ್ತವ್ಯ-ಕರ್ಮ ಹೊಣೆಗಾರಿಕೆಗಳಿದ್ದರೂ ಅಲ್ಲಿಂದ ಹೊರಡುವ ಹಂತದಲ್ಲಿ "ಕಾಲು ಕಿತ್ತುವುದಿಲ್ಲ" ಎಂದೆನ್ನುವುದರಲ್ಲಿ ಕಾಲು ಇಟ್ಟುಕೊಂಡಿರುವ ಈ ಮರುಕದ ಭಾವನೆಯೇ ವ್ಯಕ್ತವಾಗುತ್ತದೆ.)

ಪ್ರಾಚೀನ ಕಾಲದಲ್ಲಿ ಶಿಷ್ಯನಾದವನು ಗುರುವಿನ ಕಾಲಿನ ಬಳಿ ಅತ್ಯಂತ ವಿನಮ್ರನಾಗಿ ಕುಳಿತುಕೊಂಡೇ ವಿದ್ಯೆ ಸಂಪಾದಿಸುವ ಪದ್ಧತಿಯಿತ್ತು. ಉಪನಿಷತ್ತಿನಂತಹ ಉತ್ಕೃಷ್ಟ ವಾಙ್ಮಯದ ಉಗಮವಾದುದು ಹೀಗೆಯೇ. ಈಗಲಾದರೂ ಗುರುಹಿರಿಯರ ಕಾಲುಗಳನ್ನು ಮುಟ್ಟಿ ಭಯಭಕ್ತಿಯಿಂದ ನಮಸ್ಕರಿಸಿ ಶುಭಾಶೀರ್ವಾದ ಪಡೆಯಲು ಹಂಬಲಿಸುವುದುಂಟು. ಸ್ವಾಮಿಗಳ ಪಾದದ ಮೇಲೆ ಹಣೆಯಿಟ್ಟು ನಮಸ್ಕರಿಸುವುದಂತೂ ಸರ್ವಸಾಮಾನ್ಯ. ಎಸಗಿದ ತಪ್ಪಿಗಾಗಿ ಕಾಲಿಗೆ ಬಿದ್ದು ಕ್ಷಮೆ ಕೇಳುವುದು ಒಂದು ಪದ್ಧತಿ. ಕ್ಷಮಾದಾನ ಪಡೆದುಕೊಳ್ಳುವ ಸಂದರ್ಭದಲ್ಲಿ ಬೇರಾವ ಅವಯವ ಕಾಲಿನೊಡನೆ ಸರಿಗಟ್ಟೀತು?

ದೇವಾಲಯಗಳಿಗೆ ತೆರಳಿದಾಗ ದೇವದರ್ಶನದ ಸಮಯದಲ್ಲಿ ದೇವರ ವಿಗ್ರಹಗಳನ್ನು ಅಡಿಯಿಂದ ಮುಡಿಯವರೆಗೆ ನಿಧಾನವಾಗಿ ವೀಕ್ಷಿಸಿ, ನಂತರ ಅದೇ ದೃಷ್ಟಿಯನ್ನು ನಿಧಾನವಾಗಿ ಕೆಳಗಿಳಿಸಿ, ದೇವರ ಪಾದಾರವಿಂದಗಳಲ್ಲೇ ನೆಲೆ ನಿಲ್ಲುವಂತೆ ಮಾಡುವುದು ವಿಹಿತ ಕ್ರಮವೆಂದು ಬಲ್ಲವರು ಹೇಳುತ್ತಾರೆ. ಭಕ್ತನು ತನ್ನ ಇಷ್ಟಾರ್ಥಗಳ ಸಿದ್ಧಿಗಾಗಿ ಈಶಚರಣಗಳಿಗೆಯೇ ಶರಣಾಗುವನು ಹೊರತು ಬೇರಾವುದಕ್ಕೂ ಅಲ್ಲ.

"ಪದ್ಭ್ಯಾಂ ಶೂದ್ರೋ ಅಜಾಯತ" ಎಂಬ ಋಗ್ವೇದದ ಪುರುಷಸೂಕ್ತದ ಭಾಗ ಸಾಕಷ್ಟು ಚರ್ಚೆಗೆಡೆಮಾಡಿಕೊಟ್ಟದೆಯಾದರೂ ಕಷ್ಟ ಸಹಿಸುವ, ಇತರರಿಂದ ಆಗುವ ಅವಮಾನವನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳದೇ ಇರುವ ಹಾಗೂ ಕ್ಷಮಿಸುವಂತಹ ಶ್ರೇಷ್ಠ ಗುಣಗಳನ್ನು ಶೂದ್ರ ಹೊಂದಿರುತ್ತಾನೆಂಬುದು ನಿಜ. ಬಹುಶಃ ಆದಿಪುರುಷನ ಅಡಿಗಳಿಂದ ಜನಿಸುವಾಗ ಅಲ್ಲಿಂದಲೇ ಅವನು ಈ ಗುಣಗಳನ್ನು ಪಡೆದು ಬಂದಿದ್ದಾನೆಂದು ಊಹಿಸುವುದು ಸರಿಯಾದುದೇ! ಶೂದ್ರರು ನಿಮ್ನ ಸ್ಥಾನದಲ್ಲಿದ್ದರೂ ಕ್ಷುದ್ರರಲ್ಲ. ಅವರ ಬಗೆಗೆ ಕೀಳುಭಾವ ತಳೆಯಬೇಕಿಲ್ಲ. ಪರಮಪುರುಷನ ಪಾದಸ್ಪರ್ಶದಿಂದ ಪರಮಪಾವನವಾದ ವರ್ಣದವರು ಅವರೆಂಬುದನ್ನು ಪ್ರತ್ಯೇಕ ಹೇಳಬೇಕಿಲ್ಲ.

"ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು" ಎಂದು ಸಂಚಿಯ ಹೊನ್ನಮ್ಮ ಹೆಣ್ಣಿನ ಹಿರಿಮೆಯನ್ನು ಎತ್ತಿಹಿಡಿದಂತೆಯೇ "ಕಾಲು ಕಾಲೆಂದೇತಕೆ ಬೀಳುಗಳೆವರು ಕಾಲಿನ ಬೆಲೆಯರಿಯದ ಮರುಳರು," ಎಂದು ದನಿಯೆತ್ತಿ ಹಾಡಿದರೆ ಅದೇ ಗುಣಗ್ರಾಹಕತೆಯ ಪ್ರತೀಕ.

# ಆಳು ಮತ್ತು ಅರಸ

ಮರಬಳ್ಳಿ ಎಂಬ ಹಳ್ಳಿ ಹೊನ್ನಾವರ ತಾಲ್ಲೂಕಿನಲ್ಲಿದೆ. ಅಲ್ಲಿಯ ಪಟೇಲರ ಅಂಗಳದಲ್ಲಿ ಪ್ರಾಥಮಿಕ ಶಾಲೆ ಇದ್ದ ಕಾಲ. ಅಂಗಳದ ಮರದ ತೊಲೆಗಳ ಮೇಲೆ ಶಾಲೆಯ ಮಾಸ್ತರರು ಕೆಲವು ಹಿತನುಡಿಗಳನ್ನು ಎಲ್ಲರ ಕಣ್ಣಿಗೆ ಬೀಳುವಂತೆ ಸೀಮೆಸುಣ್ಣದಿಂದ ದಪ್ಪವಾಗಿ ಬರೆದಿದ್ದರು. ಅವುಗಳಲ್ಲಿ ಒಂದು, "ಆಳಾಗಿ ದುಡಿ, ಅರಸನಾಗಿ ಉಣ್ಣು." ಇದು ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ಏಕೆಂದರೆ ಅದು ನನ್ನನ್ನು ಕೆರಳಿಸಿದಷ್ಟು ಬೇರಾವ ಹಿತನುಡಿಯೂ ಕೆರಳಿಸಿಲ್ಲ.

ಈ ಹಿತನುಡಿಯ ಮೇಲ್ನೋಟದ ಅರ್ಥ ಬಹಳ ಸರಳ. ಆಳಿನಂತೆ ಕಷ್ಟಪಟ್ಟು ದುಡಿ ಹಾಗೂ ಅರಸನಂತೆ ರುಚಿಕರವಾಗಿ ತಿನ್ನು ಎಂಬ ಅರ್ಥ ಇದರಲ್ಲಿ ನಿಹಿತವಾಗಿದೆ. ಆಳು ಬೇರೆ ಅಲ್ಲ, ಅರಸ ಬೇರೆ ಅಲ್ಲ. ಕೆಲಸ ಮಾಡುವಾಗ ಕಷ್ಟಪಟ್ಟು ಕೆಲಸಮಾಡಬೇಕು; ಉಣ್ಣುವಾಗ ಅರಸನಂತೆ ನಿಶ್ಚಿಂತೆಯಿಂದ ಉಣ್ಣಬೇಕು ಎಂಬ ಅರ್ಥ ಇದರಲ್ಲಿ ನಿಹಿತವಾಗಿದೆ.

ಜನತಂತ್ರ ಬಂದನಂತರ 'ಆಳು' ಕೂಡ ಚುನಾವಣೆಯ ಮೂಲಕ ಆಳ್ವಿಕೆಯಲ್ಲಿ ಭಾಗಿಯಾಗುತ್ತಾನೆ. 'ಅರಸು' ಎಂದರೆ ಆಳುವವನು ಆಳನ್ನು ಅರಸಿಕೊಂಡು, ಅವನಿಂದ ಆರಿಸಿಕೊಂಡು, ತನ್ನ ಆಳ್ವಿಕೆಯನ್ನು ಸ್ಥಿರಗೊಳಿಸಿಕೊಳ್ಳಬೇಕಾಗಿದೆ. ಹೀಗಾಗಿ ಆಳು ಮತ್ತು ಅರಸನ ನಡುವೆ ಇರುವ ಭಿನ್ನತೆ ಮತ್ತು ಏಕತೆ ವಿಚಿತ್ರ ರೂಪ ತಾಳಿದೆ.

ಆದರೆ ಇಂದಿನ ಪರಿಸ್ಥಿತಿಯಲ್ಲಿ ದುಡಿದು ತಿನ್ನು ಎಂಬ ಹಿತನುಡಿಯಲ್ಲಿ ಯಾರಿಗೂ ಭರವಸೆ ಇಲ್ಲದಾಗಿದೆ. ಬದಲು, ದುಡಿಸಿ ತಿನ್ನು ಎಂಬ ಹೊಸ ನೀತಿ ಜನಪ್ರಿಯವಾಗಿದೆ. ದುಡಿಯುವವನು ಇಂದಿನ ವ್ಯವಸ್ಥೆಯಲ್ಲಿ ವಂಚಿತನಾಗಿರುವುದರಿಂದ ಅವನಿಗೆ ದುಡಿಯುವುದೇ ಒಂದು ಮೂರ್ಖತನವೆಂದು ಅನಿಸಲು ಪ್ರಾರಂಭವಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ದುಡ್ಡಿದ್ದವನು ದುಡಿಯಬೇಕಾಗಿಲ್ಲ. ದುಡ್ಡಿದ್ದರೆ ಬೇರೆಯವರಿಂದ ದುಡಿಸಿಕೊಳ್ಳಬಹುದು. ಯಂತ್ರಗಳಿಂದಲೂ ದುಡಿಸಿಕೊಳ್ಳಬಹುದು. ದುಡಿಸಿಕೊಳ್ಳುವವನ ಕಣ್ಣಿಗೆ ದುಡಿಯುವವನು ಒಬ್ಬ ಮನುಷ್ಯನಾಗಿ ಕಾಣುವುದಿಲ್ಲ.

• ಹಾಲಾಡಿ ಮಾರುತಿರಾವ್

ಅವನೊಬ್ಬ ಮಾನವಯಂತ್ರ ಅಷ್ಟೆ. ದುಡಿಯುವವನು ದುಡಿದು ದುಡಿದು ಸಾಯುವುದೇ ತನ್ನ ಹಣೆಯ ಬರಹವಾಯಿತಲ್ಲ ಎಂದು ಚಿಂತಿಸಲು ಪ್ರಾರಂಭಿಸಿದ್ದಾನೆ. ದುಡ್ಡನ್ನು ಹೇಗಾದರೂ ಗಳಿಸಿದರೆ ತಾನೂ ದುಡಿಯಬೇಕಾಗಿಲ್ಲ ಎಂದು ಹೊಂಚು ಹಾಕಲು ಪ್ರಾರಂಭಿಸಿದ್ದಾನೆ. ದುಡಿಯುವವನು ಈಗೀಗ ದುಡಿಯುವ ಮೊದಲು ತನ್ನ ದುಡಿತಕ್ಕೆ ಸಿಗುವ ದುಡ್ಡೆಷ್ಟು ಎಂದು ತಿಳಿದುಕೊಂಡು, ಕೊಡುವ ದುಡ್ಡಿಗೆ ಲೆಕ್ಕ ಹಾಕಿ, ತನ್ನ ದುಡಿಮೆಯನ್ನು ಏರಿಳಿಸಲು ಕಲಿತಿದ್ದಾನೆ. ದುಡ್ಡಿದ್ದವನು ದೊಡ್ಡಪ್ಪನಿರಬಹುದು; ಆದರೆ ದುಡಿಯುವವನು ದಡ್ಡಪ್ಪನಲ್ಲ.

ಪ್ರತಿಫಲದ ಆಸೆ ಕೂಡ ಇಲ್ಲದೆ ದುಡಿಮೆಯೇ ದೇವರು ಎಂದು ಭಕ್ತಿಯಿಂದ, ಶ್ರದ್ಧೆಯಿಂದ ದುಡಿಯುವವರು ಹಿಂದೆ ಇದ್ದರು. ಇವತ್ತು ಆ ನಿಯತ್ತು ಕ್ಷೀಣಿಸಿಹೋಗುತ್ತಿದೆ. ಪ್ರತಿಫಲ ಬಯಸುವುದು ತಪ್ಪಲ್ಲ. ಆದರೆ ಪ್ರತಿಯೊಂದಕ್ಕೂ ಫಲ ಬಯಸುವುದು, ಬೇಡುವುದು, ಬಾಧಿಸುವುದು ಪ್ರಾರಂಭವಾಗಿದೆ. ಫಲ ಬೇಕು, ನೆಲ ಬೇಡವಾಗಿದೆ. ಫಲಕ್ಕಾಗಿ ಹುಟ್ಟಿ, ಬೆಳೆದ ನೆಲವನ್ನೇ ತ್ಯಜಿಸಿ, ಅನ್ಯದೇಶಕ್ಕೆ ವಲಸೆ ಹೋಗುವವರು, ನೆಲೆಸಲು ಹೋಗುವವರು ಹೆಚ್ಚುತ್ತಿದ್ದಾರೆ.

ಅರಸ ತಾನೊಬ್ಬನೇ ಉಣ್ಣುವುದಿಲ್ಲ. ತನ್ನ ಪರಿವಾರದವರಿಗೂ ಉಣಿಸುತ್ತಾನೆ. ಉಣ್ಣಲು ಇಲ್ಲದವರಿಗಲ್ಲ; ಉಂಡು ಜೈಕಾರ ಹಾಕುವವರಿಗೆ ಮಾತ್ರ. ಉಣಿಸಿ, ಉಂಡವನ ತೃಪ್ತಿ ಕಂಡು, ತಾನೂ ತೃಪ್ತಿ ಪಡೆಯುವವನು ಕಡಿಮೆಯಾಗಿದ್ದಾನೆ. ಉಣಿಸುವುದು ಒಂದು ಧರ್ಮವಾಗಿಲ್ಲ, ಸ್ವಾರ್ಥಪೂರ್ಣ ಕರ್ಮವಾಗಿದೆ. ಅರಸನಾಗಿ ವೈಭವದಿಂದ ಉಣ್ಣುವುದು, ಉಣಿಸುವುದು ಒಂದು ಬಗೆಯಾದರೆ, ಇತರರಿಗೆ ಉಣಿಸಿ, ಬಳಿಕ ಅರಸನಾಗಿ ಉಣ್ಣುವುದು ಇನ್ನೊಂದು ಬಗೆ. ಎರಡನೇ ಬಗೆಯ ಅರಸುತನ ಸಾಮಾನ್ಯವಾಗಿ ಇಂದು ಕಂಡುಬರುತ್ತಿದೆ. ಉಣಿಸುವವನ ಹಿಂದೆ ಒಂದು ಪರಿವಾರ ಉದ್ಭವಿಸುತ್ತದೆ. ಆ ಪರಿವಾರದಿಂದಲೇ ಅರಸ, ಅರಸನಿಂದ ಪರಿವಾರವಲ್ಲ ಎಂಬ ಹೊಸ ಸತ್ಯ ಗೋಚರವಾಗಿ ಅರಸನಾಗಬಯಸುವವನು ಮೊದಲು ಪರಿವಾರ ಕಟ್ಟಿಕೊಳ್ಳಲು ಪ್ರಾರಂಭಿಸಿದ್ದಾನೆ. ಉಣಿಸುವುದು ತಾನು ಉಣ್ಣಲು ಒಂದು ಸೋಪಾನವೆಂದು ಬಗೆಯಲು ಪ್ರಾರಂಭಿಸಿದ್ದಾನೆ. ಬೆಂಬಲ ಪಡೆಯಲು ಉಣಿಸುವುದು, ತಣಿಸುವುದು, ಕುಣಿಸುವುದು ಅನಂತರ ಮಣಿಸುವುದು ಒಂದು ಕುಟಿಲ ನೀತಿಯಾಗುತ್ತಿದೆ.

ಹೀಗಾಗಿ ಆಳು, ಅರಸ, ದುಡಿಮೆ, ಉಣಿಸು ಈ ಪದಗಳು ಹೊಸ ರೂಪತಾಳಿ, ಹೊಸ ಅರ್ಥ ವ್ಯಾಪ್ತಿ ಪಡೆದು, ಹಿತನುಡಿ ಗತಿನುಡಿಯಾಗಿ ಮಾರ್ಪಾಡಾಗಿದೆ. ●





೧೩

# ಎಕ್ಸ್-ರೇ ಕಣ್ಣಿನ ಮನುಷ್ಯ!

• ಗೋವಾ

ಮಿಯಾಮಿಯ ಪೊಲೀಸ್ ಇಲಾಖೆಯ ಕೊಲೆ ಪತ್ತೆದಳದ ಮುಖ್ಯಸ್ಥ ಟಾಮ್ ಲೈವ್ ಒಂದು ರಾತ್ರಿ ಭೋಜನಕ್ಕೆ ಬರಬೇಕೆಂದು ಆಹ್ವಾನಿಸಿದಾಗ ಪೀಟರ್ ಅದರ ಹಿಂದಿನ ಉದ್ದೇಶವನ್ನು ಊಹಿಸಿಬಿಟ್ಟ.

ಊರ ಹೊರ ವಲಯದ ಭವ್ಯ ರೆಸ್ಟುರಾದ ಪಾರ್ಕ್‌ನಲ್ಲಿ ಮಾತುಕತೆಯಿಲ್ಲದೆ ಅರ್ಧ ಊಟ ಸಾಗಿತು. ಇದ್ದಕ್ಕಿದ್ದ ಹಾಗೆಯೆ, "ಪೀಟರ್" ಎಂದ ಟಾಮ್ ಕೈ ತೊಳೆದುಬಿಟ್ಟ. ಪೀಟರ್‌ಗೋ ತಟ್ಟೆಯಲ್ಲಿ ಅಷ್ಟೆಲ್ಲವನ್ನೂ ಬಿಟ್ಟೇಳುವುದೆಂದರೆ ಆಗದು. ಆತ ಎಂದಿಗಾದರೂ ಅಷ್ಟೆ. ಊಟದ ವಿಷಯದಲ್ಲಿ ತುಂಬ ಕಟ್ಟುನಿಟ್ಟು. ಬೇಕಾದಷ್ಟನ್ನು ಮಾತ್ರ ಹಾಕಿಸಿಕೊಂಡು ಹೊಟ್ಟೆ ತುಂಬ ಉಣ್ಣುವಂಥವ. ಇಲ್ಲಿ ನೋಡಿದರೆ ಈ ಟಾಮ್ ಎಷ್ಟೆಲ್ಲ ಆಹಾರವನ್ನು ಎಂಜಲು ಮಾಡಿ ಚೆಲ್ಲಿದ್ದಾನೆ. ಅವನಿಗೇನು? ಸ್ವಂತಕ್ಕೆ ದುಡ್ಡು ಕೊಡಬೇಕಾಗಿಲ್ಲವಲ್ಲ, ಇಲಾಖೆಯ ಲೆಕ್ಕಕ್ಕೆ ಸೇರುತ್ತದೆ ಈ ಎಲ್ಲ ಖರ್ಚು.

ಹೀಗೆಲ್ಲ ಯೋಚನೆಯಲ್ಲಿ ಮುಳುಗಿದ್ದವನಿಗೆ ಟಾಮ್ ನಾಲ್ಕು ಬಾರಿ ಕರೆದದ್ದೂ ಕೇಳಿಸಿರಲಿಲ್ಲ. ನಗುತ್ತ ಟಾಮ್ ಭುಜ ಹಿಡಿದು ಅಲುಗಿಸಿದಾಗಲೇ ಆತ ವಾಸ್ತವಕ್ಕೆ ಬಂದದ್ದು.

"ಏನು? ಏನಾಯಿತು?"

"ಕೊಲೆಯಾಯಿತು"

"ಯಾರದು?"

"ಒಬ್ಬ ಟ್ಯಾಕ್ಸಿ ಡ್ರೈವರ್‌ದು. ನಿನ್ನೆ ರಾತ್ರಿ ಯಾರೋ ಗುಂಡಿಟ್ಟುಕೊಂಡಿದಿದ್ದಾರೆ. ಪಾತಕಿಯ ಸುಳಿವೇ ಸಿಗುತ್ತಿಲ್ಲ. ಬಹುಶಃ ನೀವು ಮಾತ್ರ ಕೊಲೆಗಡುಕನನ್ನು ಪತ್ತೆ ಹಚ್ಚಬಹುದು."

"ಮೃತ ವ್ಯಕ್ತಿಯದೊಂದು ಫೋಟೋ ಸಿಗಬಹುದಾ?"

"ಖಂಡಿತ."

ಮರುದಿನ ಟಾಮ್ ಆ ಟ್ಯಾಕ್ಸಿ ಡ್ರೈವರ್‌ನ ಫೋಟೋ ಮತ್ತು ಇಡೀ ಪ್ರಕರಣದ ಕುರಿತು ವರದಿಯಿದ್ದ ಫೈಲನ್ನು ತಂದಿತ್ತ.

ಪೀಟರ್ ಫೈಲನ್ನು ತೆರೆಯಲಿಲ್ಲ, ಹಾಗೇ ಅದರ ಮೇಲೆ ಬಲಗೈ ಊರಿದ.

"ಟ್ಯಾಕ್ಸಿ ಡ್ರೈವರ್ ಕಾಣಿಸ್ತಿದಾನೆ. ಹವಾನಾಗೆ ಹೋಗಿ ಇಲ್ಲಿಗೆ ಮರಳುತ್ತಿರುವ ತರುಣ. ಕೊಲೆ ಪಾತಕಿಯೂ ಕಾಣುತ್ತಿದ್ದಾನೆ. ಡೆಟ್ರಾಯ್ಟ್‌ನವ. ಆರಡಿ ಎತ್ತರದ ಚಕ್ಕಳದಂಥವ. ಡೆಟ್ರಾಯ್ಟ್‌ನಲ್ಲಿ ಪೊಲೀಸರ ಕಾಟ. ತಲೆತಪ್ಪಿಸಿ ತಿರುಗುತ್ತಿದ್ದಾನೆ. ಮತ್ತೊಂದು ಕೊಲೆ! ಮಿಯಾಮಿಯಲ್ಲಲ್ಲ. ಈ ಕೊಲೆಗಡುಕನನ್ನು ಮಿಯಾಮಿಯಲ್ಲಿ ಬಂಧಿಸುವುದಂತೂ ಅಸಾಧ್ಯ. ಬ್ಯಾಂಕ್ ದರೋಡೆ ಪ್ರಕರಣದಲ್ಲಿ ಬೇರೊಂದೆಡೆ ಸಿಕ್ಕಿಬೀಳುತ್ತಾನೆ.... ಆತನಿಗೆ ಎರಡು ಹೆಸರುಗಳಿವೆ. ಆದರೆ ಜನ ಕರೆಯೋದು 'ಸ್ಕಿಟ' ಅಂತ್ಲೇ. ಬಲಗಾಲ ಮೇಲೊಂದು ಗಾಯದ ಗುರುತಿದೆ. ಬಲಗೈ ತೋಳಿನ ಮೇಲೆ ಹಚ್ಚೆ

ಹಾಕಿಸಿಕೊಂಡಿದ್ದಾನೆ. ಆರ್ಮಿಯಲ್ಲಿದ್ದಾಗ ಹಾಕಿಸಿಕೊಂಡದ್ದು. ಟಾಮ್, ನನಗೆ ಎರಡು ಕೊಲೆಗಳು ಕಾಣಿಸ್ತಿವೆ".

"ಎರಡಾ? ಊಹು ನಮಗ್ಗೊತ್ತಿರೋ ಹಾಗೆ ಆದದ್ದು ಇದೊಂದೇ ಕೊಲೆ. ಟ್ಯಾಕ್ಸಿ ಡ್ರೈವರ್‌ದು," ಟಾಮ್ ದೃಢವಾಗಿ ಹೇಳಿದ.

"ಇಲ್ಲ ಟಾಮ್. ಇದೇ ವ್ಯಕ್ತಿ ಕೀ ವೆಸ್ಟ್‌ನಲ್ಲಿ ಮೊದಲೊಂದು ಕೊಲೆಗೈದಿದ್ದಾನೆ. ಮನೆಯೊಂದನ್ನು ದೋಚಲು ಯತ್ನಿಸುತ್ತಿದ್ದಾಗ ಆ ಮನೆಯೊಡೆಯ-ನಿವೃತ್ತ ಕರ್ನಲ್-ಗಲಾಟೆ ಮಾಡಿದ. ಈತ ಗುಂಡಿಟ್ಟು ಆ ಮುದುಕನ್ನ ಮುಗಿಸಿಬಿಟ್ಟ. ಟ್ಯಾಕ್ಸಿ ಡ್ರೈವರ್‌ನನ್ನ ಹೆಣವಾಗಿಸಿದ ಪಿಸ್ತೂಲಿನಿಂದಲೆ ಹೊರಬಂದ ಗುಂಡುಗಳವು."

ಟಾಮ್ ಪತ್ತೆತರದೂದಿನ ನಂತರ ಪೀಟರ್ ಹೇಳಿದ್ದು ಶತಃಸತ್ಯವೆಂಬುದನ್ನು ಅರಿತುಕೊಂಡ. ಕೀ ವೆಸ್ಟ್‌ನಲ್ಲಿ ನಿವೃತ್ತ ಕರ್ನಲ್ ಕೊಲೆಯ ಕುರಿತು ತನಿಖೆ ನಡೆಸುತ್ತಿದ್ದ ಪೊಲೀಸ್ ಅಧಿಕಾರಿಗಳು ನೀಡಿದ ವಿವರಗಳನ್ನು ಗಮನಿಸಿ ಟಾಮ್ ಇನ್ನಷ್ಟು ಅಚ್ಚರಿಪಟ್ಟ. ಎರಡೂ ಕೊಲೆಗಳಲ್ಲಿ ಬಳಸಲ್ಪಟ್ಟ ಬುಲೆಟ್ಟುಗಳು ಒಂದೇ ಪಿಸ್ತೂಲಿನಿಂದ ಬಂದಂಥವು!

ಪಾತಕಿ ಡೆಟ್ರಾಯ್ಟ್ ಸುತ್ತಮುತ್ತವೇ ಸುಳಿದಾಡುತ್ತಿದ್ದುದನ್ನೂ ಪೀಟರ್ 'ಕಂಡು'ಕೊಂಡ. 'ಸ್ಕಿಟ್ಟಿ' ಎಂದು ಕರೆಯಲ್ಪಡುವ ತೆಳ್ಳನೆಯ ತರುಣನನ್ನು ಪತ್ತೆ ಹಚ್ಚಿ ಬಂಧಿಸುವಂತೆ ಟಾಮ್ ಲೈಪ್ ಅಲ್ಲಿಯ ಪೊಲೀಸು ಅಧಿಕಾರಿಗಳಿಗೆ ಗುಪ್ತಸಂದೇಶ ಕಳಿಸಿದ. 'ಸ್ಕಿಟ್ಟಿ' ಅವರ ಫೈಲುಗಳಲ್ಲಿ ಸಿಕ್ಕನೆ ಹೊರತು ಕಣ್ಣಿಗೆ ಬೀಳಲಿಲ್ಲ, ಕೈಗೂ ಎಟುಕಲಿಲ್ಲ. ಡೆಟ್ರಾಯ್ಟ್‌ನಲ್ಲಿ ತರುಣರ ತಂಡವೊಂದು ಅಪರಾಧ ಕೃತ್ಯಗಳಲ್ಲಿ ತೊಡಗಿಕೊಂಡಿರುವುದು ಪೊಲೀಸರಿಗೆ ಗೊತ್ತಿತ್ತು. ಆದರೆ ಅವರೆಲ್ಲ ಪ್ರತಿಯೊಂದು ಪ್ರಕರಣದಲ್ಲೂ ಹೊಸ ವಿಧಾನವನ್ನೇ ಬಳಸುತ್ತಿದ್ದುದರಿಂದ ಹಿಡಿಯುವುದು ಅಷ್ಟು ಸುಲಭವಾಗಿರಲಿಲ್ಲ.

ನಾಲ್ಕೈದು ವಾರಗಳು ಕಳೆದಿರಬೇಕು. ಡೆಟ್ರಾಯ್ಟಿನ ಬಾರ್ ಒಂದರಲ್ಲಿ 'ಸ್ಕಿಟ್ಟಿ'ಯಂಥದೆ ಚಹರೆ ಪಟ್ಟಿಯ ತರುಣನೊಬ್ಬನನ್ನು ಹಿಡಿದು ಕಟ್ಟ ರೂಮಿನಲ್ಲಿ ಕೂಡಿ ಹಾಕಲಾಗಿದೆ ಎಂದು ಅಲ್ಲಿಯ ಪೊಲೀಸರಿಗೆ ಸುದ್ದಿ ಬಂತು. ಬ್ಯಾಂಕೊಂದರ ಪಕ್ಕದ ಬಾರ್ ಅದು. ಆ ಪೀಚು ಪೀಚಾದ ಹುಡುಗ ಒಳಗೆ ಬಂದು ಮನಮಾನಿ ವರ್ತಿಸಿದನಂತೆ. ಆಕ್ಷೇಪವೆತ್ತಿದ ಬಾರಿನ ಮಾಲಿಕನ ಕೆನ್ನೆಗೆ ಮುಷ್ಟಿ ಪ್ರಹಾರ ಮಾಡಿದನಂತೆ. ಆ ಪೆಟ್ಟಿನಿಂದ ತತ್ತರಿಸಿದ ಬಾರಿನಾತನ ದವಡೆ ಮುರಿದು ಬಾಯಿ-ಮೂಗುಗಳಿಂದ ರಕ್ತ ಸುರಿಯಿತಂತೆ. ಇತರ ವೇಟರ್‌ಗಳು ಬೆನ್ನಟ್ಟಿದ್ದರಿಂದ ಆ ಹುಡುಗ ಅಲ್ಲಿಯ ಕೋಣೆಯೊಂದನ್ನು ಹೊಕ್ಕು ಒಳಚಿಲಕ ಹಾಕಿಕೊಂಡನಂತೆ. ಇವರು ಹೊರಗಿನಿಂದ ಕೀಲಿ ಹಾಕಿ ಪೊಲೀಸರಿಗೆ ದೂರಿತ್ತರಂತೆ.

ಪೊಲೀಸರು ಸ್ಥಳಕ್ಕೆ ಧಾವಿಸಿದಾಗ ಆ ಹುಡುಗ ಪಿಸ್ತೂಲು ಸಿದ್ಧವಾಗಿಟ್ಟುಕೊಂಡ. ಅಧಿಕಾರಿ ಬಾಗಿಲು ತೆರೆಯುತ್ತಿದ್ದಂತೆಯೇ ಗುಂಡು ಹಾರಿಸಿದ. ಆದರೆ ಗುರಿ ತಪ್ಪಿತು. ಆ ಹುಡುಗನನ್ನು ಹೆಡಮುರಿಗೆ ಕಟ್ಟಿ ಠಾಣೆಗೆ ಎಳೆದುಕೊಂಡು ಬಂದ ಪೊಲೀಸರು ಹೊಡೆದುಬಡಿದು ಆತನ ಬಾಯಿ ಬಿಡಿಸಿದರು. "ನನ್ನ ಹೆಸರು ಸ್ಕಿಮ್ಸ್" ಎಂದ ಆ ಎಳೆನಾಗರನಂಥ ಹುಡುಗ.

ಫ್ಲೋರಿಡಾಗೆ ವಿಮಾನದಲ್ಲಿ ತರಲ್ಪಟ್ಟ 'ಸ್ಕಿಟ್ಟಿ'ಯನ್ನು ಪೀಟರ್ ಏರ್‌ಪೋರ್ಟಿನಲ್ಲಿ

# 'ಶೋಧನೆ'ಯಿಂದ 'ಸಂಶೋಧನೆ'ಯತ್ತ ......

**ನಿರೀಕ್ಷೆ**

ಹೇಗೆ ಬರಲಿ
ಇನಿಯಾ
ನಿನ್ನ ಬಳಿಗೆ?
ರೆಕ್ಕೆ ಪುಕ್ಕ ಕಟ್ಟಿಕೊಂಡು
ಹಕ್ಕಿಯಾಗಿ ಹಾರಿಬರಲೇ?
ಪಕ್ವವಾದ ಭಾವಗಳು
ಮಾತುಗಳಲ್ಲಿ
ಮೂಡಿಸಿ ಬರೆಯಲೇ?!
ಇಲ್ಲ ಸಲ್ಲದ
ನೆಪವ ಹೂಡಿ
ಹೊತ್ತು ಗೊತ್ತಿಲ್ಲದೇ
ಕಾಯುವ
ಚಕ್ರವಾಕ ಹಕ್ಕಿಯಂತೆ
ಚಿತ್ತವೆಲ್ಲಾ
ಮುಂಗಾರು ಹನಿಗಳಿಗೆ
ಮುಡಿಪಾಗಿಟ್ಟು
ಕಾಯಲೆ ನೋಡಲೇ?

• ರಜಿಯಾ ಡಿ.ಬಿ.

ನೋಡಿದ. ಹೌದು. ತಾನು 'ಕಂಡಂ'ಥ ಮುಖವೇ ಇದು! ಆದರೆ ನೀಡಿದ ವಿವರಗಳಲ್ಲಿ ಒಂದು ತಪ್ಪಿತ್ತು. ಬ್ಯಾಂಕ್ ದರೋಡೆ ಯತ್ನದಲ್ಲಿ ಆತ ಪೊಲೀಸರ ಕೈಗೆ ಸಿಕ್ಕಿಬೀಳುತ್ತಾನೆಂದು ಹೇಳಿದ್ದು ಸರಿಯಾಗಿರಲಿಲ್ಲ. ಆತ ಸಿಕ್ಕಿ ಹಾಕಿಕೊಂಡ ಬಾರ್ ಪಕ್ಕದಲ್ಲಿ ಒಂದು ಬ್ಯಾಂಕ್ ಇತ್ತೆಂಬುದು ಮಾತ್ರ ನಿಜವಿತ್ತು.

***

೧೯೫೮ ರ ಜನವರಿ ತಿಂಗಳು.

ಒಂದು ದಿನ ಸೂರ್ಯೋದಯದ ತುಸು ಹೊತ್ತಿಗೆ, ರೂಢಿಯಂತೆ ಕೈ ತೋಟದ ಗಿಡಗಳಿಗೆ ನೀರುಣಿಸುತ್ತಿದ್ದ ಪೀಟರ್. ಆತನ ಸ್ವಂತದ ಹೊಸ ಮನೆ ಮಿಯಾಮಿಯಲ್ಲಿ ಮುಕ್ತಾಯ ಹಂತ ತಲಪಿತ್ತು.

"ನಿಮ್ಮನ್ನೋಡೋಥಕ್ಕೆ ಯಾರೋ ಬಂದಿದಾರೆ", ಮಾರಿಯಾ ಕೂಗಿ ಹೇಳಿದಳು.

ಹೋಗಿ ನೋಡಿದರೆ ಬಂದವರು ವಿಸ್‌ಕನ್ಸಿನ್ನಿನ ಪರಿಚಿತ ಆರ್ಲ್ ಕ್ರೆಯ್ನಿಕ್ ದಂಪತಿ; ಅವರೊಂದಿಗೊಬ್ಬ ಅಪರಿಚಿತ.

"ಇವರು ಮಿಲವಾಕಿಯದ ಮಿ. ಜಾನ್ ಬರ್ಗ್ರಾಫ್." ಪರಿಚಯಿಸಿದ ಕ್ರೆಯ್ನಿಕ್.

ಪೀಟರ್ ಆ ಹೊಸಬನ ಕೈ ಕುಲುಕಿದ. ಆತನ ವೃತ್ತಿ ಸ್ವಭಾವ ಮತ್ತಿತರ ವಿವರಗಳೆಲ್ಲ ಗೊತ್ತಾಗಿಬಿಟ್ಟವು. ಬರ್ಗ್ರಾಫ್ ಒಬ್ಬ ಒಬ್ಬ ವಕೀಲ, ವ್ಯವಹಾರಸ್ಥ. ತನ್ನ ವ್ಯಾವಹಾರಿಕ ಸಂಬಂಧದಲ್ಲಿ ಪೀಟರ್‌ನ 'ಅದ್ಭುತ ಶಕ್ತಿ'ಯ ನೆರವು ಪಡೆದು ಸುಧಾರಿಸಿಕೊಳ್ಳಬೇಕೆಂಬ ಬಯಕೆಯಿಂದ ಬಂದಿದ್ದ.

ವಕೀಲರೆಂದರೆ ಪೀಟರ್‌ಗೆ ಅಷ್ಟಕ್ಕಷ್ಟೇ. ಆದರೆ ಈ ವ್ಯಕ್ತಿ ಮಾತ್ರ ಭಿನ್ನವಾಗಿ ತೋರಿಬಂದ. ತುಂಬ ಪ್ರಾಮಾಣಿಕ ಎಂದೆನಿಸಿಬಿಟ್ಟಿತು ಪೀಟರ್‌ಗೆ. ಆದರೂ ಉಳಿದೆಲ್ಲ ವಕೀಲರಂತೆ ಈತನೂ ತುಸು ಮಟ್ಟಿಗೆ ಸಂದೇಹ ಸ್ವಭಾವಿಯೆ ಎಂದೆನಿಸಿತು.

ಆತಿಥ್ಯೋಪಚಾರಗಳ ನಂತರ ಪೀಟರ್ ಎದ್ದು ನಿಂತ. "ಮಿ. ಬರ್ಗ್ರಾಫ್, ದಯವಿಟ್ಟು ಸ್ವಲ್ಪ ಹೊತ್ತು ನಿಮ್ಮ ವಾಚ್ ಕೊಡ್ತೀರಾ?" ಎಂದ.

ವಾಚು ಪಡೆದ ಮೇಲೆ ಕ್ಷಣ ಹೊತ್ತು ಅದನ್ನೇ ದಿಟ್ಟಿಸಿ, "ನೀವು ಮೂರು ಜನ ಮಕ್ಕಳು ನಿಮ್ಮ ತಂದೆಗೆ. ಸ್ಕೂಲಿಗೆ ಹೋಗ್ತಿರೋವಾಗ್ಲೇ ನೀವು ಕೆಲಸ ಬದಲಾಯಿಸ್ತಿದ್ರಿ....."

ಬರ್ಗ್ರಾಫ್ ಅಚ್ಚರಿಯ ಮುದ್ದೆಯಾದ. ಆದರೂ, "ಶಾಲೆಗೆ ಹೋಗ್ತಿರೋವಾಗ ಕೆಲಸ ಬದಲಾಯಿಸೋದೆ? ಆಗೆಲ್ಲಿತ್ತು ನೌಕರಿ?" ಎಂದು ಪ್ರಶ್ನೆಯೆಸೆದ.

ಪೀಟರ್‌ಗೆ ತನ್ನ ತಪ್ಪಿನ ಅರಿವಾಯಿತು. ಒಂದು ರೀತಿಯಲ್ಲಿ ನೋಡಿದರೆ ಅದು ತಪ್ಪೇ ಅಲ್ಲ. ಆತನಿಗೆ ಇಂಗ್ಲೀಷು ಸ್ವಲ್ಪ ತುಟ್ಟಿ. ಯೋಚನೆ-ಅಭಿವ್ಯಕ್ತಿಗಳೆಲ್ಲ ಮಾತೃಭಾಷೆ ಡಚ್‌ನಲ್ಲಿಯೆ ಸಾಗುತ್ತಿದ್ದವು. ನಿಜವಿದ್ದ ಸಂಗತಿಯೆಂದರೆ ಬರ್ಗ್ರಾಫ್ ಕಾಲೇಜು ಹಂತದಲ್ಲಿ ವೈದ್ಯಕೀಯ ಶಿಕ್ಷಣದಿಂದ ಕಾನೂನು ಅಭ್ಯಾಸದೆಡೆ ವಾಲಿದ್ದ. ಪೀಟರ್ ಈ ಬದಲಾವಣೆಯನ್ನು ಅನುವಾದಿಸಿ ಹೇಳುವಾಗ ಕೆಲಸ ಎಂದು ಉಚ್ಚರಿಸಿದ್ದ ಅಷ್ಟೆ.

"ನಿಮ್ಮ ತಂದೆ ಸಾವಿರಾರು ಜನ ಕೆಲಸಗಾರರನ್ನು ದುಡಿಸಿಕೊಳ್ಳುವಂಥವರಾಗಿದ್ದರು."

ಬರ್ಗ್ರಾಫ್ ಹೌದೆಂಬಂತೆ ತಲೆಯಾಡಿಸಿದ. "ಅವರು ಮಿಲವಾಕಿಯದ ಎ.ಓ. ಸ್ಮಿತ್ ಕಾರ್ಪೊರೇ

ರೇಶನ್ನಿನಲ್ಲಿ ಸೂಪರಿಂಟೆಂಡೆಂಟ್ ಆಗಿದ್ದರು. ಮಹಾಯುದ್ಧದ ಕಾಲದಲ್ಲಿ ಬಾಂಬ್ ಘಟಕದ ಅಧಿಕಾರಿಯಾದರು. ಆಗ ಸುಮಾರು ೪೮೦೦ ಜನ ಅವರ ಕೈಕೆಳಗೆ ದುಡಿಯುತ್ತಿದ್ದರು. ಶಾಂತಿ ಸಮಯದಲ್ಲಿ ಸುಮಾರು ಎರಡು ಸಾವಿರ ಮಂದಿಯ ಮೇಲೆ ಅವರ ದೇಖರಿಕಿ."

ಒಂದಷ್ಟು ಹೊತ್ತು ಆ-ಈ ವಿವರಗಳನ್ನು ಹೇಳಿದ ಪೀಟರ್ ಒಮ್ಮಿಂದೊಮ್ಮೆಲೆ ಎದೆಯಲ್ಲಿ ನೋವು ಅನುಭವಿಸಿದ. "ನಿಮ್ಮ ತಂದೆ ಹೃದಯಾಘಾತದಿಂದ ಮರಣವಪ್ಪಿದರು. ಅಂದು ಮಂಗಳವಾರ. ಅವರ ಅಂತ್ಯಕ್ರಿಯೆ ನಡೆದದ್ದು ಶುಕ್ರವಾರ".

ಜಾನ್, "ನೂರಕ್ಕೆ ನೂರು ನಿಜ," ಎಂದ.

ಪೀಟರ್ ಗಂಟಲು ಒತ್ತಿ ಹಿಡಿದುಕೊಂಡು ಮಾಳಿಗೆಯೆಡೆ ನೋಡುತ್ತ ಉಸಿರಾಟದ ತೊಂದರೆ ಅನುಭವಿಸತೊಡಗಿದ. "ನಿಮ್ಮಪ್ಪ ಉಸಿರಾಡಲೂ ಕಷ್ಟಪಡುವ ಸ್ಥಿತಿ ತಲಪಿದ್ದರು; ಮಾತಾಡಲಂತೂ ಸಾಧ್ಯವೇ ಆಗುತ್ತಿರಲಿಲ್ಲ, ಅಲ್ಲವೆ?" ಎಂದು ಕೇಳಿದ.

ಬರ್ಗ್ರಾಫ್ ಕಣ್ಣಲ್ಲಿ ನೀರು ಚಿಮ್ಮಿತು. ಎದ್ದು ಬಂದವನೇ ಪೀಟರ್‌ನನ್ನು ಅಪ್ಪಿಕೊಂಡು ಗೊಳೋ ಎಂದು ಅತ್ತುಬಿಟ್ಟ.

ಹೀಗೆ ಪರಿಚಿತನಾದ ಜಾನ್ ಬರ್ಗ್ರಾಫ್ ಮುಂದೆ ಪೀಟರ್‌ನ ಬದುಕಿನ ಅನಿವಾರ್ಯ ಅಂಗವೆನಿಸಿಬಿಟ್ಟ. ಈತನ ಎಲ್ಲ ಕಾನೂನು ಸಂಬಂಧಿ ವ್ಯವಹಾರಗಳನ್ನು ಆತನೆ ನೋಡಿಕೊಳ್ಳತೊಡಗಿದ.

ಐದು ತಿಂಗಳುಗಳ ನಂತರ 'ಆಲ್‌ಕೊಆ ಅವರ್' ಎಂಬ ಟೆಲಿವಿಜನ್ ಕಾರ್ಯಕ್ರಮ ನಿರ್ಮಾಣ ಸಂಸ್ಥೆಯವರು ಪೀಟರ್‌ನನ್ನು ಕಂಡರು. ಈತನ 'ಶಕ್ತಿ ಮತ್ತು ಪ್ರದರ್ಶನ'ಗಳನ್ನು ಆಧರಿಸಿದಂತೆ ಟೆಲಿಫಿಲ್ಮ್ ಒಂದನ್ನು ನಿರ್ಮಿಸಿ ಬಿತ್ತರಿಸುವ ಆಶೆ ಅವರದು.

ಅದಕ್ಕಾಗಿ ಪೀಟರ್ ಕ್ಯಾಲಿಫೋರ್ನಿಯಾಕ್ಕೆ ಹೋಗಬೇಕಾಯಿತು.

ಅದಕ್ಕೂ ಮುನ್ನ ಐದು ತಿಂಗಳುಗಳ ಕಾಲ ವ್ಯಾವಹಾರಿಕ ಮಾತುಕತೆಗಳು, ಚಿತ್ರಕಥೆ ಸಿದ್ಧಪಡಿಸುವಿಕೆಗಳೇ ಮೊದಲಾದ ಅಗತ್ಯ ಕೆಲಸಗಳಿಗಾಗಿ ಪೀಟರ್ ಆ ನಿರ್ಮಾಣ ಸಂಸ್ಥೆಯವರೊಂದಿಗೆ ಶ್ರಮಿಸಬೇಕಾಯಿತು. ಅಭಿನಯದ ಗಂಧಗಾಳಿಯೂ ಗೊತ್ತಿಲ್ಲದ್ದರಿಂದ ಪೀಟರ್ ನಟಿಸಲೊಪ್ಪಲಿಲ್ಲ. ಆತನನ್ನೇ ಹೋಲುವ ನಟನೊಬ್ಬ 'ಎಕ್ಸ್-ರೇ ಕಣ್ಣಿನ ಮನುಷ್ಯ'ನಾಗಿ ಕ್ಯಾಮರಾ ಎದುರಿಸಿದ. ಪೀಟರ್ ಒಂದು ರೀತಿಯಲ್ಲಿ ಆ ಚಿತ್ರಕ್ಕೆ ತಾಂತ್ರಿಕ ನಿರ್ದೇಶಕನೂ ಹೌದು. ಅದು ಟೆಲಿಚಿತ್ರವಾದ್ದರಿಂದ ಅಗತ್ಯಕ್ಕೆ ತಕ್ಕಂತೆ ಕೆಲವು ಘಟನೆ, ಸಂಗತಿಗಳಲ್ಲಿ ನಾಟಕೀಯ ಬದಲಾವಣೆಗಳನ್ನು ತುಂಬುವುದು ಅನಿವಾರ್ಯವಾಗಿತ್ತು.

೧೯೬೦ ರ ಎಪ್ರಿಲ್ ೧೯ ರಂದು 'ಎಕ್ಸ್-ರೇ ಕಣ್ಣಿನ ಮನುಷ್ಯ' ಮೂರು ಗಂಟೆಗಳ ಕಾಲ ಅಮೆರಿಕದಾದ್ಯಂತ ಅವರವರ ಮನೆಗಳಲ್ಲೇ ಪ್ರೇಕ್ಷಕರನ್ನು ಗೊಂಬೆಗಳಂತೆ ಕೂಡಿಸಿಬಿಟ್ಟ.

* * *

ಅತೀಂದ್ರಿಯ ಶಕ್ತಿಯನ್ನು ಪಡೆದ ಪೀಟರ್ ಅದನ್ನು ಕೇವಲ ಅನ್ನದ ಮಾರ್ಗವಾಗಿ ಬಳಸಿಕೊಳ್ಳಲು ಇಚ್ಛಿಸಲಿಲ್ಲ. ವೈಜ್ಞಾನಿಕವಾಗಿ ಅದರಲ್ಲಿ ಕೆಲವೊಂದು ಪ್ರಯೋಗಗಳನ್ನು ಕೈಗೊಂಡು ಅದರ ಮಹತ್ವವನ್ನು ಜಗತ್ತಿಗೆ ಸಾರುವುದು ಅತ್ಯವಶ್ಯ ಎಂದುಕೊಂಡ. ಈಗಂತೂ ಲಕ್ಷ್ಮಿ ಆತನ ಮನೆಯಲ್ಲಿ ಕಾಲು ಮುರಿದುಕೊಂಡು ಬಿದ್ದಿದ್ದಳು. ಬರ್ಗ್ರಾಫ್ ಹಾಗೂ ಇತರ ಆಸಕ್ತ ಸ್ನೇಹಿತರೊಂದಿಗೆ ಸಮಾಲೋಚಿಸಿ 'ಪೀಟರ್ ಹರ್‌ಕೋಸ್ ಫೌಂಡೇಶನ್ ಇನ್‌ಕಾರ್ಪೋರೇಶನ್' ಅನ್ನು ಪ್ರಾರಂಭಿಸಿದ.

ಪೀಟರ್ ತನಗೆ ಈ ಶಕ್ತಿ ಹ್ಯಾಗೆ ಒದಗಿಬಂತು ಎಂಬುದರ ಕುರಿತು ಬಹುವಾಗಿ ಯೋಚಿಸಿದ. ಆತನ ಯೋಚನೆಯ ಜಾಡಿನಲ್ಲಿ ಹಲವು ಹೊಸ ವಿಚಾರಗಳು ಗೊತ್ತಾದವು. "ಮಕ್ಕಳಲ್ಲಿ ಈ ಶಕ್ತಿ ಸಾಕಷ್ಟು ಪ್ರಮಾಣದಲ್ಲಿರುತ್ತದೆ. ಆದರೆ ಹಿರಿಯರು ಅದನ್ನು ಗೇಲಿ ಮಾಡಿ ಅವರನ್ನು ಒಂದು ರೀತಿಯಲ್ಲಿ ಆ ದಿಶೆಯಲ್ಲಿ ಮುಂದುವರಿಯದಂತೆ ಮಾಡುತ್ತಾರೆ," ಎಂಬುದು ಆತನಿಗೆ ಗೊತ್ತಾದ ವಿಚಾರಗಳಲ್ಲಿ ಮುಖ್ಯವಾದದ್ದು. "ಇದೊಂದು ಶಾಸ್ತ್ರ. ಆದರೆ ಜನರನ್ನು ಮೋಸಗೊಳಿಸುವ 'ಅಬ್ರಾಕಾಡಬ್ರಾ'ವಾಲಾಗಳೇ ಈ ಕ್ಷೇತ್ರದಲ್ಲಿ ಬಹುಸಂಖ್ಯೆಯಲ್ಲಿದ್ದಾರೆ. ಇಂಥವರಿಂದ ಈ ಶಾಸ್ತ್ರಕ್ಕೆ ಅಪಚಾರವಾಗುತ್ತಿದೆ," ಎಂಬುದು ಆತನ ವ್ಯಸನ.

(ಮುಂದಿನ ಸಂಚಿಕೆ ನೋಡಿ)

# ಮದನ ಕಾಮನ ಕಥೆಗಳು

೧

ಭಾರತಾದ್ಯಂತ ಜನಪ್ರಿಯವಾಗಿರುವ 'ರಾಜಾ ಮದನ ಕಾಮನ ಕಥೆಗಳು' ಈಗಿನ ಪೀಳಿಗೆಯವರು ಕೇಳಿ ಅರಿಯ ದಂಥವು. ಭಾರತೀಯ ವಿದ್ಯಾಭವನದ 'ಭವನ್ಸ್ ಜರ್ನಲ್ ಪತ್ರಿಕೆ'ಯಲ್ಲಿ ಇವು ಹಿಂದೆಮ್ಮೆ ಕ್ರಮವಾಗಿ ಪ್ರಕಟಗೊಂಡವು. ಒಳ್ಳೆಯ ಕುತೂಹಲಕರವಾದ ಈ ಕಥೆಗಳು ನೀತಿ ಬೋಧೆಯೊಂದಿಗೆ ಮನೋರಂಜನೆಯನ್ನೂ ಒದಗಿಸುವಂಥವು. ಈ ಸಂಚಿಕೆಯಿಂದ ನಿಮಗಾಗಿ ಈ ಕಥೆಗಳನ್ನು ಪ್ರತಿ ತಿಂಗಳೂ- ಪ್ರಕಟಿಸಲಾಗುವುದು.

• ಸಂಪಾದಕ

"ಚಾತುರ್ಯ, ತುಂಬಿದ ಕೊಡವನ್ನು, ಹೊತ್ತು ನಿಂತಿರುವ ಆ ಬಾಲೆಯನ್ನು ನೋಡಿದೆಯಾ? ನನ್ನ ಕವಣೆಗಲ್ಲಿನಿಂದ ಅವಳ ತಲೆಯ ಮೇಲಿನ ಕೊಡಕ್ಕೆ ನಾನು ತೂತು ಕೆಡಹುತ್ತೇನೆ. ತಕ್ಷಣವೇ ನೀನು ನಿನ್ನ ಕವಣೆಯಿಂದ ಹಸಿಮಣ್ಣಿನ ಮುದ್ದೆಯನ್ನು ಬೀಸಿ ಆ ತೂತನ್ನು ಮುಚ್ಚಬೇಕು. ಹಾಗೆ ಮಾಡುವಾಗ ಒಂದು ಹನಿ ನೀರು ಕೂಡ ಕೊಳಗೆ ಬೀಳಕೂಡದು. ಏನೆನ್ನುತ್ತೀ?"

"ಒಪ್ಪಿದೆ; ನಾನದಕ್ಕೆ ಸಿದ್ಧ" ಚಾತುರ್ಯ ನಗುತ್ತ ಉತ್ತರಿಸಿದ.

ಮುಂದಿನ ಒಂದೆರಡು ಕ್ಷಣಗಳಲ್ಲಿಯೇ ಅವರು ತಾವಾಡಿದಂತೆ ಮಾಡಿಬಿಟ್ಟರು. ಆದರೆ ಕೊಡ ಹೊತ್ತ ಆ ಯುವತಿಗೆ ಇವರಿಬ್ಬರು ಮಾಡಿ ಮುಗಿಸಿದುದರ ಸುಳಿವು ಕೂಡ ಹತ್ತಲಿಲ್ಲ.

ಈ ರೀತಿ ಯುವತಿಯೊಬ್ಬಳನ್ನು ಮಂಗ ಚೇಷ್ಟೆಗೆ ಗುರಿಮಾಡಿ ತಮ್ಮಷ್ಟಕ್ಕೆ ತಾವೇ ನಲಿಯುತ್ತಿದ್ದ ಆ ಯುವಕರೀರ್ವರು ಮತ್ತಾರೂ ಆಗಿರಲಿಲ್ಲ, ಮಹೇಂದ್ರಪುರಿಯ

# ಸಾತ್ವಿಕ ರಾಜಕುಮಾರನ ಸತ್ವಪರೀಕ್ಷೆ

ಅರಸುಕುಮಾರ ಮದನಕಾಮ ಹಾಗು ಮಂತ್ರಿಪುತ್ರ ಬುದ್ಧಿಚಾತುರ್ಯ.

ನಾಲ್ಕು ವೇದ, ಆರು ಶಾಸ್ತ್ರ, ಅರವತ್ನಾಲ್ಕು ಕಲೆಗಳು ಹಾಗು ಧರ್ಮಶಾಸ್ತ್ರಗಳನ್ನು ಅಭ್ಯಸಿಸಿದ ಅರಸು ಮಹೇಂದ್ರನು ತನ್ನ ರಾಜ್ಯವನ್ನು ದೇವತೆಗಳೂ ಅಸೂಯೆಪಡುವಷ್ಟು ಉತ್ತಮ ರೀತಿಯಿಂದ ಆಳುತ್ತಿದ್ದನು. ಪ್ರಜೆಗಳನ್ನು ತನ್ನ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದನು. ಅವನಿಗಿಂತಲೂ ಹಿರಿಯ ವಿದ್ವಾಂಸನೆನಿಸಿದ್ದ ಅವನ ಮಂತ್ರಿಯಂತೂ ಪ್ರತಿ ಬೃಹಸ್ಪತಿಯೇ ಆಗಿದ್ದನು.

ಆದರೆ ಬಹುವರುಷಗಳವರೆಗೆ ಅವರಿಬ್ಬರಿಗೂ ಮಕ್ಕಳೇ ಆಗಿರಲಿಲ್ಲ. ಅಂತೆಯೇ ಶಾಸ್ತ್ರಸಮ್ಮತ್ರವಾದ ಸಕಲ ಮಾರ್ಗಗಳಿಂದಲೂ ಅವರು ದೇವರನ್ನೊಲಿಸಿಕೊಳ್ಳಲು ಪ್ರಯತ್ನಿಸಿ ಕೊನೆಗೆ ಸಫಲರಾದರು. ಇಬ್ಬರಿಗೂ ಒಂದೊಂದು ಗಂಡು ಮಗುವನ್ನು ದೇವರು ದಯಪಾಲಿಸಿದನು. ಅನುಪಮ ಸೌಂದರ್ಯವನ್ನು ಹೊಂದಿದ ತನ್ನ ಮಗನಿಗೆ ಅರಸನು ಮದನಕಾಮನೆಂಬ ಅನುರೂಪವಾದ ಹೆಸರನ್ನೇ ಇಟ್ಟನು. ಬುದ್ಧಿವಂತರ ಲಕ್ಷಣಗಳುಳ್ಳ ತನ್ನ ಮಗನಿಗೆ ಮಂತ್ರಿಯು ಬುದ್ಧಿ ಚಾತುರ್ಯ ಎಂದು ನಾಮಕರಣ ಮಾಡಿದನು.

ಮಕ್ಕಳಿಬ್ಬರೂ ತಂದೆ-ತಾಯಿಗಳ ಸಂಪೂರ್ಣ ಪ್ರೀತಿಗೆ ಪಾತ್ರರಾಗಿ ಬೆಳೆದರಲ್ಲದೆ ರಾಜಗುರುವಿನಲ್ಲಿ ಅರಸನಾಗುವವರಿಗೆ ಅವಶ್ಯವಿರುವ ಎಲ್ಲ ವಿಷಯಗಳಲ್ಲೂ ಉಚ್ಚ ಶಿಕ್ಷಣ ಪಡೆದರು. ಶುಕ್ಲಪಕ್ಷದ ಚಂದ್ರನಂತೆ ಬೆಳೆದ ಅವರ ಮದುವೆಯೂ ಶ್ರೇಷ್ಠ ಕನ್ಯೆಯರೊಂದಿಗೆ ಆಗಿತ್ತು.

ಮದನ ಹಾಗು ಚಾತುರ್ಯರ ಪರಸ್ಪರ ಮೈತ್ರಿಯೂ ಅಗಾಧವಾದುದಿತ್ತು. ರಾಜಕುಮಾರನು ತನ್ನ ಮಿತ್ರನಲ್ಲದೆ ಒಡೆಯನೂ ಹೌದೆಂಬುದನ್ನು ಚಾತುರ್ಯನು ಮರೆತಿರಲಿಲ್ಲ. ಹೊರಗಿರುವಾಗ ಕ್ಷಣವೂ ಬಿಟ್ಟಿರುತ್ತಿರಲಿಲ್ಲ.

ಅವರು ಅಂದು ಮಂಗಚೇಷ್ಟೆ ಮಾಡುತ್ತ ಹೊಳೆಯ ದಂಡೆಯ ಮೇಲೆ ನಲಿದಾಡುತ್ತಿರುವಾಗ ಹಗಲು ಸುಮಾರು ಒಂಭತ್ತು ಗಂಟೆಯಾಗಿರಬಹುದು. ಮಹೇಂದ್ರಪುರಿಯ ಮಹಿಳೆಯರೆಲ್ಲ ಸ್ನಾನಕ್ಕೆ, ಬಟ್ಟೆ ಒಗೆಯುವುದಕ್ಕೆ ಹಾಗೂ, ನೀರು ತುಂಬಿಕೊಳ್ಳಲಿಕ್ಕೆ ಅಲ್ಲಿಗೆಯೇ ಬರುವುದು ವಾಡಿಕೆ. ಮದನ ಹಾಗು ಚಾತುರ್ಯರು ಮಧ್ಯಾಹ್ನದೂಟದ ವೇಳೆಯವರೆಗೂ ಅಲ್ಲಿಯೇ ಹೊತ್ತು ಕಳೆಯುತ್ತಿದ್ದರು.

ಆದರೆ ಆ ದಿನ ಅದೇಕೋ ಚಾತುರ್ಯನಿಗೆ ಬೇಗನೇ ಹಸಿವಾಗಿರಬೇಕು. “ಮಿತ್ರಾ, ಇವೊತ್ತು ನನಗೆ ಹಸಿವೆ ಬಹಳವೆನಿಸುತ್ತಿದೆ. ನಾವು ಕೂಡಲೆ ಅರಮನೆಗೆ ತಿರುಗೋಣ,” ಎಂದವನು ಮದನನಿಗೆ ಹೇಳಿದನು.

“ಅದೇಕೆ? ಇನ್ನೂ ಒಂಭತ್ತು ಗಂಟೆ ಕೂಡ ಆಗಿಲ್ಲ; ಈಗಾಗಲೇ ನಿನಗೆ ಹಸಿವೆಯೇ? ನಿನ್ನ ಹೊಟ್ಟೆಯಲ್ಲಿ ಹೆಗ್ಗಣವೇನಾದರೂ ಹೊಕ್ಕಿದೆಯೆ?” ಎಂದು ರಾಜಕುಮಾರನು ನಗಲಾರಂಭಿಸಿದನು, “ಇನ್ನು ತುಸು ಸಮಯ ಉಪವಾಸವಿದ್ದರೆ ನೀನೇನೂ ಸಾಯುವುದಿಲ್ಲ.”

“ಕ್ಷಮಿಸು, ನನಗಂತೂ ತಡೆದುಕೊಳ್ಳುವುದಸಾಧ್ಯ. ನಾನು ಮನೆಗೆ ಹೊಗಲೇ ಬೇಕು.”

"ಹೋಗಲೇಬೇಕಾದರೆ ಹೋಗು, ನೀನು ಬರುವವರೆಗೆ ನಾನಿಲ್ಲಿಯೇ ಕುಳಿತಿರುವೆ."

"ನೀನೊಬ್ಬನೇ ಇದ್ದರೆ ನಿನಗೆ ಅಪಾಯ ವಿಲ್ಲವಷ್ಟೇ?" ಮಂತ್ರಿಕುಮಾರನು ಕೇಳಿದನು.

"ಅದರ ಚಿಂತೆ ನಿನಗೆ ಬೇಡ."

ಚಾತುರ್ಯನೇನೋ ರಾಜಕುಮಾರನನ್ನು ಅಲ್ಲಿಯೇ ಬಿಟ್ಟು ಹೊರಟನು. ಆದರೆ ತನ್ನ ಮಿತ್ರನ ಸುರಕ್ಷಿತತೆಯ ಚಿಂತೆ ಮಾತ್ರ ಅವನನ್ನು ಬಿಡಲಿಲ್ಲ. ಹೊರಗೆ ಅವನೆಂದೂ ಈ ರೀತಿ ರಾಜಕುಮಾರನನ್ನೊಬ್ಬನನ್ನೇ ಬಿಟ್ಟಿರಲಿಲ್ಲ. ರಾಜಕುಮಾರನ ಸಂರಕ್ಷಣೆಯ ಹೊಣೆ ತನ್ನದೆಂದೇ ಅವನು ನಂಬಿದಂತಿತ್ತು. ಅಂತೆಯೆ ಅವನು ಮನೆಯೆಡೆಗೆ ನಡೆದಿದ್ದರೂ ಕ್ಷಣಕ್ಷಣಕ್ಕೆ ಹಿಂತಿರುಗಿ ತನ್ನ ಮಿತ್ರನನ್ನೇ ನೋಡುತ್ತಿದ್ದನು. ಆದರೂ ತನ್ನ ಊಟವನ್ನು ಬೇಗನೆ ಮುಗಿಸಿಕೊಂಡು ಮರಳಬೇಕೆಂದು ಮನದಲ್ಲಿಯೇ ನಿರ್ಧರಿಸಿಕೊಂಡನು.

ಇವರಿಬ್ಬರೂ ರಾಜಗುರುವಿನಲ್ಲಿ ಅಭ್ಯಾಸಮಾಡುತ್ತಿದ್ದರಷ್ಟೆ. ಗುರುವಿಗೆ ತುಂಬುಜವ್ವನೆಯಾದ ಮಗಳೊಬ್ಬಳಿದ್ದಳು. ರಾಜಕುಮಾರ ಮದನಕಾಮನ ರೂಪದಿಂದ ಪೂರ್ಣ ಮೋಹಿತಳಾಗಿದ್ದ ಅವಳಿಗೆ ಅವನೊಬ್ಬನನ್ನೇ ಸಂಧಿಸುವುದೇ ಅದುವರೆಗೆ ಸಾಧ್ಯವಾಗಿರಲಿಲ್ಲ. ಚಾತುರ್ಯ ಪ್ರತಿಕ್ಷಣವೂ ರಾಜಕುಮಾರನೊಂದಿಗಿರುವುದೇ ಅವಳ ದಾರಿಯಲ್ಲಿ ಅಡ್ಡಗಲ್ಲಾಗಿತ್ತು. ಅಂತೆಯೇ ಆಕೆ ಅವನನ್ನೊಬ್ಬನನ್ನೇ ಕಾಣುವ ಸಂದರ್ಭಕ್ಕಾಗಿ ಹಾತೊರೆಯುತ್ತಿದ್ದಳು.

ಅಂದು ಹೊಳೆಯ ದಂಡೆಯ ಮೇಲೆ ರಾಜಕುಮಾರನೊಬ್ಬನೇ ಇದ್ದಿರುವದಾಗಿ ಅದು ಹೇಗೋ ಅವಳಿಗೆ ತಿಳಿದುಬಂದಾಗ ಅವಳ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಲಗುಬಗೆಯಿಂದ ತಂದೆಯ ದೇವತಾರ್ಚನೆಗೆ ಬೇಕಾಗುವ ವಸ್ತುಗಳನ್ನೆಲ್ಲ ತಂದು ಹರಹಿಟ್ಟು, ತನ್ನನ್ನು ಸಿಂಗರಿಸಿಕೊಂಡು, ಬಗಲಲ್ಲೊಂದು ಬಿಂದಿಗೆ ಇಟ್ಟುಕೊಂಡು ಹೊಳೆಯೆಡೆಗೆ ನಡೆದಳು.

ಬಿಂದಿಗೆಯನ್ನು ದಂಡೆಯ ಮೇಲಿರಿಸಿ ರಾಜಕುಮಾರನನ್ನವಳು ಶೋಧಿಸಬೇಕಾಯಿತು. ಅವನು ಏಕಾಂತ ಸ್ಥಳವೊಂದರಲ್ಲಿ ಮರದ ನೆರಳಲ್ಲಿ ನಿಶ್ಚಿಂತನಾಗಿ ಪವಡಿಸಿದ್ದನು. ಅವಳು ಬಂದುದನ್ನವನು ಗಮನಿಸಲೇ ಇಲ್ಲವಾದುದರಿಂದ ಆಕೆ ಹಿಂದಿನಿಂದ ಅವನ ಭುಜ ತಟ್ಟಿ, ತುಂಟ ನಗೆ ಬೀರಿ, "ಇದೇನು ರಾಜಕುಮಾರರು ಇಂದೊಬ್ಬರೇ ಇರುವವರಲ್ಲ! ಅವರ ಮಿತ್ರ ಇಂದೇನು ಜಗಳ ಕಾದು ಹೊರಟು ಹೋಗಿದ್ದಾನೆಯೆ?" ಎಂದು ಕೇಳಿದಳು.

"ಹಾಗೇನೂ ಇಲ್ಲ, ಅವನಿಗೆ ಹಸಿವೆನಿಸಿದ್ದರಿಂದ ಉಂಡುಬರಲು ಮನೆಗೆ ಹೋಗಿದ್ದಾನೆ. ಅವನ ಬರವನ್ನೇ ಎದುರುನೋಡುತ್ತ ಕುಳಿತಿದ್ದೇನೆ," ಎಂದು ಅವನುತ್ತರಿಸಿದನು.

"ನಿನ್ನ ಗೆಳೆಯನೊಂದಿಗೆ ವರ್ತಿಸುವಾಗ ನೀನು ಇಷ್ಟೊಂದು ತಿಳಿವಳಿಕೆಯನ್ನು ತೋರುತ್ತೀಯಲ್ಲ ಆದರೆ ಗುರುಪುತ್ರಿಯನ್ನು ಅರಿತುಕೊಳ್ಳುವಲ್ಲಿ ಅದರ ಹತ್ತರೊಂದು ಭಾಗದಷ್ಟು ಕೂಡ ತಿಳಿವಳಿಕೆಯನ್ನು ನೀನು ತೋರ್ಪಡಿಸುವದಿಲ್ಲವಲ್ಲ, ಎಂದೇ ನನಗೆ ಆಶ್ಚರ್ಯವಾಗತೊಡಗಿದೆ."

"ನಾನು ಅಷ್ಟೊಂದು ಕಟುಕನೆಂದು ನನಗನಿಸುವುದಿಲ್ಲ, ಅಲ್ಲದೆ ನನ್ನಿಂದ ನಿನಗಾಗಬೇಕಾದುದಾದರೂ ಏನಿದೆ?"

"ಓ! ಈ ಪುರುಷರೆಲ್ಲ ಹೀಗೇ! ಸ್ತ್ರೀ ಅವರಿಗೆ ಅರ್ಥವಾಗುವದೇ ಇಲ್ಲ," ಎನ್ನುತ್ತ ಅವಳು ರಾಜಕುಮಾರನ ಬದಿಯಲ್ಲಿಯೆ ಆಕರ್ಷಕ ರೀತಿಯಲ್ಲಿ ಕುಳಿತು, ತನ್ನ ದೇಹವನ್ನು ಅವನ ತೊಡೆಗಳ ಮೇಲೆ ಚೆಲ್ಲಿ, ಅವನ ಮುಖವನ್ನು ತನ್ನ ಮುಖದೆಡೆಗೆಳೆದಳು.

ಆದರೆ ಅವಳ ಈ ಅತ್ಯಂತ ಅನಪೇಕ್ಷಿತ ವರ್ತನೆಯಿಂದ ರಾಜಕುಮಾರನಿಗೆ ಮಾತ್ರ ಆಘಾತವೇ ಆಯಿತು. ಯಾವುದೋ ಭಯ

ಅವನನ್ನಾವರಿಸಿ ಹಾವು ಕಂಡವರಂತೆ ಅವನ ಮೈಯೆಲ್ಲ ನಡುಗತೊಡಗಿತು. ಅವಳನ್ನು ತಳ್ಳಿ ಅವನು ಎದ್ದು ನಿಂತನು.

ಮನಸ್ಸು ಸ್ತಿಮಿತಕ್ಕೆ ಬಂದಮೇಲೆ ಅವನು ತನ್ನ ಗುರು ಪುತ್ರಿಯನ್ನುದ್ದೇಶಿಸಿ,

"ಅಮ್ಮಾ ನೀನು ನನ್ನ ಗುರುವಿನ ಪುತ್ರಿ. ಅಂತೆಯೇ ಅಶಿಕ್ಷಿತಳಂತೆ ವರ್ತಿಸುವುದು ನಿನಗೆ ಶೋಭಿಸದು. ಗುರುವು ತಂದೆಯ ಸಮಾನನೆಂದು ಮನು ಹೇಳಿರುವುದು ನಿನಗೆ ತಿಳಿಯದೆ? ಹಾಗೆಂದಮೇಲೆ ನೀನು ನನ್ನ



ಸೋದರಿಯಷ್ಟೆ? ಇಂಥ ಹುಚ್ಚು ವರ್ತನೆ ನಿನಗೆಷ್ಟೂ ಸಲ್ಲದು. ಇನ್ನು ಮೇಲೆ ಹೀಗೆ ಮಾಡಬೇಡ," ಎಂದು ನುಡಿದನು.

"ತನ್ನ ಉತ್ಕಟ ಇಚ್ಛೆಯನ್ನು ತಾಳಲಾರದೆ ತನ್ನನ್ನು ತಾನಾಗಿಯೇ ಅರ್ಪಿಸಲು ಬಂದ ಹೆಣ್ಣನ್ನು ನಿರಾಕರಿಸಕೂಡದೆಂದು ಅದೇ ಮನುವೇ ನಿನಗೆ ಹೇಳಲಿಲ್ಲವೇ?"

"ಆದರದು ಸೋದರಿಯ ವಿಷಯಕ್ಕೆ ಅನ್ವಯಿಸುವದಿಲ್ಲ. ನಾನು ನಿನ್ನನ್ನು ತಂಗಿಯೆಂದೇ ತಿಳಿದಿದ್ದೇನಾದ್ದರಿಂದ ಎಂಥ ಪ್ರಸಂಗದಲ್ಲೂ ನಿನ್ನ ಈ ಹುಚ್ಚು ಇಚ್ಛೆಯನ್ನು ಈಡೇರಿಸುವುದು ಸಾಧ್ಯವಿಲ್ಲ; ಬುದ್ಧಿವಂತೆಯಾಗಿ ಮರಳಿ ಹೋಗು."

ಕೆಣಕಿದ ಹುಲಿಯಂತೆ ತಪ್ತಳಾದ ಗುರುಪುತ್ರಿ ಹಲ್ಲುಕಚ್ಚಿ, "ರಾಜಕುಮಾರ, ನೀನು ಬುದ್ಧಿವಂತನೆಂದೂ ನಾನಿದುವರೆಗೂ ತಿಳಿದಿದ್ದೆ. ಆದರೆ ನೀನೊಂದು ಪೆದ್ದನೆಂದು ನನಗೀಗ ತಿಳಿಯಿತು. ನನ್ನ ಇಚ್ಛೆಯನ್ನು ನೀನೀಗ ನಿರಾಕರಿಸಿದ್ದೀ ಇನ್ನರ್ಧ ತಾಸಿನಲ್ಲಿಯೇ ನಿನ್ನ ರುಂಡ ನೆಲಕ್ಕುರುಳುವಂತೆ ಮಾಡುತ್ತೇನೆ!" ಎಂದು ಅಬ್ಬರಿಸಿದಳು.

ಇಷ್ಟು ನುಡಿದು ತನ್ನ ಸೀರೆಯನ್ನು ಎತ್ತೆತ್ತಲೋ ಎಳೆದಾಡಿಕೊಂಡು ಕೈಗಳನ್ನು ನೆಲಕ್ಕೆ ಜಜ್ಜಿ ಬಳೆಗಳನ್ನೊಡೆದುಕೊಂಡಳು. ಅನಂತರ ಬಳೆಯ ತುಂಡುಗಳಿಂದ ತನ್ನೆಲ್ಲ ಮೈಯನ್ನು ಪರಚಿಕೊಂಡು ಚೀರುತ್ತ ಮನೆಗೆ ಓಡಿದಳು.

(ಮುಂದುವರಿಯುವುದು)

---

## ಅಜಿತನ ಸಾಹಸ

ಅಜಿತ ಕಾಲೇಜಿನಲ್ಲಿ ಓದುತ್ತಿರುವ ಬಿಸಿರಕ್ತದ ಯುವಕ. ದೂರದ ಪಟ್ಟಣಕ್ಕೆ ಮಿತ್ರರೊಂದಿಗೆ ಮೋಟಾರ್ ಬೈಕ್‌ನಲ್ಲಿ ಪ್ರವಾಸ ಹೊರಟಿದ್ದ. ಇತ್ತೀಚಿನ ದಿನಗಳಲ್ಲಿ ನಗರದಲ್ಲಿ ನಿಮಿಷ ನಿಮಿಷಕ್ಕೂ ನಡೆಯುವ ಅಪಘಾತ, ಸುಲಿಗೆ ಇತ್ಯಾದಿ ಅವಾಂತರಗಳ ಸುದ್ದಿಗಳಿಂದ ಭಯಪಟ್ಟ ಅಪ್ಪ ಅಮ್ಮ ವಿರೋಧಿಸಿದರೂ, ಅವರನ್ನು ಒತಾಯದಿಂದಲೇ ಒಪ್ಪಿಸಿದ್ದ.

ಆತ ಪ್ರವಾಸಕ್ಕೆ ಹೊರಟ ಮಾರನೇ ದಿನವೇ ಮನೆಗೆ ಬಂತು ಅಜಿತನ ಮರಣ ವಾರ್ತೆ- ಟೆಲಿಗ್ರಾಂ ಮೂಲಕ.

ಅಪ್ಪ-ಅಮ್ಮ ಗಾಬರಿಪಟ್ಟು, ದುಃಖಿಸುತ್ತಾ ಅಜಿತ ಉಳಿದುಕೊಳ್ಳುತ್ತೇನೆಂದು ಹೇಳಿದಲ್ಲಿಗೆ ಹೋಗಿ ನೋಡಿದರೆ, ಹೊರಗೆ 'ಲಾಂಜ್'ನಲ್ಲಿ ಕುಳಿತು, ತನ್ನ ವಿಳಾಸವಿದ್ದ ಪರ್ಸ್ ಪಿಕ್ ಪಾಕೆಟ್ ಆದದ್ದನ್ನು ಹೇಳುತ್ತಿದ್ದ.

• ಶ್ಯಾಮಲಾ ನವಕಾನ



## ನಿಮಗೇಕೆ ಯೋಚನೆ

ಚರ್ಚಿಲ್ಲರು ಯುವಕರಾಗಿದ್ದಾಗ ಹುಲುಸು ಮೀಸೆ ಬಿಟ್ಟಿದ್ದರಂತೆ. ಒಂದು ಸಲ ಯುವತಿಯೊಬ್ಬಳು, "ಮಿಸ್ಟರ್ ಚರ್ಚಿಲ್, ನಿಮ್ಮ ಮೀಸೆ ಮತ್ತು ನಿಮ್ಮ ರಾಜಕೀಯ ಎರಡೂ ನನಗೆ ಸೇರುವುದಿಲ್ಲ," ಎಂದಳಂತೆ.

ಈ ಮಾತಿಗೆ ಚರ್ಚಿಲ್ಲರು, "ಆ ಬಗ್ಗೆ ನಿಮಗೇಕೆ ಯೋಚನೆ ಮೇಡಂ? ನಿಮಗೆ ಅವೆರಡರ ಸಂಪರ್ಕವೂ ಬರುವ ಸಂಭವ ಇಲ್ಲವಲ್ಲ," ಎಂದರಂತೆ.

• ಸಂಗ್ರಹ: ಶಂಕರಗೌಡ ವೈ. ಪಾಟೀಲ

# ಉಸುಕಿಗೂ ಉಬ್ಬಸವುಂಟೆ?



• ಚೇತಸಾ ಸಣ್ಣಗದ್ದೆ

ಕಾಡಿನಲ್ಲಿ ಜಿಂಕೆಯೊಂದನ್ನು ಹಿಂಬಾಲಿಸುತ್ತ ಬೇಟೆಗಾರರ ತಂಡವೊಂದು ಉಸುಕಿನ ಬಯಲು ಭೂಮಿಗೆ ಬಂದಾಗ ವಿಚಿತ್ರ ದೃಶ್ಯವೊಂದನ್ನು ಕಂಡು ಬೆರಗಾದರು. ಒಣ ಉಸುಕಿನಲ್ಲಿ ಮನುಷ್ಯನೊಬ್ಬನ ರುಂಡ ಬಿದ್ದಿತ್ತು! ರುಂಡವನ್ನಷ್ಟೇ ನೀಟಾಗಿ ಕತ್ತರಿಸಿ ಉಸುಕಿನ ಮೇಲೆ ಇರಿಸಿದಂತೆ ಕಾಣುತ್ತಿತ್ತು. ಬೇಟೆಗಾರರು ಕುತೂಹಲದಿಂದ ರುಂಡದ ಬಳಿಗೆ ಹೊರಟರು. ಕೆಲವು ಹೆಜ್ಜೆ ಹಾಕುತ್ತಿದ್ದಂತೆ ಅವರಿಗೆ ವಾಸ್ತವಿಕತೆಯ ಅರಿವಾಯಿತು. ಬಡಪಾಯಿ ಮನುಷ್ಯನೊಬ್ಬ ಕೊರಳತನಕ ಹೂತುಹೋಗಿದ್ದ. ಅವನ ಕೊರಳತನಕ ಉಸುಕು ನೆಲ ಪೊಳ್ಳಾಗಿದ್ದು ಕೆಳಕ್ಕೆ ಗಟ್ಟಿ ನೆಲವಿತ್ತು. ಏಕಾಕಿಯಾದ ಆತ ಉಸುಕಿನಿಂದ ಹೊರಬರಲಾಗದೆ ಪ್ರಾಣ ಕಳೆದುಕೊಂಡಿದ್ದ.

ಎರಡನೇ ಮಹಾಯುದ್ಧದ ಕೊನೆಯ ದಿನಗಳು. ಇಂಗ್ಲೆಂಡ್ ಹಾಗೂ ಅಮೆರಿಕದ ಸೇನೆಗಳು ಜರ್ಮನಿಯತ್ತ ಮುನ್ನಡೆಯುತ್ತಿದ್ದವು. ಒಂದು ದಿನ ಮಿತ್ರರಾಷ್ಟ್ರಗಳ ಮೋಟಾರುಗಳು ರಸ್ತೆಯಲ್ಲಿ ಸಾಗುತ್ತಿದ್ದಾಗ ಜರ್ಮನ್ ವಿಮಾನಗಳು ಬಾಂಬು ಹಾಕಲಾರಂಭಿಸಿದವು. ಎಲ್ಲರಿಗಿಂತ ಮುಂದಿದ್ದ ಮೋಟಾರು ಚಾಲಕ ತನ್ನ ಗಾಡಿಯನ್ನು ರಸ್ತೆಬಿಟ್ಟು ಮೈದಾನದತ್ತ ಓಡಿಸಿದ. ಆದರೆ ಸ್ವಲ್ಪದೂರ ಹೋಗುತ್ತಲೆ ಗಾಡಿಯ ಚಕ್ರಗಳು ಉಸುಕಿನಲ್ಲಿ ಹೂತುಹೋದವು. ಆತ ಮುಂದುವರಿಯದಾದ. ಅಕ್ಕಪಕ್ಕದ ಉಸುಕಿನಿಂದ ವಿಚಿತ್ರವಾದ ಸೂಂ... ಸೂಂ... ಎಂಬ ಉಬ್ಬಸದ ಧ್ವನಿ ಹೊರಡುತ್ತಿತ್ತು. ನೆಲವೂ ನಿಧಾನವಾಗಿ ಅದುರುತ್ತಿತ್ತು. ಗಾಡಿ ಉಸುಕಿನಲ್ಲಿ ಕೆಳಗಿಳಿಯುತ್ತಲೇ ಇತ್ತು. ಆತ ಚುರುಕಾಗಿ ಕಿಟಕಿಯ ಮೂಲಕ ಗಾಡಿಯ ಮೇಲ್ಭಾಗಕ್ಕೆ ಬಂದ. ತಡಮಾಡದೆ ಜಿಗಿದು ರಸ್ತೆಕಡೆ ಓಡತೊಡಗಿದ. ಕಾಲುಗಳು ಉಸುಕಿನಲ್ಲಿ ಸಿಕ್ಕಿಕೊಳ್ಳುತ್ತಿದ್ದರೂ ಚಲಿಸಿದ ವೇಗದಿಂದಾಗಿ ಅವು ಆಳವಾಗಿ ಹೂತುಹೋಗಲಿಲ್ಲ. ಅಂತೂ ಹೇಗುಹೇಗೋ ರಸ್ತೆ ಸೇರಿದ. ಕೆಲವು ಸಮಯದ ಬಳಿಕ ಬಾಂಬು ದಾಳಿ ನಿಂತಿತು. ಚಾಲಕ ಸುರಕ್ಷಿತವಾಗಿ ಪಾರಾದ. ಆದರೆ ಅವನ ಮೋಟಾರು ಗಾಡಿ ಮಾತ್ರ ಉಸುಕಿನೊಳಗೇ ಮುಳುಗಿ ಕಣ್ಮರೆಯಾಗಿತ್ತು!

ಕೆಲವೇ ವರ್ಷಗಳ ಹಿಂದೆ ಉತ್ತರ ಭಾರತದಲ್ಲಿ ನಡೆದ ಘಟನೆಯೊಂದು ಹೀಗಿದೆ: ಹಳ್ಳಿಯ ಇಬ್ಬರು ಯುವಕರು ಸರೋವರದ ಅಕ್ಕಪಕ್ಕದಲ್ಲಿ ದೊರೆಯುತ್ತಿದ್ದ ವನಸ್ಪತಿಗಳನ್ನು ಹುಡುಕುತ್ತಾ ಅಲೆ

## ಬಿಳಿ ಕಲೆಗಳು

ಭಾರತದ ಪ್ರತಿಯೊಂದು ಭಾಗದಿಂದ ಸಾವಿರಾರು ಮಂದಿ ರೋಗಿಗಳು ನಮ್ಮ ಚಿಕಿತ್ಸಾ ಕ್ರಮದಿಂದ ಸಂಪೂರ್ಣ ಗುಣಮುಖರಾಗಿದ್ದಾರೆ. ಹಲವಾರು ವರ್ಷಗಳ ಪರಿಶ್ರಮದ ಸಂಶೋಧನೆಯ ಬಳಿಕ ಈ ಔಷಧಿಯನ್ನು ಯಶಸ್ವಿಯಾಗಿ ತಯಾರಿಸಲಾಗಿದೆ. ಈ ಔಷಧಿಯು ಅದೆಷ್ಟು ಪರಿಣಾಮಕಾರಿ ಹಾಗೂ ತೀವ್ರತೆಯದು ಎಂದರೆ, ನಮ್ಮ ಔಷಧಿಯನ್ನು ಹಚ್ಚಿಕೊಂಡ ಬಳಿಕ ಹದಿನೈದು ಗಂಟೆಯೊಳಗೆ ಬಿಳಿ ಕಲೆಗಳ ಬಣ್ಣ ಬದಲಾಗತೊಡಗುತ್ತದೆ. ತದನಂತರ ಇಪ್ಪತ್ತೊಂದು ದಿನದೊಳಗೆ ಆಂತರಿಕವಾಗಿ ಅದು ಗುಣ ಹೊಂದುತ್ತದೆ. ಔಷಧಿಯಿಂದ ಕಾಯಿಲೆ ಖಂಡಿತ ವಾಸಿಯಾಗುತ್ತದೆ. ನೀವು ನಮ್ಮಿಂದ 7 ದಿನಗಳ ಔಷಧಿಯನ್ನು ಉಚಿತವಾಗಿ ಪಡೆಯಬಹುದು. ನೀವು ಬೇರೆಲ್ಲಾದರೂ ಚಿಕಿತ್ಸೆ ಪಡೆದು ಗುಣಹೊಂದದೆ ನಿರಾಶರಾಗಿದ್ದರೆ ನಮ್ಮ ಔಷಧಿಯನ್ನು ದಯವಿಟ್ಟು ಪರೀಕ್ಷಿಸಿರಿ. ರೋಗಿಯು ಪತ್ರದಲ್ಲಿ ವಯಸ್ಸು, ಸ್ಥಳ ಮತ್ತು ವ್ಯಾಧಿಯ ಅವಧಿಯನ್ನು ಬರೆಯಬೇಕು.

**RANI AYURVED** (HAW92)

**P.O. Katri Sarai (GAYA)**

## ತಲೆಗೂದಲು

ಆಯುರ್ವೇದ ಔಷಧಿಯು ತಲೆಗೂದಲು ಅಕಾಲದಲ್ಲಿ ಬಿಳಿಯಾಗುವುದನ್ನು ತಡೆಗಟ್ಟುತ್ತದೆ. ಬಿಳಿಗೂದಲು ಕಪ್ಪಾಗಿ ಪರಿವರ್ತನೆಗೊಂಡು ತಲೆಗೂದಲ ಉದುರುವಿಕೆ ನಿಂತುಹೋಗುತ್ತದೆ. ಔಷಧಿಗಾಗಿ ಕೂಡಲೇ ಬರೆಯಿರಿ. ಒಂದು ಸೀಸೆಗೆ ರೂ. 35/- 3 ಸೀಸೆಗಳಿಗೆ ರೂ. 90/-

**RANI AYURVED** (HAT92)

**P.O. Katri Sarai (GAYA)**

## ಗುಪ್ತರೋಗಗಳ ಚಿಕಿತ್ಸೆಗಾಗಿ ಉಚಿತ ಔಷಧಿ

ಪುರುಷ/ಮಹಿಳೆ ನೀವು ಯಾರಾದರೂ ಯಾವುದೇ ತರಹದ ಲೈಂಗಿಕ ರೋಗಗಳಾದಂತಹ ನೈಸರ್ಗಿಕ ಸ್ಖಲನ, ಶೀಘ್ರ ಸ್ಖಲನ, ನಿಃಶಕ್ತಿ, ನಪುಂಸಕತ್ವ, ಮೇಹರೋಗ ಮುಂತಾದವು ಮತ್ತು ಮಹಿಳೆಯರ ಬಿಳಿಸೆರಗು, ಬಂಜೆತನ, ಮುಟ್ಟಿನ ತೊಂದರೆ, ಬೆನ್ನು ನೋವು ಮುಂತಾದವುಗಳ ಬಗ್ಗೆ ಚಿಂತಿಸಬೇಡಿ. ನಮ್ಮ ಹೊಸ ಯೋಜನೆಯನ್ವಯ 7 ದಿನಗಳವರೆಗೆ ಚಿಕಿತ್ಸೆಗಾಗಿ ಉಚಿತ ಔಷಧಿ ಪಡೆಯಿರಿ. ನಿಮ್ಮ ರೋಗದ ವಿವರಗಳನ್ನು ಕಳಿಸಿ ನಿಮಗೇನೆ ಲಾಭದಾಯಕ. ತೀವ್ರ ಬರೆಯಿರಿ.

**RANI AYURVED** (HAG)

**P.O. Katri Sarai (GAYA)**

ಯುತ್ತಿದ್ದರು. ಅವರ ಬೆನ್ನ ಮೇಲಿನ ಚೀಲಗಳಲ್ಲಿ ಸಾಮಾನು ತುಂಬಿತ್ತು. ಅಲೆದಾಡುತ್ತ ಅವರು ಬತ್ತಿದ ನದಿಯೊಂದರ ದಡಕ್ಕೆ ಬಂದರು. ವಿಶಾಲವಾದ ನದಿ. ಆದರೆ ಮಳೆಗಾಲದಲ್ಲಿ ಮಾತ್ರ ನೀರು. ಬೇಸಿಗೆಯಾದ್ದರಿಂದ ಆಗ ಬಿಸಿಲಿನಿಂದ ಸುಡುತ್ತಿರುವ ನೆಲ. ಮುಂದೆ ಸಾಗುತ್ತಿದ್ದ ಹುಡುಗ ಒಮ್ಮೆಲೇ ಬೆಚ್ಚಿದ. ಉಸುಕಿನಲ್ಲಿ ಕಾಲು ಸಿಕ್ಕಿಬೀಳುತ್ತಿತ್ತು. ಸಹಾಯಕ್ಕಾಗಿ ಕೂಗಿಕೊಂಡ. ಗಟ್ಟಿ ನೆಲ ಸಿಕ್ಕೀತೆಂದು ಆತ ಹಿಂದಿರುಗುವ ಬದಲು ಮುಂದಡಿಯಿಟ್ಟದ್ದೆ ದೊಡ್ಡ ತಪ್ಪಾಗಿತ್ತು. ಮುಂದೆ ಮುಂದೆ ಹೋದಂತೆ ಕುಸಿಯುತ್ತಾ ಹೋದ.

ಈಗ ಕಾಲನ್ನು ಹೊರತೆಗೆಯುವುದು ಕಷ್ಟವಾಯಿತು. ಒಂದನ್ನೆತ್ತುತ್ತಲೆ ಇನ್ನೊಂದು ಇನ್ನೂ ಆಳಕ್ಕೆ ಹೂತುಹೋಗುತ್ತಿತ್ತು. ಭಯದಿಂದ ಆತ ತನ್ನನ್ನು ರಕ್ಷಿಸುವಂತೆ ಕೂಗಿಕೊಂಡಿದ್ದನ್ನು ನೋಡಿ ಇನ್ನೊಬ್ಬ ಗಾಬರಿಯಾದ. ಆದರೆ ತಾನು ಅವನ ಬಳಿ ಹೋದರೆ ಪ್ರಾಣ ಕಳೆದುಕೊಳ್ಳುವೆನೆಂದು ಕಾಡಿನತ್ತ ಓಡಿ, ಉದ್ದನೆಯ ಕೊಂಬೆಯೊಂದನ್ನು ತಂದು, ಗೆಳೆಯನನ್ನು ರಕ್ಷಿಸಬೇಕೆಂದು ಧಾವಿಸಿದ. ಆದರೆ ಈತನ ಸ್ಥಿತಿ ಚಿಂತಾಜನಕವಾಗಿತ್ತು. ಆತ್ಮರಕ್ಷಣೆಯ ಎಲ್ಲ ಪ್ರಯತ್ನಗಳೂ ವಿಫಲವಾಗಿದ್ದವು. ಗಾಬರಿಯಲ್ಲಿ ಆತ ಬೆನ್ನಮೇಲಿನ ಭಾರೀ ಚೀಲಗಳನ್ನು ದೂರ ಎಸೆಯಲು ಮರೆತಿದ್ದ. ಹೆದರಿ ಜೋರು ಜೋರಾಗಿ ಕೈ ಕಾಲು ಬಡಿದಾಗಲೆಲ್ಲ ಇನ್ನಷ್ಟು ಒಳಗೆ ಇಳಿದುಹೋಗುತ್ತಿದ್ದ. ಚೀಲ ಬಿಚ್ಚುವ ಪ್ರಯತ್ನದಲ್ಲಿ ಕೊರಳವರೆಗೂ ಕಂತಿ ಹೋದ. ಸ್ವಲ್ಪ ಹೊತ್ತಿನಲ್ಲೆ ಉಸುಕು ಅವನ ಕಣ್ಣುಗಳನ್ನು ಮುಚ್ಚಿಬಿಟ್ಟಿತು. ಆತನ ಬಾಯಿಯಿಂದ ಅಸ್ಪಷ್ಟವಾದ ಆರ್ತನಾದ ಹೊರಟಿತು. ತುಸು ಹೊತ್ತಿನವರೆಗೆ ಒಂದು ಕೈ ಮಾತ್ರ ಸಹಾಯಕ್ಕಾಗಿ ಅಲ್ಲಾಡುತ್ತಿತ್ತು. ಆ ಬಳಿಕ ಅದೂ ಉಸುಕಿನಲ್ಲಿ ಮರೆಯಾಯಿತು. ಉಸುಕು ಮೊದಲಿನಂತೆಯೇ ಸಮತಟ್ಟಾಯಿತು. ಸ್ವಲ್ಪ ಸಮಯದ ಮೊದಲು ಅಲ್ಲಿ ಯಾರಾದರೂ ಹೂತು ಹೋಗಿದ್ದರೆಂಬುದರ ಕುರುಹೂ ಉಳಿಯಲಿಲ್ಲ. ಜೊತೆಗೆ ಹೋದ ಗೆಳೆಯ ಭಾರವಾದ ಹೃದಯದಿಂದ ಹೊರಟುಹೋದ.

ಇಂಥ ಉಪದ್ರವದ ಉಸುಕು ಪ್ರಕೃತಿಯ

ಭೀಕರ ಚಮತ್ಕಾರಗಳಲ್ಲೊಂದು. ಇದರಲ್ಲಿ ಮನುಷ್ಯರಷ್ಟೇ ಅಲ್ಲ, ಆನೆಯಂಥ ದೊಡ್ಡ ದೊಡ್ಡ ಪ್ರಾಣಿಗಳೂ ಮುಳುಗಿಹೋದದ್ದಿದೆ. ಪ್ರಪಂಚದ ಹಲವು ಭಾಗಗಳಲ್ಲಿ ಇದು ಕಂಡುಬರುತ್ತದೆ. ನಮ್ಮ ಮಲೆನಾಡಿನಲ್ಲಿಯೂ ಮಳೆಗಾಲದಲ್ಲಿ ಇದರ ಹಾವಳಿ ಬಹಳ.

ಹುಲ್ಲು ಕೊಯ್ಯಲು ಹೋದ ಹುಡುಗ ಮನೆಗೆ ಮರಳಲೇ ಇಲ್ಲ. ಬೆಳಿಗ್ಗೆ ಮೇಯಲು ಬಿಟ್ಟ ಹಸು ಎರಡು ದಿನವಾದರೂ ಪತ್ತೆಯಾಗಲಿಲ್ಲ.... ಇತ್ಯಾದಿ ಸಂಗತಿಗಳು ಸಾಮಾನ್ಯವಾಗಿ ಕೇಳಿಬರುತ್ತವೆ. ಇದು ಯಾರೋ ದುಷ್ಕರ್ಮಿಗಳು ನಡೆಸಿದ ಕುತಂತ್ರವಾಗಲಿ ನೆರೆಯಲ್ಲಿ ತೇಲಿ ಹೋದದ್ದಾಗಲಿ ಆಗಿರದೆ ಎಷ್ಟೋ ಪ್ರಸಂಗಗಳಲ್ಲಿ ಉಸುಕಿನಲ್ಲಿ ಹೂತುಹೋದದ್ದರಿಂದ ಆಗಿರುತ್ತದೆ. ಆಗ ಹಳ್ಳಿಯ ಜನ ನೆಲ ನುಂಗಿ ಬಿಟ್ಟಿತೆಂದೂ ಭೂತಾಯಿಯ ಶಾಪವೆಂದೂ ಗೋಳಿಡುವುದಿದೆ. ಆದರೆ ಇದು ಉಂಟಾಗುವುದು ಉಸುಕಿನ ನೆಲದಲ್ಲಿ ಉಂಟಾಗುವ ನಿರ್ವಾತದಿಂದ.

ಹಿಂದೆ ಬ್ರಿಟಿಷ್ ಸರ್ವೇಯರ್ ಅಧಿಕಾರಿಗಳು ಹಳ್ಳಿಯಲ್ಲಿ ಸಂಚರಿಸುವಾಗ ಇಂಥ ಉಪದ್ರವದ ಉಸುಕಿನಲ್ಲಿ ಸಿಕ್ಕಿ ಬೀಳುತ್ತಿದ್ದುದುಂಟು. ಆಗ ಹತ್ತಿರದ ಹಳ್ಳಿಯವರು ಅವರನ್ನು ಪಾರುಮಾಡಿದ ಸಂಗತಿಗಳು ಇಂದಿಗೂ ಜನಜನಿತವಾಗಿವೆ. ಡಿ. ಬ್ರೂಸ್‌ಫಟ್ ಎಂಬುವರು ಪ್ರಾಗೈತಿಹಾಸಿಕ ಅವಶೇಷಗಳನ್ನು ಮೊತ್ತ ಮೊದಲಿಗೆ ಈ ಉಸುಕಿನಲ್ಲಿಯೇ ಕಂಡರು. ಈ ಉಪದ್ರವದ ಉಸುಕಿನ ಬಗೆಗೆ ನಮ್ಮಲ್ಲಿ ಇನ್ನೂ ಸಾಕಷ್ಟು ಸಂಶೋಧನೆ ಆಗಿಲ್ಲ, ಆದರೆ ಪಾಶ್ಚಿಮಾತ್ಯರು ಈ ವಿಷಯದ ಬಗೆಗೆ ಸಾಕಷ್ಟು ಬೆಳಕು ಚೆಲ್ಲಿದ್ದಾರೆ.

ಉಸುಕಿನ ಉಪದ್ರವ ಸಣ್ಣದಾದ, ದುಂಡಗಾದ ಕಣಗಳಿಂದ ಆಗುತ್ತದೆ ಹಾಗೂ ಉಸುಕಿನ ಕಣಗಳಿಗೆ ಜಿಗುಟಾದ ಎಣ್ಣೆಯಂಥ ಪದಾರ್ಥ ಅಂಟಿಕೊಂಡಿರುವದರಿಂದ ಅವು ಜಾರಿ ಹೋಗಿ ಮೇಲಿದ್ದ ಭಾರವು ಒಳಗೆ ಕುಸಿಯುತ್ತದೆ ಎಂದು ಪಾಶ್ಚಿಮಾತ್ಯರು ಮೊದಲಿಗೆ ಭಾವಿಸಿದ್ದರು. ಆದರೆ ೧೯೪೪-೪೫ರಲ್ಲಿ ಜರ್ಮನಿಯಲ್ಲಿ ನಡೆಸಿದ ಒಂದು ಪ್ರಯೋಗದಿಂದ ಈ ಅಭಿಪ್ರಾಯ ಸರಿಯಲ್ಲವೆನ್ನುವುದು ಕಂಡುಬಂತು. ಆ ಪ್ರಯೋಗದಲ್ಲಿ ಒಂದು ಪೆಟ್ಟಿಗೆಯಲ್ಲಿ ಉಸುಕನ್ನು ತುಂಬಿ, ಮೇಲಿನಿಂದ ನೀರು ಹಾಯಿಸಿ, ಮಗ್ಗುಲು ಮತ್ತು ಬುಡದಲ್ಲಿರುವ ಹರಿಗಳಿಂದ ನೀರನ್ನು ಹೊರಬಿಡಲಾಯಿತು. ಮೇಲ್ಮೈ ಒಣಗಿದಾಗ ಮನುಷ್ಯನಷ್ಟು ಭಾರವಾದ ಗೊಂಬೆಯನ್ನು ಅದರ ಮೇಲಿಟ್ಟರೆ ಅದು ಮುಳುಗದೆ ಹಾಗೆಯೇ ಉಳಿದುಕೊಂಡಿತು. ಆದರೆ ಇದೇ ಉಸುಕಿನಲ್ಲಿ ಬುಡದಿಂದ ನೀರು ಹಾಯಿಸಿ ಮೇಲೆ ಆರಲುಬಿಟ್ಟು ಉಸುಕಿನಲ್ಲಿ ಗೊಂಬೆಯನ್ನು ಇಟ್ಟಾಗ ಅದು ಕುತ್ತಿಗೆಯವರೆಗೆ ಮುಳುಗಿತು. ಇದರಿಂದ ಕೆಲವು ಅನುಮಾನವನ್ನು ಶಾಸ್ತ್ರಜ್ಞರು ಸಿದ್ಧಪಡಿಸಿದರು. ಬುಡದಿಂದ ಉಸುಕಿನಲ್ಲಿ ನೀರು ಮೇಲೆ ನುಗ್ಗಿದಾಗ ಉಸುಕು ಉಬ್ಬಿ ಪ್ರತಿಯೊಂದು ಕಣವೂ ನೆರೆಯ ಕಣದ ಮೇಲೆ ನಿಲ್ಲದೆ ನೀರಿನ ದಿಂಬದ ಮೇಲೆ ನಿಲ್ಲುತ್ತದೆ. ಮೇಲಿನಿಂದ ಒತ್ತಿದಾಗ ಕಣಗಳು ಸರಿದು ಇಳಿಯತೊಡಗಿ ಮೇಲಿದ್ದ ವಸ್ತುವನ್ನು ಒಳಗೆ ಎಳೆದುಕೊಳ್ಳುತ್ತದೆ. ಕೆಲವು ಬಗೆಯ ಉಸುಕಿನ ಕಣಗಳು ವಸ್ತುಗಳನ್ನು ಬೇಗನೆ ಒಳಗೆ ಎಳೆದುಕೊಳ್ಳುತ್ತವೆ. ಉಸುಕಿನ ಕಣಗಳು ಸೂಕ್ಷ್ಮವಾಗಿದ್ದರೆ ಅದು ಉಪದ್ರವದ ಉಸುಕಾಗಲಿಕ್ಕೆ ಕಡಿಮೆ ನೀರು ಸಾಕು. ಉಸುಕಿನ ಮೇಲ್ಮೈ ನುಣುಪಾಗಿ ಕಂಡರೂ ಇದರ ಒಳಸೆಳೆತ ಭೀಕರವಾಗಿರುತ್ತದೆ. ನೀರಿನ ಕಸುವು ಕಡಿಮೆಯಿದ್ದು ಉಸುಕಿನ ಕಣಗಳು ಉರುಟಾಗಿದ್ದರೆ ಈ ಉಸುಕಿನ ಉಪದ್ರವ ಮಂದವಾಗಿರುತ್ತದೆ. ಆಗ ಇದರ ಮೇಲೆ ಬೇಗನೆ ನಡೆದು ಪಾರಾಗಬಹುದು. ಆದರೆ ಅಂತಹ ಉಸುಕನ್ನು ಮೊದಲೇ ಗುರುತಿಸುವುದು ಕಷ್ಟ.

ಈ ಉಪದ್ರವದ ಉಸುಕಿನಲ್ಲಿ ಸಿಕ್ಕಿಬಿದ್ದಾಗ ಮೈಮೇಲಿನ ಭಾರವನ್ನು ತಕ್ಷಣ ಬಿಸಾಡಬೇಕು. ನಿಲ್ಲುವ ಬದಲು ಮಲಗಲು ಯತ್ನಿಸಬೇಕು. ಕೈ ಕಾಲು ಬಡಿಯುವ ಬದಲು ಮೆಲ್ಲಮೆಲ್ಲನೆ ಮಗ್ಗುಲು ಮಗುಚುತ್ತ ಅಥವಾ ಹರಿದಾಡುತ್ತ ತಾನು ಹೊರಟಿದ್ದ ಸ್ಥಳಕ್ಕೆ ಮರಳಲೆತ್ನಿಸಬೇಕು. ನೀರಿನಲ್ಲಿ ಈಜುವಂತೆಯೇ ಈಜುವುದು ಒಳ್ಳೆಯದು. ಪ್ರಾಣಿಗಳಲ್ಲಿ ಕುದುರೆಯನ್ನು ಬಿಟ್ಟರೆ ಉಳಿದ ಯಾವ ಪ್ರಾಣಿಗಳೂ ಈ ಉಪದ್ರವದ ಉಸುಕನ್ನು ಗುರುತಿಸಲಾರವು ಎನ್ನುವುದು ವಿಚಿತ್ರವಾದರೂ ಸತ್ಯ. ●

# ಔಷಧವಾಗಿ ನೀರು

ನೀರಿನ ಮಹತ್ವ ಅಷ್ಟಿಷ್ಟಲ್ಲ. ಹವೆಯಿಲ್ಲದೆ ನಾವು ಹೇಗೆ ಜೀವಿಸಲಾರೆವೋ ಹಾಗೆಯೇ ನೀರಿಲ್ಲದೆಯೂ ನಾವು ಬದುಕಿರಲಾರೆವು. ಹಾಗೆ ನೋಡಿದರೆ ನಮ್ಮ ಶರೀರದ ಹೆಚ್ಚು ಭಾಗ ಜಲಾವೃತವಾಗಿಯೇ ಇದೆ. ಆದರೆ ನೀರು ಬಾಯಾರಿಕೆಯನ್ನು ನಿವಾರಿಸಲು ಅಥವಾ ಮೈಯ ಕೊಳೆಯನ್ನು ಕಳೆಯಲಷ್ಟೇ ಅಲ್ಲ, ತುರ್ತುಪರಿಸ್ಥಿತಿಗಳಲ್ಲೂ ಉಪಯೋಗಕ್ಕೆ ಬರುತ್ತದೆನ್ನುವುದು ನಿಮಗೆ ಗೊತ್ತೆ? ಅದರ ಕೆಲ ಉಪಯೋಗಗಳು ಇಲ್ಲಿವೆ.

**ಸುಟ್ಟಗಾಯಗಳು:** ಕೂಡಲೇ ನೋವು ಕಡಿಮೆ ಆಗುವ ತನಕ ಸುಟ್ಟಭಾಗವನ್ನು ತಣ್ಣಗಿರುವ ಶುದ್ಧವಾದ ನೀರಿನಲ್ಲಿ ಮುಳುಗಿಸಬೇಕು.

ಕಾರಣ: ಸುಟ್ಟಗಾಯಗಳಿಗೆ ಉಂಟಾದ ಉಷ್ಣತೆಯನ್ನು ಯಥೇಚ್ಛವಾದ ತಣ್ಣನೆಯ ನೀರಿನಿಂದ ನಿವಾರಿಸಬಹುದು, ನೀವು ಆಲೂಗಡ್ಡೆ ಅಥವಾ ಮೊಟ್ಟೆಯನ್ನು ತಣ್ಣಗೆ ಮಾಡುವಂತೆ.

ಎಚ್ಚರಿಕೆ: ಯಾವುದೇ ಸಂದರ್ಭದಲ್ಲೂ ಸುಟ್ಟಗಾಯಗಳಿಗೆ ಗ್ರೀಸ್, ಬೆಣ್ಣೆ, ಎಣ್ಣೆ ಅಥವಾ ಕೊಬ್ಬಿನ ಪದಾರ್ಥಗಳನ್ನು ಉಪಯೋಗಿಸಬೇಡಿರಿ.

**ಉಳುಕು:** ಉಳುಕು ಆಗಿರುವ ಕೀಲಿನ ಭಾಗವನ್ನು ತಣ್ಣೀರಿನಲ್ಲಿ ಸುಮಾರು ೩೦ ನಿಮಿಷಗಳ ಕಾಲ ಮುಳುಗಿಸಬೇಕು.

ಕಾರಣ: ಉಳುಕು ಉಂಟಾದಾಗ ಒಳಭಾಗದಲ್ಲಿ ರಕ್ತಸ್ರಾವವಿರುತ್ತದೆ. ಉಷ್ಣತೆಯನ್ನು ಕಡಿಮೆ ಮಾಡುವ ಮೂಲಕ ರಕ್ತಸ್ರಾವವನ್ನು ಕಡಿಮೆ ಮಾಡಬಹುದು.

ಎಚ್ಚರಿಕೆ: ಉಳುಕು ಆಗಿರುವ ಕೀಲಿನ ಭಾಗವನ್ನು ಯಾವುದೇ ಕಾರಣಕ್ಕೂ ಮಾಲಿಶ್ ಮಾಡಬೇಡಿ ಅಥವಾ ಆ ಭಾಗದಲ್ಲಿ ತೂಕ ಹೇರಬೇಡಿ.

**ನಾಯಿ ಕಚ್ಚಿದರೆ:** ನಾಯಿ ಕಚ್ಚಿರುವ ಜಾಗವನ್ನು ಸೋಪನ್ನು ಉಪಯೋಗಿಸಿ ನೀರಿನಿಂದ ತೊಳೆದು, ಅನಂತರ ವೈದ್ಯರಿಗೆ ತೋರಿಸಿರಿ.

ಕಾರಣ: ನಾಯಿ ಕಚ್ಚಿದ ಭಾಗವನ್ನು ನೀರಿನಿಂದ ತೊಳೆಯುವುದರಿಂದ ಅಲ್ಲಿ ಹತ್ತಿರುವ ಜೊಲ್ಲು ಹೋಗುತ್ತದೆ ಮತ್ತು ಸೋಪು ಸೋಂಕು ನಿವಾರಕವಾಗಿ ವರ್ತಿಸುತ್ತದೆ.

**ವಿಷವೇರಿಕೆ:** ವಿಷ ಕುಡಿದ ರೋಗಿಗೆ ಒಂದು ಅಥವಾ ಎರಡು ಲೋಟಗಳಷ್ಟು ನೀರನ್ನಾಗಲಿ ಹಾಲನ್ನಾಗಲಿ ಕುಡಿಸಬೇಕು.

ಕಾರಣ: ನೀರು ಅಥವಾ ಹಾಲು ಹೊಟ್ಟೆ ಸೇರಿದ ವಿಷವನ್ನು ತೆಳುವಾಗಿಸುತ್ತದೆ. ಮತ್ತು ವಿಷ ರಕ್ತವನ್ನು ಸೇರುವುದು ಅಷ್ಟು ಮಟ್ಟಿಗೆ ವಿಳಂಬವಾಗುತ್ತದೆ.

ಎಚ್ಚರಿಕೆ: ಯಾವುದೇ ಕಾರಣಕ್ಕೂ ಆಸಿಡ್‌ಗಳು, ಬಣ್ಣಗಳು, ಸೀಮೆಎಣ್ಣೆ, ಪೆಟ್ರೋಲ್ ಮತ್ತು ರಾಸಾಯನಿಕ ಪದಾರ್ಥಗಳನ್ನು ಸೇವಿಸಿದ್ದರೆ ವಾಂತಿ ಮಾಡಿಸಬೇಡಿ.

**ರಾಸಾಯನಿಕ ಪದಾರ್ಥಗಳಿಂದ ಸುಟ್ಟ ಗಾಯಗಳು:** ಆ ಭಾಗವನ್ನು ಸಾಕಷ್ಟು ನೀರಿನಿಂದ, ರಾಸಾಯನಿಕ ವಸ್ತುವು ಹೋಗುವವತನಕ ತೊಳೆಯಬೇಕು.

ಕಾರಣ: ಇದರಿಂದ ರಾಸಾಯನಿಕ ವಸ್ತುವು ತೆಳ್ಳಗಾಗಿ ಚರ್ಮದಿಂದ ಹೊರಟು ಹೋಗಲು ಸಹಾಯಕವಾಗುತ್ತದೆ.

ಎಚ್ಚರಿಕೆ: ಕ್ಷಾರದಿಂದಾದ ಸುಟ್ಟಗಾಯಗಳನ್ನು ಸಾಕಷ್ಟು ನೀರಿನ ಸೌಲಭ್ಯವಿದ್ದರೆ ಮಾತ್ರ ತೊಳೆಯಬೇಕು. ಇಲ್ಲದಿದ್ದರೆ, ಕೆಲವು ಸಂದರ್ಭಗಳಲ್ಲಿ ರಾಸಾಯನಿಕ ಪ್ರತಿಕ್ರಿಯೆ ಉಂಟಾಗಿ ಉಷ್ಣತೆ ಬಿಡುಗಡೆಯಾಗುತ್ತದೆ.

**ಕಣ್ಣಿನಲ್ಲಿ ಪರಕೀಯ ವಸ್ತು:** ಕಣ್ಣೀರು ಪರಕೀಯ ಪದಾರ್ಥವನ್ನು ಹೊರಹಾಕುತ್ತದೆ. ಹರಿಯುತ್ತಿರುವ ನೀರಿನಲ್ಲಿ ಕಣ್ಣನ್ನು ತೊಳೆಯುವುದು ಕೂಡ ಪರಿಣಾಮಕಾರಿಯಾಗಿರುತ್ತದೆ.

ಕಾರಣ: ಇದರಿಂದ ಪರಕೀಯ ಪದಾರ್ಥ ಕಣ್ಣಿನ ಮೃದುವಾದ ಅಂಗಾಂಶಕ್ಕೆ ಒತ್ತುವುದಿಲ್ಲ.

ಎಚ್ಚರಿಕೆ: ಕಣ್ಣನ್ನು ಉಜ್ಜಬೇಡಿ ಅಥವಾ ಬಟ್ಟೆಬರೆಯಿಂದ ಹೊರದೆಗೆಯಲು ಪ್ರಯತ್ನಿಸಬೇಡಿ. ತಡಮಾಡದೆ ನೇತ್ರ ವೈದ್ಯರಲ್ಲಿ ತೋರಿಸಿರಿ.

**ಕೊಯ್ತದಿಂದಾದ ಗಾಯ:** ಸಣ್ಣಪುಟ್ಟ ಕೊಯ್ದು ಮತ್ತು ಮೂಗಾಯಗಳನ್ನು ಮೈ ಸೋಪು ಉಪಯೋಗಿಸಿ, ಶುದ್ಧವಾದ ನೀರಿನಿಂದ ತೊಳೆಯಿರಿ. ರಕ್ತಸ್ರಾವ ಕಡಿಮೆ ಆಗುವತನಕ ನೇರವಾಗಿ ಒತ್ತಿರಿ.

ಕಾರಣ: ತೊಳೆಯುವುದರಿಂದ ಪರಕೀಯ ವಸ್ತುವು ಹೋಗುತ್ತದೆ ಮತ್ತು ನೇರವಾಗಿ ಒತ್ತುವುದರಿಂದ ನವಿರು ನಾಳಗಳು ಕೂಡುತ್ತವೆ.

ಎಚ್ಚರಿಕೆ: ಪೇಸ್ಟ್ ಅಥವಾ ಆಯಿಂಟ್‌ಮೆಂಟ್‌ನ್ನು ಹಚ್ಚಿದರೆ ಗಾಯದಲ್ಲಿ ಸೋಂಕು ಉಂಟಾಗುತ್ತದೆ.

• **ಎನ್. ವಿಶ್ವರೂಪಾಚಾರ್**

# ನಿಮ್ಮ ರಾಶಿ ಮತ್ತು ವ್ಯಕ್ತಿತ್ವ

"ನಿಮ್ಮ ಜನ್ಮ ರಾಶಿ ಯಾವುದು?" ಎಂಬುದು ಪ್ರತಿಯೊಬ್ಬನೂ ಒಂದಿಲ್ಲೊಂದು ಸಲ ಎದುರಿಸುವ ಪ್ರಶ್ನೆಯಾಗಿರುತ್ತದೆ. ದಿನಪತ್ರಿಕೆ ಬಂದ ಕೂಡಲೇ ಅದರಲ್ಲಿರುವ 'ನಿತ್ಯಭವಿಷ್ಯ'ವನ್ನು ಗಮನಿಸದಿರುವವರು ಬಹುಶಃ ಇಲ್ಲವೇ ಇಲ್ಲವೇನೊ. ಇನ್ನು ವಾರಪತ್ರಿಕೆ, ಮಾಸಪತ್ರಿಕೆಗಳೂ ಭವಿಷ್ಯವನ್ನು ಪ್ರಕಟಿಸುತ್ತವೆ. ದೀಪಾವಳಿ-ಯುಗಾದಿ ವಿಶೇಷಾಂಕಗಳು ಮಾರುಕಟ್ಟೆಗೆ ಬಂದಾಗ ಕೊಳ್ಳುವ ನೆಪದಲ್ಲಿ ಐದಾರು ಬೇರೆ ಬೇರೆ ಪತ್ರಿಕೆಗಳನ್ನು ತಿರುವಿ 'ವರ್ಷಭವಿಷ್ಯ'ವನ್ನು ಕಳ್ಳನೋಟದಿಂದಾದರೂ ನೋಡುವ ಮಹಾನುಭಾವರಿಗೇನು ಕಮ್ಮಿ? ಇದೆಲ್ಲ ಜನ್ಮರಾಶಿ ಭವಿಷ್ಯದ ಕುರಿತೇ ಆಯಿತು. ಆಂಗ್ಲ ಪತ್ರಿಕೆಯ ಜತೆಗೆ ಇತರ ಭಾಷಾ ಪತ್ರಿಕೆಗಳನ್ನೂ ಪ್ರಕಟಿಸುವ ಸಂಸ್ಥೆಗಳೂ ಇವೆ. ಆಂಗ್ಲ ದೈನಿಕದ ವಾರದ ವಿಶೇಷ ಪುರವಣಿಯಲ್ಲಿ ಪ್ರಕಟವಾಗುವ ವಾರಭವಿಷ್ಯ ಜನ್ಮರಾಶಿಯನ್ನವಲಂಬಿಸಿರದೆ ಜನ್ಮ ದಿನಾಂಕವನ್ನು ಆಧರಿಸಿರುತ್ತದೆ. ಅದೇ ಭವಿಷ್ಯದ ಅನುವಾದ ಆ ಪತ್ರಿಕೆಯ ಭಾಷಾ ಪತ್ರಿಕೆಗಳಲ್ಲಿಯೂ ಪ್ರಕಟವಾಗಿರುತ್ತದೆ. ಹೀಗಾಗಿ ಭಾರತೀಯ ಪದ್ಧತಿಯಂತೆ ಒಂದು ರಾಶಿಯವನಾಗಿರುವ ವ್ಯಕ್ತಿ, ಆಂಗ್ಲ ಪದ್ಧತಿಯಂತೆ ಮತ್ತೊಂದು ರಾಶಿಯವನಾಗಿಬಿಡುತ್ತಾನೆ.

ಭಾರತೀಯ ಜ್ಯೋತಿಷ್ಯಶಾಸ್ತ್ರದನ್ವಯ ಪ್ರತಿಯೊಬ್ಬ ವ್ಯಕ್ತಿಯೂ ಆತನ ಜನ್ಮಸಮಯ, ನಕ್ಷತ್ರದ ಆಧಾರದ ಮೇಲೆ ಇಂಥಿಂಥ ರಾಶಿಯವನೆಂದು ವಿಂಗಡಿಸಲ್ಪಟ್ಟಿದ್ದಾನೆ. ನೀವೆಲ್ಲ ಗಮನಿಸಿರಬೇಕು;

• ಚಂದ್ರಶೇಖರ ಜೋಯ್ಸ

ಪ್ರತಿ ರಾಶಿಯೂ ವ್ಯಕ್ತಿ, ಪ್ರಾಣಿ ಇಲ್ಲವೆ ವಸ್ತುವಿನ ಹೆಸರು ಹೊಂದಿದೆ. ಅಂದರೆ ಆಯಾ ರಾಶಿಯು ಆ ವ್ಯಕ್ತಿಯ ಚಾರಿತ್ರ್ಯ, ಸ್ವಭಾವ ಮತ್ತು ನಡವಳಿಕೆಯ ಸಂಕೇತವಾಗಿರುತ್ತದೆ ಎಂಬುದು ಇದರ ಸ್ಥೂಲಮಾನದ ಅರ್ಥ. ಇಲ್ಲಿ ದ್ವಾದಶರಾಶಿಗಳ ಪ್ರತೀಕವಾಗಿರುವ ಪ್ರಾಣಿ ಇಲ್ಲವೆ ವಸ್ತುವಿಗೂ ಆಯಾ ವ್ಯಕ್ತಿಗೂ ಇರುವ ಸ್ವಭಾವಸಾಮ್ಯವನ್ನು ಸೂಚಿಸುವ ಪ್ರಯತ್ನವನ್ನು ಮಾಡಲಾಗಿದೆ.

---

ಇಲ್ಲಿ ವಿವರಿಸಲ್ಪಟ್ಟ ದ್ವಾದಶ ರಾಶಿಯವರ ಗುಣ ಲಕ್ಷಣಗಳನ್ನು ಸ್ಥೂಲಮಾನದಿಂದ ಹೇಳಲಾಗಿದೆಯೆಂಬುದನ್ನು ಗಮನದಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಅಲ್ಲದೆ ಇವು ಶತಮಾನಗಳ ಹಿಂದೆ ಗುರುತಿಸಲ್ಪಟ್ಟವುಗಳೆಂಬುದೂ ಲಕ್ಷ್ಯದಲ್ಲಿರಲಿ. ಅಷ್ಟಕ್ಕೂ ಭವಿಷ್ಯವೆಂದರೇನೇ ಹಾಗಲ್ಲವೆ? ಪಂಚಭವತಿ, ಪಂಚ ನ ಭವತಿ.

• ಸಂಪಾದಕ



## ಮೇಷ

ಇದು ರಾಶಿ ಚಕ್ರದಲ್ಲಿ ಮೊದಲಿನದು. ಮೇಷ ಅಂದರೆ ಟಗರು. ಈ ರಾಶಿಯವರ ಸ್ವಭಾವ ಹಾಗೂ ನಡುವಳಿಕೆಗಳು ಟಗರಿನಂತೆಯೇ ಇರುತ್ತವೆ. ಟಗರಿನಂತೆಯೇ ಈ ರಾಶಿಯವರು ಚಂಚಲ ಸ್ವಭಾವದವರೂ ಪರಿಶ್ರಮಿಗಳೂ ಆಗಿರುತ್ತಾರೆ. ಟಗರಿನಂತೆಯೆ ತಲೆ ಹಾಕುತ್ತ ನಡೆಯುವ ಜನ ಇವರು. ಸಂಗೀತಪ್ರಿಯರು. ಸಾಹಸಿಗಳೂ ಆವೇಶಭರಿತರೂ ಹೌದು. ಇವರ ಚೇಷ್ಟೆ ಮಾತುಗಳೂ ಜಗಳದಂತೆ ತೋರಿಬರುತ್ತವೆ. ಅನ್ಯಾಯ ಸಹಿಸದ ಇವರು ತಮಗಿಂತ ಹೆಚ್ಚು ಬಲಾಢ್ಯರೊಂದಿಗೂ ಕದನಕ್ಕಿಳಿಯುತ್ತಾರೆ. ಜಿಗುಟು ಸ್ವಭಾವದ ಇವರು ಅತಿಸ್ವಾಭಿಮಾನಿಗಳು. ಸ್ಪಷ್ಟವಾದಿಯಾಗಿರುವಂತೆಯೇ ಹಠವಾದಿಗಳು ಕೂಡ. ಮಧ್ಯಮ ಎತ್ತರದ ನಿಲುವು, ಗಟ್ಟಿ ಶರೀರದವರು. ಇವರು ಬಹುತೇಕ ಶಾಮಲ ಇಲ್ಲವೆ ಕಡುಗೆಂಪು ಮೈಬಣ್ಣದವರಾಗಿರುತ್ತಾರೆ. ಕೋಮಲ-ಸುಂದರ ಕೇಶಸಂಪತ್ತುಳ್ಳ ಇವರು ಮಂಗಳ ಗ್ರಹದಿಂದ ಪ್ರಭಾವಿತರಾಗುವ ಕಾರಣ ಬಹುತರವಾಗಿ ರಕ್ತವಿಕಾರದಿಂದ ಬಳಲುತ್ತಾರೆ.



## ವೃಷಭ

ಎತ್ತು ಈ ರಾಶಿಯ ಸಂಕೇತ. ಅಂತೆಯೇ ವೃಷಭ ರಾಶಿಯವರ ಸ್ವಭಾವ ಮತ್ತು ಆಚರಣೆಗಳು ಎತ್ತಿನಂತೆಯೇ ಇರುತ್ತವೆ. ದಷ್ಟಪುಷ್ಟವಾದ ಸ್ಥೂಲ ಶರೀರದವರೇ ಜಾಸ್ತಿಯಾದರೂ ಈ ರಾಶಿಯ ಕೆಲವರು ತೆಳ್ಳಗೆ-ಉದ್ದಕ್ಕೆ ಇರುವುದುಂಟು. ಉದ್ದ ಕೈಕಾಲುಗಳೂ ಸುಂದರವಾದ ತೇಜಸ್ವಿ ಕಣ್ಣುಗಳೂ ಇರುತ್ತವೆ. ಭುಜಗಳು ಅಗಲವಾಗಿದ್ದು ಎಂಥ ಜವಾಬ್ದಾರಿಯನ್ನಾದರೂ ಹೆಗಲ ಮೇಲೆ ಹೊತ್ತುಕೊಳ್ಳಲು ಇವರು ಸಿದ್ಧರಾಗಿರುವಂಥವರು. ಎತ್ತಿನಂತೆಯೇ ನಿರಂತರ ಕ್ರಿಯಾಶೀಲರು. ಅಲ್ಲದೆ ಆಜ್ಞಾನುವರ್ತಿಗಳೂ ಸ್ವಾಮಿಭಕ್ತರೂ ಸಹನಶೀಲರೂ ಆಗಿರುತ್ತಾರೆ. ಬುದ್ಧಿವಂತರೂ ಪ್ರಭಾವಯುತ ಧ್ವನಿಯವರೂ ಹೌದು. ಸೌಂದರ್ಯದ ಉಪಾಸಕರೂ ವಿಲಾಸಪ್ರಿಯರೂ ಆಗಿರುತ್ತಾರೆ. ಸ್ವಚ್ಛತೆ, ಅಚ್ಚುಕಟ್ಟು ಇವರ ಪ್ರತಿ ಕೆಲಸದಲ್ಲೂ ಎದ್ದುಕಾಣುತ್ತವೆ. ಶುಕ್ರನಿಂದ ಪ್ರಭಾವಿತರಾದ್ದರಿಂದ ಕಾಮುಕರೂ ಹೌದು. ಭಾವುಕರೂ ಸತ್ಯಪ್ರಿಯರೂ ಆಗಿರುವ ಇವರು ಭಾವನಾತ್ಮಕ ಸಂಬಂಧಗಳನ್ನು ಬೆಳೆಸಿಕೊಳ್ಳಲು ಯತ್ನಿಸುತ್ತಾರಾದರೂ ಅದರಲ್ಲಿ ಯಶ ಸಿಗದೆ ಅತೃಪ್ತಿಯಿಂದ ನರಳುತ್ತಾರೆ. ಕಾಲಕ್ಕೆ ತಕ್ಕಂತೆ ಹೆಜ್ಜೆಯಿಟ್ಟು ವಿಕಾಸದೆಡೆಗೆ ನಡೆಯುವ ಈ ರಾಶಿಯ ಜನಕ್ಕೆ ನಿಶ್ಚಿತ ಗುರಿ ಮತ್ತು ಆದರ್ಶಗಳಿರುವುದುಂಟು. ಈ ರಾಶಿಯ ಬಹುತೇಕರು ಮುಂಬಾಗಿ ನಡೆಯುವವರು. ಇವರ ನಡಿಗೆ ದಾಪುಗಾಲಿನದು.



## ಮಿಥುನ

ಮೈಥುನ ಕ್ರಿಯೆಯಿಂದ ಹುಟ್ಟಿಕೊಂಡ ಪದ ಮಿಥುನ. ಈ ರಾಶಿಯವರು ಜಿಜ್ಞಾಸು ಪ್ರವೃತ್ತಿಯವರು. ಭಾವುಕರೂ ಹೌದು. ಇವರ ಬದುಕಿನಲ್ಲಿ ಬರುವ ಪ್ರೇಮಕ್ಷಣಗಳು ಬಹಳ. ಆದರೆ ಚರಿತ್ರ ಹೀನತೆಯ ಭಯದಿಂದ ಆ ದಿಶೆಯಲ್ಲಿ ಮುಂದುವರಿಯುವುದಿಲ್ಲ ತಮ್ಮವರೆಂದು ಹಚ್ಚಿಕೊಳ್ಳುವಂಥವರೊಂದಿಗೂ ಆ ಭಾವನೆಯನ್ನು ಬಾಯಿಬಿಟ್ಟು ಹೇಳಲಾರದ ಈ ರಾಶಿಯವರದು ಒಂದು ರೀತಿಯಲ್ಲಿ ಏಕಮಾರ್ಗ ಭಾವನಾತ್ಮಕತೆ. ಇರುವಿಕೆ, ಉಡು-ತೊಡುವಿಕೆಯಲ್ಲಿ ಭವ್ಯತೆಯತ್ತ ಇವರಿಗೆ ಹೆಚ್ಚು ಗಮನ. ಮಿಥುನ ಮೂಲತಃ ದ್ವಿಸ್ವಭಾವಿ ರಾಶಿ. ಹೀಗಾಗಿ ಈ ರಾಶಿಯವರಲ್ಲಿ ಕೆಲವು ವಿರುದ್ಧಲಿಂಗಿಗುಣಗಳು ಕಾಣಿಸುತ್ತವೆ. ಶಿಕ್ಷಣದ ವಿಷಯದಲ್ಲಿ ಇವರಿಗೆ ಅಪಾರ ಆಸ್ಥೆ. ಹೊಸ ಹೊಸ ವಿಷಯಗಳಲ್ಲಿನ ಜ್ಞಾನಸಂಪಾದನೆ ಮತ್ತು ತರಬೇತಿಯಂಥ ಅವಕಾಶಗಳನ್ನಿವರು ಹುಡುಕಿಕೊ

ಳುತ್ತಿರುತ್ತಾರೆ. ತಂತ್ರಜ್ಞಾನ ಸಂಬಂಧಿ ಉದ್ಯೋಗಗಳು ಮತ್ತು ಧನ ವ್ಯವಹಾರ ಮೂಲದ ಕೆಲಸಗಳಲ್ಲಿ ಆಸಕ್ತರಾಗಿರುವ ಇವರು ಅದರಲ್ಲಿ ಯಶಸ್ಸನ್ನು ಪಡೆದಿರುತ್ತಾರೆ.



## ಕರ್ಕ

ಏಡಿ ಈ ರಾಶಿಯ ಪ್ರತೀಕ. ಬಾಹ್ಯ ಕವಚವೆಷ್ಟು ಕಠಿಣವೋ ಅಷ್ಟೇ ಮೃದುವಾದ ಶರೀರ ಏಡಿಯದು. ಈ ರಾಶಿಯವರ ಜೀವನ ಶೈಲಿ ಮತ್ತು ಸ್ವಭಾವಗಳು ತದ್ವತ್ ಹೀಗೆಯೇ. ಮೇಲು ನೋಟಕ್ಕೆ ತುಂಬ ಕಠೋರರೆಂದು ತೋರಿದರೂ ಕರ್ಕ ರಾಶಿಯವರು ಆಂತರಿಕವಾಗಿ ತುಂಬ ಭಾವುಕರು, ಕೋಮಲ ಸ್ವಭಾವಿಗಳು, ಮಹಾತ್ವಾಕಾಂಕ್ಷಿಗಳು, ಕಲ್ಪಕಶಕ್ತಿಯುಳ್ಳವರು ಹಾಗೂ ಏಕಾಂತಪ್ರಿಯರು. ತಮ್ಮ ಕಷ್ಟ-ನಷ್ಟಗಳನ್ನು ಒಳಗೇ ಬಚ್ಚಿಟ್ಟುಕೊಂಡು ಹೊರಗೆ ಪ್ರಸನ್ನತೆ ಮತ್ತು ಸಂತಸವನ್ನು ವ್ಯಕ್ತಪಡಿಸುವಂಥವರು. ಸಂವೇದನಶೀಲರಾಗಿರುವುದರಿಂದ ಇವರ ಮೇಲೆ ಸುತ್ತಮುತ್ತಲಿನ ವಿದ್ಯಮಾನಗಳ ಪ್ರಭಾವ ಶೀಘ್ರವೇ ಆಗುತ್ತದೆ. ಇವರು ಅಂತರ್ಮುಖಿಗಳೂ ಗಂಭೀರ ಚಿಂತಕರೂ ಆಗಿರುವುದು ಈ ಕಾರಣದಿಂದಲೇ. ಜಲವಿಕಾರ ಭಯ ಇವರಿಗೆ ಹೆಚ್ಚು. ಆದರೂ ಜಲಯಾತ್ರೆಯ ಅವಕಾಶಗಳೂ ಇವರ ಬದುಕಿನಲ್ಲಿ ಬರುವುದುಂಟು. ಕಲಾಪ್ರೇಮ ಇವರ ಇನ್ನೊಂದು ಗುಣ. ಏಡಿಯಂತೆಯೇ ಇವರು ಗಾಸಿಗೊಳಿಸುವುದು ತಡವಾಗಿಯೇ ಆದರೂ ಆ ಗಾಸಿಗೊಳಿಸುವಿಕೆ ಅತ್ಯಂತ ಹಾನಿಕಾರಕವಾಗಿ ಪರಿಣಮಿಸುವುದುಂಟು.



## ಸಿಂಹ

ಹೆಸರಿಗೆ ಅನುರೂಪವಾಗಿ ಈ ರಾಶಿಯವರದು ಸಿಂಹನಂಥದೇ ಗತ್ತು. ಅದೇ ರೀತಿಯ ಜಾಯಮಾನ. ಈ ಜನ ಎಲ್ಲಿದ್ದರಲ್ಲಿ ತಮ್ಮದೇ ಸ್ವಾಮಿತ್ವ ಸ್ಥಾಪಿಸುವಂಥವರು. ಸಿಂಹದ ಹಾಗೆಯೆ ಮೊದಲು ಗರ್ಜಿಸಿಬಿಡುತ್ತಾರೆ. ಯಾಕೆ ಗರ್ಜಿಸಿದೆ ಎಂದು ಆ ಮೇಲೆ ಯೋಚಿಸುತ್ತಾರೆ. ಇವರಲ್ಲಿ ಸ್ವಾಭಿಮಾನ ಮತ್ತು ಆತ್ಮಗೌರವ ಅತಿ ಎನ್ನಿಸುವಷ್ಟು ಜಾಸ್ತಿ. ಸ್ವತಃ ತಮ್ಮ ಒಡೆಯ ಮತ್ತು ಹಿರಿಯರಿಂದಲೂ ಗೌರವಾದರಗಳನ್ನು ಇವರು ಬಯಸುತ್ತಾರೆ. ಈ ರಾಶಿಯವರೊಂದಿಗೆ ಚೇಷ್ಟೆ ಮಾಡುವುದೆಂದರೆ ಸಿಂಹದ ಬಾಲವನ್ನು ತಿರುಚಿದ ಹಾಗೆಯೆ. ಸಿಂಹರಾಶಿಯ ಇಬ್ಬರು ವ್ಯಕ್ತಿಗಳು ಒಂದೇ ಕಡೆ ಇರುವುದು ಅಸಾಧ್ಯ. ಅರಣ್ಯದ ಒಂದೇ ಪ್ರದೇಶದಲ್ಲಿ ಇಬ್ಬರು ಮೃಗರಾಜರು ಇರಲಿಕ್ಕಾದೀತೇ? ಮೊಲದಿಂದ ಸೋಲಿಸಲ್ಪಟ್ಟ ಸಿಂಹದ ಕಥೆಯ ಹಾಗೆಯೇ ಈ ರಾಶಿಯವರು ತುಂಬ ಯೋಚಿಸುವುದಿದೆಯಾದರೂ ಆವೇಶದ ಭರದಲ್ಲಿ ಪೆಟ್ಟು ತಿನ್ನುವುದೂ ಇದೆ. ಅತಿ ಆತ್ಮವಿಶ್ವಾಸವಿರುವ ಕಾರಣ ಪರಿಶ್ರಮಿಗಳೂ, ಪರಾಕ್ರಮಿಗಳೂ, ಶತ್ರುವನ್ನು ಜಯಿಸುವಲ್ಲಿ ಕುಶಲರೂ, ಅವಕಾಶಕ್ಕಾಗಿ ಕಾದು ಮೇಲೆ ಬೀಳುವವರೂ ಮತ್ತು ಇದೆಲ್ಲಕ್ಕಿಂತ ಹೆಚ್ಚಾಗಿ ತಮ್ಮದೇ ಮಾತು ನಡೆಸುವ ಹಟದವರು ಈ ರಾಶಿಯವರು.



## ಕನ್ಯಾ

ಈ ರಾಶಿಯವರ ಪ್ರವೃತ್ತಿ ಕನ್ಯೆಯ ಹಾಗಿರುತ್ತದೆ. ಸಂಕೋಚ ಸ್ವಭಾವದ ಇವರು ಸಹನಶೀಲರೂ ಆಗಿರುತ್ತಾರೆ. ಭಾವುಕರಾಗಿರುತ್ತಾರಾದರೂ ಕೆಲಸದ ವಿಷಯದಲ್ಲಿ ಮಾತ್ರ ಏಕಚಿತ್ತರು. ಸುಂದರ ಮುಖದ ಇವರ ಕಣ್ಣು-ಮೂಗು ಮತ್ತು ಕತ್ತು ಆಕರ್ಷಕವಾಗಿರುತ್ತವೆ. ಪ್ರತಿಯೊಂದನ್ನೂ ಅಚ್ಚುಕಟ್ಟಾಗಿರುವಂತೆ ನೋಡಿಕೊಳ್ಳುವ ಇವರಿಗೆ ಕಲೆ-ಸಂಗೀತ ಮುಂತಾದವುಗಳಲ್ಲಿ ಅಭಿರುಚಿಯಿರುತ್ತದೆ. ಮಧುರ ಧ್ವನಿ ಇವರ ಇನ್ನೊಂದು ಲಕ್ಷಣ. ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಲ್ಲಿ ಆಸಕ್ತರು. ಮಿತ್ರತ್ವವನ್ನು ಬಯಸುವವರು. ದಯಾಳುಗಳೂ ಕ್ಷಮಾಶೀಲರೂ ಆಗಿರುವ ಈ ರಾಶಿಯ

ವರು ನಿರಂತರ ಕರ್ತವ್ಯನಿರತರು. ಎದುರಾಗಿರುವ ಸಮಸ್ಯೆಗಳನ್ನೇ ಇವರು ಸೌಭಾಗ್ಯವನ್ನಾಗಿ ಪರಿವರ್ತಿಸಿಕೊಳ್ಳಬಲ್ಲಂಥವರು. ಆಕ್ಷೇಪವೆಂಬುದು ಇವರು ಅರಿಯದ ಶಬ್ದ. ಈ ರಾಶಿಯವರು ಎತ್ತರಕ್ಕೇರಿದರೆ ಅದು ಮೈತ್ರಿಯ ಕಾರಣದಿಂದಲೇ ಮತ್ತು ಮಣ್ಣು ಮುಕ್ಕುವ ಸ್ಥಿತಿ ತಲುಪುವದೂ ಮಿತ್ರರಿಂದಾಗಿಯೆ.



## ತುಲಾ

ತಕ್ಕಡಿ ಈ ರಾಶಿಯ ಗುರುತು. ಈ ರಾಶಿಯವರು ಪ್ರತಿಯೊಂದನ್ನೂ ಅಳೆದು-ತೂಗಿ ನೋಡುವಂಥವರು. ಸರಿ-ತಪ್ಪು, ಸತ್ಯ-ಮಿಥ್ಯಗಳನ್ನು ಇವರು ಮನಸ್ಸಿನ ತಕ್ಕಡಿಯಲ್ಲಿ ತೂಗಿ ನೋಡಿಯೇ ನಿರ್ಧಾರಕ್ಕೆ ಬರುವಂಥವರು. ತಮ್ಮ ಹೊಣೆಗಾರಿಕೆಯ ವಿಷಯದಲ್ಲೂ ಇವರದು ಇದೇ ನೀತಿ. ಆದರೆ ಸ್ವಭಾವತಃ ಜಿಜ್ಞಾಸು ಪ್ರವೃತ್ತಿ ಇವರದಾಗಿರುವುದರಿಂದ ಬದುಕು ಸಣ್ಣ ಪುಟ್ಟ ಘಟನೆಗಳಿಂದಾಗಿ ತಕ್ಕಡಿಯಂತೆ ಆಚೀಚೆ ಹೊಯ್ದಾಡುತ್ತಿರುತ್ತದೆ. ತುಲಾ ರಾಶಿಯವರಿಗೆ ವ್ಯವಹಾರ-ವ್ಯವಸಾಯ ಮತ್ತು ಚಿಕಿತ್ಸಾ ಕ್ಷೇತ್ರಗಳಲ್ಲಿ ಸಫಲತೆ ಕಟ್ಟಿಟ್ಟಬುತ್ತಿ.



## ವೃಶ್ಚಿಕ

ಈ ರಾಶಿಯವರು ಪ್ರತೀಕ ಪ್ರಾಣಿಯಾಗಿರುವ ಚೇಳಿನ ಹಾಗೆಯೆ ಸ್ವಾರ್ಥಿಗಳು ಎಂಬುದು ಒಂದು ಸಾಮಾನ್ಯ ನಂಬಿಕೆ. ತಮ್ಮ ಕಾರ್ಯವನ್ನು ಸಾಧಿಸಿಕೊಂಡು ಅದಕ್ಕೆ ಸಹಕರಿಸಿದವರಿಗಿಂತಲೂ ಮುಂದೆ ಸಾಗುವ ಸ್ವಭಾವದವರು. ಹಾಗೆಯೇ ಕುಟುಕುವ ಚಟವುಳ್ಳವರು. ಆದರೆ ಇವರ ಒಂದು ಮುಖ್ಯ ಲಕ್ಷಣವೆಂದರೆ ಚಟುವಟಿಕೆಯುಕ್ತ ಬದುಕು. ಒಂದರೆಕ್ಷಣವೂ ಕೂತಲ್ಲೇ ಕೂಡುವವರಲ್ಲ. ನಿರಂತರ ಗತಿಶೀಲರು. ಭಯ-ಸಂಶಯಗಳು ಇವರಿಗೆ ಜಾಸ್ತಿ. ಪ್ರತಿಯೊಬ್ಬ ಆಗಂತುಕನನ್ನೂ ಇದೇ ದೃಷ್ಟಿಯಿಂದ ನೋಡುತ್ತಾರೆ. ಅಲ್ಲದೆ ಅವರನ್ನು ಆದಷ್ಟು ದೂರವೇ ಇಡಲು ಯತ್ನಿಸುತ್ತಾರೆ. ವೃಶ್ಚಿಕ ರಾಶಿಯವರಿಗೆ ಸಾಮಾನ್ಯವಾಗಿ ಉದರ ಬಾಧೆ ಇಲ್ಲವೆ ರಕ್ತವಿಕಾರಗಳ ತೊಂದರೆಯಿರುತ್ತದೆ. ಕುಶಾಗ್ರ ಬುದ್ಧಿ ಚಂಚಲ-ತೀವ್ರಗಾಮಿ ಸ್ವಭಾವ ಮತ್ತು ವಾಕ್ಪಟುತ್ವ ಇವರಲ್ಲಿ ಕಂಡುಬರುತ್ತವೆ. ವ್ಯಂಗ್ಯೋಕ್ತಿಗಳು ಇವರಿಂದ ಬರುವುದು ಜಾಸ್ತಿ.



## ಧನು

ಬಿಲ್ಲು ಅಥವಾ ಧನುಷ್ಯ ಈ ರಾಶಿಯ ಚಿನ್ಹೆ. ಧನುರಾಶಿಯವರು ಪ್ರಭಾವಶಾಲಿಗಳು, ಶೂರರು, ಯೋಜನಾನ್ವಯಿಗಳು ಮತ್ತು ಗುರಿ ಸಾಧಿಸುವುದರಲ್ಲಿ ನಿಪುಣರು. ಧಾರ್ಮಿಕತೆ, ಆಜ್ಞಾನುಶೀಲತೆ, ಸುಸಂಸ್ಕಾರ, ಸಹಕಾರಗಳು ಇವರಲ್ಲಿ ಎದ್ದು ಕಾಣುವ ಗುಣಗಳು. ಧನುಷ್ಯದಂತೆಯೇ ನೇರ ನಿಲುವು, ಆಜ್ಞಾನುಸಾರ ಬಾಗುವಿಕೆ, ದೃಢ ನಿಶ್ಚಯ, ಗುರಿಯೆಡೆಗೆ ಸಾಗುವಿಕೆ, ಸ್ವಾಮಿಭಕ್ತಿಗಳು ಇವರ ಮುಖ್ಯ ಲಕ್ಷಣಗಳು.



## ಮಕರ

ಮಕರ ಎಂದರೆ ಮೊಸಳೆ. ಈ ರಾಶಿಯವರು ಮೊಸಳೆಯಂತೆಯೆ ಹಿಡಿದ ಪಟ್ಟು ಬಿಡದೆ ತಮ್ಮ ಕಾರ್ಯವನ್ನು ಮಾಡಿಮುಗಿಸಿಕೊಳ್ಳುವ ಗಟ್ಟಿಗರು. ಇತರರ ಮೇಲೆ ಪ್ರಭಾವ ಬೀರಿ ಅದರ ಲಾಭವನ್ನು ಪಡೆದುಕೊಳ್ಳುವಲ್ಲಿ ನಿಷ್ಣಾತರು. ಸಂಚಯ ಪ್ರವೃತ್ತಿಯ ಇವರು ಸುಯೋಜಕ ಬುದ್ಧಿಯುಳ್ಳವರು. ಕ್ಲಿಷ್ಟ ಪ್ರಸಂಗಗಳಲ್ಲಿಯೂ ನುಸುಳಿಕೊಂಡು ಪಾರಾಗುವವರು. ಆದರೆ ಹೀಗೆ ನುಸುಳಿಕೊಂಡು ಹೋಗುವಾಗ ಇವರನ್ನು ಹಿಡಿದುಕೊಳ್ಳುವವರಿಗೆ

ಖಂಡಿತ ಅಪಾಯವಾಗುವುದುಂಟು. ಅದು ದೈಹಿಕವಾಗಿಯೂ ಇರಬಹುದು, ಮಾನಸಿಕವೂ ಆಗಿರಬಹುದು. ಇವರು ಯಾವುದೇ ವಿಷಯದಲ್ಲಿ ಆಳಕ್ಕಿಳಿದು ತಲಸ್ಪರ್ಶಿಯಾಗಿ ಯೋಚಿಸುವಂಥವರಾಗಿರುತ್ತಾರೆ. ಆದರೆ ತಮ್ಮದಲ್ಲದ ಕ್ಷೇತ್ರದಲ್ಲಿ ಮಾತ್ರ ಇವರಿಗೆ ದುರ್ಬಲತೆಯ ಅನುಭವವಾಗುತ್ತದೆ. ಅವಸರದ ಬದುಕು ಇವರದಾಗಿರುವುದರಿಂದ ಸುಖಿ-ಸಂತುಷ್ಟ ಜೀವನ ಇವರ ಪಾಲಿಗೆ ದುರ್ಲಭ. ಅದಕ್ಕಾಗಿ ಸಾಕಷ್ಟು ಶ್ರಮಿಸಬೇಕಾಗುತ್ತದೆ. ಉದ್ವೇಗ ಮತ್ತು ಅಪಾಯಕರ ಪ್ರಸಂಗಗಳಿಗೆ ಇವರು ಬಲು ಭಯಪಟ್ಟುಕೊಳ್ಳುತ್ತಾರೆ. ಆದ್ದರಿಂದ ಅಂಥವುಗಳಿಂದ ಆದಷ್ಟು ದೂರವಿರಲು ಯತ್ನಿಸುತ್ತಿರುತ್ತಾರೆ.



## ಕುಂಭ

ಕುಂಭವೆಂದರೆ ಕೊಡ. ಈ ರಾಶಿಯವರ ಸ್ವಭಾವ ಕೊಡದ ಹಾಗೆ ಸುಗ್ರಾಹಿಯೇ ಆಗಿರುತ್ತದೆ. ಜ್ಞಾನ ಮತ್ತು ಧನಸಂಚಯದ ಪ್ರಯತ್ನದಲ್ಲಿ ತೊಡಗಿರುವಂತೆ ತೋರಿಬರುತ್ತಾರಾದರೂ ತಮ್ಮ ಪರಿಶ್ರಮ ಮತ್ತು ಜಿಜ್ಞಾಸೆಗಳಿಂದಾಗಿ ಆಡಂಬರವನ್ನು ವಾಸ್ತವಿಕತೆಯನ್ನಾಗಿ ಪರಿವರ್ತಿಸುವಲ್ಲಿ ಸಫಲರಾಗಿರುತ್ತಾರೆ. ಬದುಕಿನ ಪ್ರಾರಂಭದಲ್ಲಿ ಇವರು ಸಂಘರ್ಷದ, ಕಡುಕಷ್ಟದ, ಅಶಾಂತಿಯ ಕಾಲವನ್ನು ಕಳೆದಿರುತ್ತಾರೆ. ಸಂಘರ್ಷ ಇವರನ್ನು ಪುಟಕ್ಕಿಟ್ಟ ಚಿನ್ನವನ್ನಾಗಿ ಮಾಡುವುದಂತೂ ನಿಜ. ಈ ರಾಶಿಯವರು ಭಾವುಕರು ಮತ್ತು ಶೀಘ್ರಕೋಪಿಗಳಾಗಿರುವುದೂ ಉಂಟು. ಕ್ಷಣಚಿತ್ತ-ಕ್ಷಣಪಿತ್ತದ ವ್ಯಕ್ತಿ ಎಂಬುದಕ್ಕೆ ಇವರಿಗಿಂತ ಬೇರೆ ದೃಷ್ಟಾಂತ ನೀಡುವುದು ಸಾಧ್ಯವೇ ಇಲ್ಲ. ಇವರಿಗೆ ನಿರಾಶೆಯೂ ನಿಮಿಷಾರ್ಧದಲ್ಲೇ ಕವಿದು ಬಿಡುವುದಿದೆ. ತಮ್ಮ ಬದುಕು ಮಣ್ಣಿನ ಮಡಕೆಯಂತೆ ಎಂಬ ವಾಸ್ತವದ ಕಲ್ಪನೆ ಬರತೊಡಗಿದಂತೆ ಅದನ್ನು ಹೆಚ್ಚೆಚ್ಚು ಜೋಪಾನವಾಗಿರಿಸಿಕೊಳ್ಳುವ ಪ್ರಯತ್ನ ಇವರದಾಗುತ್ತದೆ.



## ಮೀನ

ಮತ್ಸ್ಯದಂತೆ ಅನುಕೂಲ ವಾತಾವರಣದಲ್ಲಿ ಮಾತ್ರ ಆನಂದದಿಂದ ಜೀವಿಸಬಲ್ಲವರು ಈ ಮೀನ ರಾಶಿಯ ಜನ. ಮಹತ್ವಾಕಾಂಕ್ಷಿಗಳೂ ಧಾರ್ಮಿಕರೂ ಸಂಸ್ಕಾರವಂತರೂ ಆಗಿರುವ ಈ ಮಂದಿ ಮೀನಿನ ಹಾಗೆ ಸ್ವಾತಂತ್ರ್ಯಪ್ರಿಯರು. ಸಂಗೀತ ಇವರಿಗೆ ಇಷ್ಟ. ಇವರು ಬುದ್ಧಿವಂತರೂ, ವಿದ್ವಾಂಸರೂ ಆಗಿರುತ್ತಾರೆ. ನೀರಿನಲ್ಲಿದ್ದೂ ತನ್ನ ಸೀಮೆಯನ್ನು ಗುರುತಿಸಿ ಅದನ್ನು ಉಲ್ಲಂಘಿಸದ ಹಾಗೆ ನೋಡಿಕೊಳ್ಳುವ ಮೀನಿನಂತೆಯೆ ಸಮಯ, ವಚನ ಮತ್ತು ನಿಯಮಪಾಲನೆಯತ್ತ ಇವರು ಗಮನ ಹರಿಸುತ್ತಾರೆ. ಆದರೆ ಪ್ರಸಂಗವಶಾತ್ ತಮ್ಮ ಕ್ಷೇತ್ರವನ್ನು ತೊರೆಯಬೇಕಾಗಿ ಬಂದರೆ ಇವರು ಪಡುವ ಪಾಡು ಅಷ್ಟಿಷ್ಟಲ್ಲ. ಆದರೂ ಸ್ಥಳಾಂತರ ಅನಿವಾರ್ಯವಾಗಿರುವುದರಿಂದ ಹೊಸದಾದ, ಆದರೆ ಅನುಕೂಲವಾದ ಪ್ರದೇಶ ಅಥವಾ ಕ್ಷೇತ್ರವನ್ನು ಹುಡುಕಿಕೊಳ್ಳುವಲ್ಲಿ ನಿರತರಾಗಿ, ಯಶಸ್ಸು ಪಡೆದು ನೆಮ್ಮದಿಯ ಜೀವನ ಸಾಗಿಸುತ್ತಾರೆ. ●

---

ಅತ್ಯಂತ ಶ್ರೇಷ್ಠ ಮತ್ತು ಅಮೂಲ್ಯವಾದುದು ಯಾವುದು? ಜ್ಞಾನ. ಯಾಕೆಂದರೆ ಅದನ್ನು ಯಾರೂ ಕದಿಯಲಾಗುವುದಿಲ್ಲ; ಅದನ್ನಾರು ಕೊಳ್ಳಲಾಗುವುದಿಲ್ಲ; ಮತ್ತು ಅದನ್ನಾರೂ ನಾಶಗೊಳಿಸಲೂ ಸಾಧ್ಯವಿಲ್ಲ.

-ಹಿತೋಪದೇಶ

ಸಂತಸದೊಂದಿಗೆ ಮಾಡುವ ಕೆಲಸ ಎಲ್ಲ ಮಾನಸಿಕ ಮತ್ತು ದೈಹಿಕ ತೊಂದರೆಗಳನ್ನು ದೂರ ಮಾಡುತ್ತದೆ.

-ಸ್ವಾಮಿ ಶಿವಾನಂದ

# ನೆನಪು ನೆರಳಿನಲ್ಲಿ

ಬಹಳ ದಿನಗಳಿಂದ ನನ್ನ ತಾಯಿ ಕೆಮ್ಮು ದಮ್ಮಿನಿಂದ ನರಳುತ್ತಿದ್ದರು. ಆಸ್ಪತ್ರೆಯಲ್ಲೆ ಐದು-ಆರು ವರ್ಷ ಕಳೆದರೂ ಗುಣವಾಗಲಿಲ್ಲ. ಕೊನೆಗೆ ತಾಯಿಯ ಆಸೆಯಂತೆ ಆಸ್ಪತ್ರೆಯಿಂದ ಮನೆಗೆ ಕರೆದುಕೊಂಡು ಬಂದೆವು. ಅಷ್ಟು ಹೊತ್ತಿಗಾಗಲೇ ಆಕೆ ಊಟಮಾಡುವುದನ್ನು ಪೂರ್ತಿಯಾಗಿ ನಿಲ್ಲಿಸಿ ಕೇವಲ ಹಣ್ಣಿನರಸವನ್ನು ಸೇವಿಸುತ್ತಿದ್ದಳು.

ಆಸ್ಪತ್ರೆಯಿಂದ ಬಂದ ಮೂರು ದಿನದಲ್ಲಿ ಅಂದರೆ ದಿನಾಂಕ ೨೭-೩-೮೯ರಂದು ಬೆಳಿಗ್ಗೆ ೧೦-೩೦ರ ಸಮಯ. ಸಿಹಿ ಕಿತ್ತಳೆಹಣ್ಣಿನ ಸಿಪ್ಪೆ ಸುಲಿದು ಒಂದೊಂದೆ ತೊಳೆಯನ್ನು ತಾಯಿಯ ಬಾಯಲ್ಲಿಡುತ್ತಿದ್ದೆ. ಅರ್ಧ ಹಣ್ಣನ್ನು ಮಾತ್ರ ನಿಧಾನವಾಗಿ ಸೇವಿಸಿದಳು. ನಂತರ ಇದ್ದಕ್ಕಿದ್ದಂತೆ ಹೃದಯದ ಬಡಿತ ಜೋರಾಯಿತು. ನನಗೆ ಭಯವಾಗಿ, "ಅಮ್ಮ ಅಮ್ಮ" ಎಂದು ಜೋರಾಗಿ ಕೂಗಿದೆ. ಅದನ್ನು ಕೇಳಿದ ತಂದೆಯವರು ಬಂದು ಕೈಹಿಡಿದು ನೋಡಿದರು. ಆದಾಗಲೇ ಈ ಲೋಕವನ್ನೇ ಬಿಟ್ಟು ನಮ್ಮಮ್ಮ ಹೊರಟುಹೋಗಿದ್ದಳು.

ಈಗಲೂ ಕಿತ್ತಳೆಹಣ್ಣನ್ನು ನೋಡಿದಾಗ ಈ ಘಟನೆ ನೆನಪಾಗಿ ಸಂಕಟವಾಗುತ್ತದೆ. ಆಗ ಕಣ್ಣಿನಲ್ಲಿ ನೀರು ಬಾರದೆ ಇರುವುದಿಲ್ಲ.

• ಕುರುಮರಡಿಕೆರೆ ತಿಮ್ಮೇಶ

೧೯೪೨ನೆಯ ಇಸವಿ. ಭಾರತದಲ್ಲೆಲ್ಲ 'ಚಲೇಜಾವ್' ಚಳವಳಿಯ ಬಿಸಿ ಏರಿತ್ತು. ದೇಶದಾದ್ಯಂತ ಅನೇಕ ಸ್ವಾತಂತ್ರ್ಯ ಹೋರಾಟಗಾರರು ದಸ್ತಗಿರಿ ಮಾಡಲ್ಪಟ್ಟು ನಾನಾ ಹಿಂಸೆಗಳಿಗೊಳಗಾಗಿದ್ದರು.

ಆಗ ನನಗಿನ್ನೂ ಹದಿನಾಲ್ಕೇ ವರ್ಷ. ಮೈಸೂರಿನ ಮಹಾರಾಜಾಸ್ ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದೆ. ಇತರ ಅನೇಕ ವಿದ್ಯಾರ್ಥಿಗಳಂತೆ ನಾನೂ ನನ್ನ ತಮ್ಮನೂ ತುಂಬ ಉತ್ಸಾಹದಿಂದ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದೆವು. ನಾವು ನಮ್ಮ ಜಾಗದಿಂದ ಪ್ರತಿದಿನ ಪ್ರಾತಃಕಾಲ ಹೊರಡುತ್ತಿದ್ದ ಮೆರವಣಿಗೆಯಲ್ಲಿ ಸೇರಿಕೊಂಡು 'ಮಹಾತ್ಮ ಗಾಂಧೀಜೀಕೀ ಜೈ' 'ಭಾರತ ಮಾತಾಕಿ ಜೈ' ಇವೇ ಮುಂತಾದ ಘೋಷಣೆಗಳನ್ನು ಕೂಗುತ್ತಾ 'ಝೇಂಡಾ ಊಂಚಾ ರಹೇ ಹಮಾರಾ'ದಂತಹ ದೇಶಭಕ್ತಿಗೀತೆಗಳನ್ನು ಹಾಡುತ್ತಾ ಮಹಾರಾಜಾಸ್ ಕಾಲೇಜಿನ ಮೈದಾನಕ್ಕೆ ಬಂದು ನಡೆಯುತ್ತಿದ್ದ ಸಭೆಯಲ್ಲಿ ಭಾಗವಹಿಸಿ, ಆಗಿನ ವಿದ್ಯಾರ್ಥಿ ನಾಯಕರುಗಳಾಗಿದ್ದ ಎಚ್.ವೈ. ಶಾರದಾ ಪ್ರಸಾದ್, ಎಂ.ವಿ. ಕೃಷ್ಣಪ್ಪ, ಕೆ.ಎಸ್. ಅಬ್ದುಲ್ ಗಫೂರ್, ಹಾಲಪ್ಪ ಮುಂತಾದವರ ಸ್ಫೂರ್ತಿಯುತ ಭಾಷಣಗಳನ್ನು ಕೇಳಿದ ನಂತರ ಚದರುತ್ತಿದ್ದೆವು.

ಇದೇ ಸಂದರ್ಭದಲ್ಲಿ ವಿದ್ಯಾರ್ಥಿ ನಾಯಕರು ಏರ್ಪಡಿಸಿದ್ದ ಉಚಿತ ಹಿಂದಿ ಭಾಷೆ, ಮತ್ತು ಉಚಿತ ಚರಕಾ ಮತ್ತು ತಕಲಿ ತರಗತಿಗಳಿಗೂ ನಾವಿಬ್ಬರೂ ಸೇರಿ ಅವುಗಳನ್ನೂ ತಕ್ಕಮಟ್ಟಿಗೆ ಕಲಿತೆವು. ನಡುನಡುವೆ ನನ್ನ ಶಾಲೆಯ ಗೇಟಿನ ಮುಂದೆ ನಾನು 'ಪಿಕೆಟಿಂಗ್' ಕೂಡ ಮಾಡಿದ್ದುಂಟು.

ಈ ರೀತಿ ಒಂದು ದಿನ ನಾವು ಮೆರವಣಿಗೆಯಲ್ಲಿ ಸಾಗುತ್ತಿದ್ದಾಗ ಇದ್ದಕ್ಕಿದ್ದಂತೆ ಪೊಲೀಸರು ಬಂದು, ಮೆರವಣಿಗೆಯನ್ನು ತಡೆದು, ನಮ್ಮೆಲ್ಲರನ್ನೂ ಅಲ್ಲೇ ಸಿದ್ಧವಾಗಿದ್ದ ವ್ಯಾನಿನಲ್ಲಿ ತುಂಬಿಕೊಂಡು ಲಕ್ಷ್ಮೀಪುರಂ ಪೊಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋದರು. ಅಲ್ಲಿ ಮಾಮೂಲು ವಿಚಾರಣೆಯಾದ ನಂತರ ನನ್ನನ್ನೂ ನನ್ನ ತಮ್ಮನನ್ನೂ ಚಿಕ್ಕವಯಸ್ಸಿನವರೆಂಬ ಕಾರಣದಿಂದ ಪೊಲೀಸ್ ಸ್ಟೇಷನ್ನಿನಲ್ಲಿಯೇ ಇರಿಸಿಕೊಂಡು ಉಳಿದವರನ್ನೆಲ್ಲಾ ಜೈಲಿಗೆ ಕಳುಹಿಸಿಬಿಟ್ಟರು.

ನಾವಿಬ್ಬರು ಮಾತ್ರ ಮುಂದೇನು ಮಾಡುವುದೆಂದು ತಿಳಿಯದೆ ಸ್ಟೇಷನ್ನಿನಲ್ಲಿಯೇ ಸಾಯಂಕಾಲದವರೆಗೂ ಕೊಳೆಯುತ್ತಾ ಕುಳಿತಿದ್ದಾಗ ನನ್ನ ಅಣ್ಣನವರು (ಖ್ಯಾತ ಕಲಾವಿದರಾದ ದಿ. ಎಂ.ಟಿ.ವಿ. ಆಚಾರ್ಯರು) ಕೈಯಲ್ಲಿ ಒಂದು

ಟಿಫಿನ್ ಕ್ಯಾರಿಯರನ್ನು ಹೊತ್ತುಕೊಂಡು ಅಲ್ಲಿಗೆ ಬಂದರು. ಅವರು ಅಲ್ಲಿನ ಪೊಲೀಸ್ ಅಧಿಕಾರಿಯ ಅಪ್ಪಣೆ ಪಡೆದು ನಮ್ಮನ್ನು ಕಂಡು, "ಬಹಳ ಹೊತ್ತಾದರೂ ನೀವು ಮನೆಗೆ ಬರದಿದ್ದುದರಿಂದ ನಾವೆಲ್ಲಾ ಚಿಂತಿಸುತ್ತಾ ಕುಳಿತಿದ್ದಾಗ ಪೊಲೀಸಿನ ವನು ಬಂದು ನಿಮ್ಮ ವಿಷಯ ತಿಳಿಸಿದ. ಪಾಪ, ನೀವು ಊಟ ಇಲ್ಲದೆ ಸೊರಗುತ್ತಿದ್ದೀರೆಂದು ಅಮ್ಮ ಊಟ ಕಳಿಸಿದ್ದಾಳೆ. ನೀವು ಊಟ ಮುಗಿಸುವುದ ರಲ್ಲಿ ಪೊಲೀಸ್ ಅಧಿಕಾರಿಯ ಸೂಚನೆಯಂತೆ ನಿಮ್ಮ ಪರವಾಗಿ ಮುಚ್ಚಳಿಕೆಯ ಪತ್ರವನ್ನು ಬರೆದು, ಅವರಿಗೆ ಸಲ್ಲಿಸಿಬಿಟ್ಟು ನಿಮ್ಮನ್ನು ಮನೆಗೆ ಕರೆದು ಕೊಂಡು ಹೋಗುತ್ತೇನೆ," ಎಂದು ಹೇಳಿ ಅದ ರಂತೆಯೇ ಮಾಡಿದರು.

ಹೀಗೆ ಸ್ವಾತಂತ್ರ್ಯ ಹೋರಾಟಗಾರನಾಗಬೇಕೆಂ ದಿದ್ದ ನನ್ನ ಕನಸು ನನಸಾಗದೆಯೇ ಹೋಗಿ ಆ ಕೊರಗು ನನ್ನಲ್ಲಿ ಶಾಶ್ವತವಾಗಿ ಉಳಿದುಬಿಟ್ಟಿತು!

• ಎಂ.ಟಿ. ಸಂಪತ್‌ಕುಮಾರನ್

ಸುಮಾರು ೨೫ ವರ್ಷಗಳ ಹಿಂದೆ ನಾನು ಮಲೆನಾಡಿನ ಒಂದು ಹಳ್ಳಿಯಲ್ಲಿರುವ ಸರಕಾರೀ ಶಾಲೆಯಲ್ಲಿ ಆರನೇ ತರಗತಿಯಲ್ಲಿ ಓದುತ್ತಿದ್ದೆ. ಮನೆಯಿಂದ ಶಾಲೆ ಏಳು-ಎಂಟು ಫರ್ಲಾಂಗಿ ನಷ್ಟು ದೂರ. ನಾನು, ನಮ್ಮ ಚಿಕ್ಕಪ್ಪನ ಮಕ್ಕಳು, ದೊಡ್ಡಪ್ಪನ ಮಕ್ಕಳು ಎಲ್ಲರೂ ಜೊತೆಗೂಡಿ ಶಾಲೆಗೆ ಹೋಗಿ ಬರುತ್ತಿದ್ದೆವು. ಬತ್ತದ ಗದ್ದೆಯನ್ನು ದಾಟಿ ಶಾಲೆಗೆ ಹೋಗಬೇಕಾಗುತ್ತಿತ್ತು. ಮಳೆಗಾಲ ದಲ್ಲಿ ಗದ್ದೆಗಳಲ್ಲಿ ಮೀನುಗಳೂ, ಏಡಿಗಳೂ ನೀರು ಹಾವುಗಳೂ ಕಾಣಸಿಗುವುದು ಸಾಮಾನ್ಯ.

ಹೀಗೆ ಒಂದು ದಿನ ಶಾಲೆಗೆ ಹೋಗುತ್ತಿರಬೇ ಕಾದರೆ ಒಂದು ಕಡೆ ಏರಿ ಕಟ್ಟೆ ಒಡೆದು ಅದರಿಂದುಟಾದ ಒಂದು ಹಳ್ಳದಲ್ಲಿ ಮೀನುಗಳೂ ಏಡಿಗಳೂ ಓಡಾಡುತ್ತಿದ್ದವು. ಅವುಗಳನ್ನು ಹಿಡಿದು ಕಬಳಿಸಲು ಒಂದು ನೀರು ಹಾವು ಹಳ್ಳದ ಒಂದು ಬದಿಯಲ್ಲಿದ್ದ ಬಿಲದಿಂದ ಸ್ವಲ್ಪ ಹೊರಬಂದು ತಲೆಯೆತ್ತಿ ಇಣುಕಿ ನೋಡುತ್ತಿತ್ತು. ನನ್ನ ಜೊತೆಯ ಲ್ಲಿದ್ದವರು ಚಿಕ್ಕ ಚಿಕ್ಕ ಕಲ್ಲುಗಳನ್ನೆತ್ತಿ ಹಾವಿನ ಕಡೆಗೆ ಎಸೆಯುತ್ತಿದ್ದರು. ನಾನು ಗದ್ದೆಯ ಮಧ್ಯದಲ್ಲಿ ನಿಲ್ಲಿಸಿದ್ದ ಉದ್ದವಾದ ಬಿದಿರುಕೋಲನ್ನು ತಂದು, ಕೋಲಿನ ಒಂದು ತುದಿಯಿಂದ ಹಾವಿನ ತಲೆಗೆ ಚುಚ್ಚಲು ಪ್ರಯತ್ನಿಸುತ್ತಿದ್ದೆ. ಹಾಗೆ ಮಾಡಿದಾಗಲೆಲ್ಲ ಹಾವು ತನ್ನ ತಲೆಯನ್ನು ಬಿಲದೊಳಗೆ ಎಳೆದುಕೊ ಳ್ಳುವುದು, ಸ್ವಲ್ಪ ಸಮಯದ ನಂತರ ಹೊರಕ್ಕೆ ಇಣುಕಿ ನೋಡುವುದು ಹೀಗೆ ನಡೆದೇ ಇತ್ತು. ಶಾಲೆಗೆ ಹೊತ್ತಾಗಿದ್ದರಿಂದ ಕೋಲನ್ನು ಅಲ್ಲೇ ಬಿಸುಟು ಓಟಕಿತ್ತೆವು.

ಸಾಯಂಕಾಲ ಶಾಲೆ ಬಿಟ್ಟನಂತರ ಮನೆಗೆ ಹಿಂದಿರುಗುತ್ತಿದ್ದಾಗ, ಹಳ್ಳದ ಬಳಿ ಆ ಹಾವು ಸರಸರನೆ ಬಂದು ತನ್ನ ಅರ್ಧ ಶರೀರವನ್ನು ಮೇಲೆತ್ತಿ ನನ್ನ ಮೊಣಕಾಲ ಕೆಳಗೆ ಪಟಪಟನೆ ಕುಟುಕತೊಡಗಿತು. ನಾನು ಭಯದಿಂದ ಕಿರುಚ ತೊಡಗಿದಾಗ ನನ್ನ ದೊಡ್ಡಪ್ಪನ ಮಗ ಧೈರ್ಯ ದಿಂದ ಹತ್ತಿರ ಬಂದು, ಹಾವನ್ನೆಳೆದು ಮೇಲೆತ್ತಿ, ದೂರ ಬಿಸಾಕಿದ. ನಾನು ಭಯದಿಂದ ನಡುಗು ತ್ತಿದ್ದೆ.

ಹೇಗೋ ಮನೆಗೆ ಬಂದು, ಕಾಲಿನ ಗಾಯ ವನ್ನು ತೋರಿಸಿ, ಹಾವು ಕಚ್ಚಿದ ವಿಷಯವನ್ನು ಹಿರಿಯರಿಗೆ ತಿಳಿಸಿದಾಗ ಹಾವಿನ ಚಹರೆಯನ್ನು ತಿಳಿದು, ಅದು ನೀರು ಹಾವು; ಏನೂ ಆಗುವುದಿಲ್ಲ ಎಂದು ಧೈರ್ಯ ಹೇಳಿ, ಒಸರುತ್ತಿದ್ದ ರಕ್ತವನ್ನು ಒರೆಸಿ, ಗಾಯಕ್ಕೆ ಸ್ವಲ್ಪ ಸುಣ್ಣವನ್ನು ಹಚ್ಚಿದರು. ಅಲ್ಲದೆ ಇನ್ನು ಮೇಲೆ ಹುಷಾರಾಗಿ ನಡೆಯಿರಿ ಎಂದು ಎಚ್ಚರಿಕೆಯನ್ನೂ ನೀಡಿದರು. ಅಂದಿನಿಂದ ಏನೋ ಒಂದು ತರಹದ ಭೀತಿ ನನ್ನಲ್ಲಿ ಆವರಿಸಿ, ಕನಸಿನಲ್ಲಿ ಹಾವು ಕಂಡರೂ ಬೆಚ್ಚಿ ಬೀಳುವಂತಾ ಗುತ್ತದೆ.

ಹಾವಿನ ದ್ವೇಷ ಹನ್ನೆರಡು ವರ್ಷ ಎಂದು ಹೇಳುತ್ತಾರೆ. ಆದರೆ ಆ ನೀರುಹಾವು ಹನ್ನೆರಡು ಗಂಟೆಯೊಳಗೇ ತನ್ನ ಸೇಡನ್ನು ತೀರಿಸಿಕೊಂಡಿತು.

ಮನುಷ್ಯ ಆಗಲಿ ಅಥವಾ ಬೇರಾವ ಸಾಧು ಪ್ರಾಣಿಯೇ ಆಗಲಿ ತನಗೆ ಯಾರಾದರೂ ನಿಷ್ಕಾ ರಣವಾಗಿ ಕೇಡನ್ನುಂಟುಮಾಡಿದರೆ ಎಂದಾದ ರೊಮ್ಮೆ ಸೇಡನ್ನು ತೀರಿಸಿಕೊಳ್ಳದೇ ಬಿಡದು ಎಂಬುದು ಈ ಘಟನೆಯಿಂದ ನನ್ನ ಅನುಭವಕ್ಕೆ ಬಂದಿತು.

• ಮೀನಾಕ್ಷಿ ತಿಮ್ಮಯ್ಯ

ಕಥೆ

# ಗಾರ್ಬೇಜು ಹಾಕ್ತೀನಿ

ಫ್ರಾನ್ಸ್‌ನ ನೀಲ ಸಮುದ್ರದ ಅಂಚಿನಲ್ಲಿ, ಕೋಟ್ ಪಾಕೇಟಿನ ಗುಲಾಬಿ ಹೂವಿನಂತೆ ಅಂಟಿಕೊಂಡಿತ್ತು ಬೋಜಾಯ್ ಎಂಬ ಪಟ್ಟಣ. ಬಹಳ ವರ್ಷಗಳ ಹಿಂದೆ ಈ ಪಟ್ಟಣ ಮುಳ್ಳಿನ ಬಳ್ಳಿಯಂತೆ ಬೆಳೆಯುತ್ತಾ ಹೋಯ್ತು. ಅದು ಎಷ್ಟು ವಿಸ್ತಾರವಾಗಿ ಬೆಳೆಯಿತೆಂದರೆ ಹಗಲೂ ರಾತ್ರಿ ಉತ್ಪತ್ತಿಯಾಗುತ್ತಿದ್ದ ನಾಯಿ ಸಂತೆ, ಕೊಳಕು, ಗಾರ್ಬೇಜು ಮತ್ತು ಬೇಡದ ಬಿಸಾಕಿದ ವಸ್ತುಗಳೆಲ್ಲಾ ಕಪ್ಪು ಹೊಗೆಯಂತೆ ಬೆಳೆದು ಮನೆಯೊಳಗಿನ ಭೂತದಂತೆ ಕಾಡತೊಡಗಿತು.

ಈ ಹೊಲಸನ್ನೆಲ್ಲಾ ಏನು ಮಾಡುವುದು! ಎಲ್ಲೀಂತ ಹಾಕುವುದು! ಯಾರಿಗೇಂತ ಕೊಡುವುದು!

ಬೀಚಿನ ಉದ್ದಕ್ಕೆ ಹೊಯ್ಗೆ ಉಂಟಲ್ಲಾ! ಅದರ ಮೇಲೆ ರಾಶಿ ಹಾಕುವುದಾ? ಅದು ಪಾಪ, ಯಾಕಂದ್ರೆ ಈ ಭೂಲೋಕದ ಯಾವ ಯಾವ ಕಡೆಯಿಂದ ಎಂತೆಂಥವರೆಲ್ಲಾ ಬರುತ್ತಾರೆ ಈ ಬೀಚಿಗೆ. ಮ್ಯಾಪ್‌ನಲ್ಲಿ ಬೋಜಾಯ್ ಹುಡುಕಿಕೊಂಡು ಬರ್ತಾರೆ. ಇಲ್ಲಿಗೆ ಬಂದು ಆರಾಮವಾಗಿ ದಿನ-ವಾರಗಟ್ಟಲೆ ಕಳೆಯುತ್ತಾರೆ. ಅವರೆಲ್ಲಾ ಬರ್ತಾರಲ್ವಾ ಅಂತ ಊರಿನವರೂ ಬರ್ತಾರೆ, ದಂತದಂತೆ ಹೊಳೆಯುವ ಮೈಯನ್ನು ಎಲ್ರಿಗೂ ಕಾಣಲಿಕ್ಕೆ ತೋರಿಸಿಕೊಂಡು ಬೀಚಿನ ಹೊಯ್ಗೆ ಮೇಲೆ ಹುಚ್ಚುನಾಯಂತೆ ಆಚೆ ಈಚೆ ಹೋಗ್ತಾನೇ ಇರ್ತಾರೆ. ಹೀಗೆಲ್ಲಾ ಇರುವಾಗ ಹೊಯ್ಗೆ ಮೇಲೆ ಕೊಳಕು ರಾಶಿ ಹಾಕುವುದಾ? ಥೂ!

ಮತ್ತೆ ಸಮುದ್ರಕ್ಕೆ ಬಿಸಾಕುವುದಂದ್ರೆ ಅದೂ ಸಾಧ್ಯವಿಲ್ಲ. ಸಮುದ್ರದ ನೀರು ಕೊಳೆಯಾಗುವುದಿಲ್ವಾ? ವಾಸನೆ ಬರುವುದಿಲ್ವಾ? ಹೊಯ್ಗೆ ಮೇಲೆ ಕಾಲು ಬಿಡಿಸಿ ಮಲಕ್ಕೊಂಡು ನೀರು ನೋಡುತ್ತಾ ಇರ್ಲಿಕ್ಕೆ ಆಗ್ತದಾ?

ಬೀಚು ಕ್ಲೀನಾಗಿರಬೇಕು, ನೀರು ಹಾಳಾಗಬಾರದು. ನೆರಕರೆಯಲ್ಲಿ ಕೊಳಕಿರಬಾರದು. ಹಾಗೆಲ್ಲಾ ಇರುವಾಗ....

ಮನೆಯ ಹಿಂಭಾಗದ ಬೇಲಿಯಂತೆ ಪಟ್ಟಣದ ಒಂದು ಬದಿಯುದ್ದಕ್ಕೂ ಹರಡಿಕೊಂಡಿದ್ದ ಗುಡ್ಡದಂಚಿನಲ್ಲಿ ರಾಶಿರಾಶಿ ಹಾಕ್ಕೊಂಡು ಬರ್ತಿದ್ದ ಗಾರ್ಬೇಜು, ಗುಡ್ಡದಷ್ಟೇ ಎತ್ತರವಾಗುತ್ತಾ ಬಂತು. ಅಲ್ಲಿ ನಿರಂತರವಾಗಿ ಹರಡುತ್ತಿತ್ತು ವಾಸನೆ. ಅಲ್ಲಿದ್ದ ನೊಣ, ನುಸಿ, ಹೆಗ್ಗಣಗಳೆಲ್ಲಾ ಗುಣವಾಗದ ಕಾಯಿಲೆಯಂತೆ ಪಟ್ಟಣದ ಜನರನ್ನು ಕಾಡತೊಡಗಿದವು. ಯಾರಿಗೂ ತೊಂದರೆ ಕೊಡದೆ ಬೀಚಿನ ಹೊಯ್ಗೆ ಮೇಲೆ ಮಲಗಿದವರನ್ನು ಹೆದರಿಸಲು ಸುರುಮಾಡಿದವು. ಕೆಟ್ಟ ಮುಖದ ನಾಯಿ-ಬೆಕ್ಕುಗಳು ಸ್ವಿಮ್ಮಿಂಗ್ ಪೂಲ್ ಹತ್ತಿರ, ಟೆನ್ನಿಸ್ ಕೋರ್ಟಲ್ಲಿ ಮತ್ತು ಆಟದ ಬಯಲಲ್ಲಿ ಓಡಾಡತೊಡಗಿದವು. ಕಾಗೆ-ಹದ್ದುಗಳು ಜನರ ನಿದ್ದೆಯಲ್ಲೂ ಕುಣಿಸಿಕೊಂಡು ಅವಾಂತರ ಎಬ್ಬಿಸತೊಡಗಿದವು. ಗಾರ್ಬೇಜು ಗುಡ್ಡದಿಂದ ಹರಿದು ಬರುವ ಕೊಳಕು ನೀರು ಪಟ್ಟಣದ ಪಾರ್ಕುಗಳ ಕೆರೆಗಳಲ್ಲಿ ಕಂಡು ಬಂತು.

ಅವರಿಂದ, ಇವರಿಂದ ಎಲ್ಲಾ ಕಂಪ್ಲೇಂಟು ಬರ್ಲಿಕ್ಕೆ ಸುರುವಾಯ್ತು. ಊರಿನ ಮುಖಂಡರ ಕಿವಿ-ಮೂಗು ಕತ್ತರಿಸುತ್ತೇವಂತ ಹೆದರಿಸಿ ಚೈನ್

## ನೋಡ ನೋಡುತ್ತಿರುವಂತೆಯೇ ಆ ವಿಚಿತ್ರ ಪ್ರಾಣಿ ತಾನು ಕೂತ ಕಲ್ಲು ಬೆಂಚನ್ನೇ ಕಚ್ಚಿ ಕಚ್ಚಿ ತಿನ್ನತೊಡಗಿತು!

• ಶಾಂತಾರಾಮ ಸೋಮಯಾಜಿ

ಲೆಟರ್ ಬಂತು. ಹನ್ನೆರಡು ವರ್ಷದಿಂದ ಪುಢಾರಿಯಾಗಿ ಮೆರೆಯುತ್ತಿದ್ದವನೊಬ್ಬನ ಹಂದಿ ಫಾರ್ಮಿಗೆ ಬೆಂಕಿ ಬಿತ್ತು. ಅವನ ಮಾವನ ಮನೆಯ ಕುಡಿಯುವ ನೀರಿನ ಬಾವಿಗೆ ಯಾರೋ ಸಗಣಿ ಹಾಕಿದರು. ಮತ್ತೊಬ್ಬ ಪುಢಾರಿಯ ಮಗಳ ಸ್ಕೂಲ್‌ಬ್ಯಾಗಿನೊಳಗೆ ಸತ್ತ ಹೆಗ್ಗಣ ಸೇರಿತು.

ಊರಿನ ಹಲವಾರು ಮುಖಂಡರು 'ಗ್ರೇಸ್ ಕೆಫೆ' ಹೆಸರಿನ ರೆಸ್ಟುರಾಂಟ್‌ದಲ್ಲಿ ಸೇರಿಕೊಂಡು ಹಗಲೂ ರಾತ್ರಿ ಚರ್ಚೆ ಸುರು ಮಾಡಿದರು. ಪ್ರತಿ ರಾತ್ರಿ ಮೆಜಾರಿಟಿ ಸದಸ್ಯರು ಎಷ್ಟು ಸಾಧ್ಯವೋ ಅಷ್ಟು ಕುಡಿದು, ಬಾಯಿ ಆಂ ಮಾಡಿ, ಕಣ್ಣು ಓರೆ ಮಾಡಿ, ಮೇಜಿನ ಮೇಲೆ ಹಣೆ ಜಜ್ಜಿ ನಿದ್ದೆ ಹೋಗುವ ತನಕ ಚರ್ಚೆ ಮುಂದುವರಿಯುತ್ತಿತ್ತು.

ಅರುವತ್ತೇಳು ದಿನ ಚರ್ಚೆ ಮುಂದುವರಿದು ಒಂದು ನಿರ್ಧಾರಕ್ಕೆ ಬಂದರು. ಅದೇನೆಂದರೆ ಈ ಗಾರ್ಬೇಜ್ ಪ್ರಾಬ್ಲೆಮ್ ಭೂಲೋಕದ ಮನುಷ್ಯರಿಂದ ನಿವಾರಣೆಯಾಗುವಂಥದ್ದಲ್ಲ.

ಮತ್ತೆ? ಇದಕ್ಕೆ ಆ ದೇವ್ರೇ ಸಹಾಯ ಮಾಡಬೇಕೆಂದು ತೀರ್ಮಾನಕ್ಕೆ ಬಂತು. ಅರುವತ್ತೆಂಟನೇ ದಿನ ಒಂದು ಮಹಾಕಾನೂನು ಹೊರಟಿತು. ಬೋಜಾಯ್ ಪಟ್ಟಣದ ನಾಗರಿಕರೇ ಕೇಳಿ..... ಕಿವಿಗೊಟ್ಟು ಕೇಳಿ.....

ಬೋಜಾಯ್ ಪಟ್ಟಣದ ಮೂವತ್ತಮೂರು ಪ್ರಾರ್ಥನಾ ಮಂದಿರಗಳಲ್ಲಿ, ಊರಿನ ಗಾರ್ಬೇಜು ರೋಗ ನಿವಾರಣೆಗೆಂದೇ ಪ್ರತಿ ದಿನ ಪೂಜೆಯಾಗಲೇಬೇಕೆಂದು ಕಟ್ಟಪ್ಪಣೆ ಹೇಳಿತು. ಪೂಜೆ ನಡೆಸದ ಪ್ರಾರ್ಥನಾ ಮಂದಿರಗಳನ್ನು ಹಂದಿ ಸಾಕಣೆ ಕೇಂದ್ರಗಳಾಗಿ ಬದಲಾಯಿಸಲಾಗುವುದೆಂದೂ ಕಟ್ಟಪ್ಪಣೆಯಲ್ಲಿತ್ತು.

ಮೂವತ್ತಮೂರು ಪ್ರಾರ್ಥನಾ ಮಂದಿರಗಳಲ್ಲೂ ಗಾರ್ಬೇಜು ಪೂಜೆ ಸುರುವಾಯ್ತು. ಹೆಚ್ಚಿನವಲ್ಲಿ ದಿನಕ್ಕೊಂದು ಸಲ, ಕೆಲ ಮಂದಿರಗಳಲ್ಲಿ ಎರಡೆರಡು ಸಲ, ಬೆಳಿಗ್ಗೆ, ಮಧ್ಯಾಹ್ನ ಅಥವಾ ಮಧ್ಯಾಹ್ನ, ಸಂಜೆ.

ನಲುವತ್ತಾರು ದಿನ ಪೂಜೆ ನಡೆದ ಮೇಲೆ ಒಂದು ಪವಾಡ ನಡೆಯಿತು. ಆ ಶುಕ್ರವಾರ ಬೆಳಿಗ್ಗೆ ನಡೆದದ್ದು ಅದು ಮುದುಕರಿಗೆ ಅಥವಾ ವಯಸ್ಸಾದ ಸದಸ್ಯರಿಗೆ ಮಾತ್ರ ಬಾಗಿಲು ತೆರೆಯುತ್ತಿದ್ದ ಒಂದು ಪ್ರಾರ್ಥನಾ ಮಂದಿರದಲ್ಲಿ.

ಪವಾಡ ಎಂದರೆ ಒಂದು ಅಶರೀರವಾಣಿ ಕೇಳಿಸಿದ್ದು. ಬೆಳಿಗ್ಗಿನ ಪೂಜೆ ಮುಗಿದು, ಮೊಣಕಾಲೂರಿದ ಹಳಬರು ಎದ್ದು ನಿಂತುಕೊಳ್ಳಲು ಪ್ರಯತ್ನ ಮಾಡುತ್ತಿದ್ದಾಗಲೇ ಮಾತು ಕೇಳಿಬಂತು ಮಂದಿರದೊಳಗಿಂದ.... ಅಥವಾ ಹೊರಗಿಂದ?

ಅಶರೀರವಾಣಿ ಹೇಳಿದ್ದಿಷ್ಟೇ: ಬೋಜಾಯ್ ಪಟ್ಟಣದ ಹೊಲಸು ತಿನ್ನಲಿಕ್ಕೆಂದೇ, ಕರುಣಾಮಯ ದೇವರು, ಒಬ್ಬ ರಾಕ್ಷಸನನ್ನು ಕಳುಹಿಸಿದ್ದಾನೆ. ಪಟ್ಟಣದ ದಕ್ಷಿಣ ತುದಿಯ ಮೀನು ಮಾರ್ಕೆಟ್ಟಿಗೆ ತಾಗಿಕೊಂಡೇ ಇರುವ ಬಸ್‌ಸ್ಟಾಪಿನ ಕಲ್ಲು ಬೆಂಚಿನ ಮೇಲೆ ರಾಕ್ಷಸ ಕುಳಿತುಕೊಂಡಿದ್ದಾನೆ. ಹೋಗಿ ಅವನನ್ನು ಉಪಯೋಗಿಸಿಕೊಳ್ಳಿ..... ಅಷ್ಟೇ ವಿಷಯ. ಕೊನೆಗೆ 'ನಿಮಗೆಲ್ಲಾ ಒಳ್ಳೆಯದಾಗಲಿ' ಎಂಬ ಹರಕೆಯೂ ಇತ್ತು.

ಆ ಸೀನಿಯರ್ ಸಿಟಿಜನ್‌ರಿಗೆ ರಾಕ್ಷಸನನ್ನು

ಹಿಡಿದುಕೊಂಡು ಏನು ಮಾಡ್ಲಿಕ್ಕೆ ಸಾಧ್ಯ? ಅವರು ಹೋಗಿ ಊರ ಮುಖಂಡರಿಗೆ, ಕೇಳಿದ್ದನ್ನು ಕೇಳಿದ ಹಾಗೇ ಹೇಳಿದರು. ಆದರೆ ಮುಖಂಡರು ಪಾಲಿಟಿಕ್ಸ್ ಆಡಿ ತಿಳಿದವರಲ್ವಾ? ಈ ಅಶರೀರವಾಣಿ ಸುದ್ದಿಯನ್ನು ಅವರು ನಂಬುತ್ತಾರಾ? ಒಂದು ಪೈಸೆಗೂ ನಂಬಲಿಲ್ಲ, ಕೆಲವರು, ಈ ಮುದುಕರಿಗೆ ತಲೆ ಕೆಟ್ಟಿದೆ ಎಂದರು. ಭ್ರಾಂತಿಯಲ್ಲಿದ್ದಾರೆ ಅಂತ ಹೇಳಿದರು. ಕಿವಿಯೇ ಸರಿಯಾಗಿ ಕೇಳಿಸದವರಿಗೆ ಅಶರೀರವಾಣಿ ಎಂತ ಕೇಳುವುದು ಮಣ್ಣು? ಎಂದರು. ಬೆಳಿಗ್ಗೆ ಹಲ್ಲುಜ್ಜುವ ಮೊದಲೇ ಕುಡೀಲಿಕ್ಕೆ ಸುರುಮಾಡುವವರಿಗೆ ಅಶರೀರವಾಣಿಯೂ ಕೇಳಿಸೀತು, ಚೈನೀಸ್‌ರು ಬೈಬಲ್ ಓದುವುದೂ ಕೇಳಿಸೀತು ಅಂತ ಹಂಗಿಸಿ ಮಾತಾಡಿದರು.

ಆದರೆ ಮುಂದಿನ ಇಲೆಕ್ಷನ್ನಿನಲ್ಲಿ ನಿಮಗೆ ಖಂಡಿತಾ ಓಟು ಹಾಕುವುದಿಲ್ಲ ಅಂತ ಮುದುಕರು ಹೆದರಿಸಿದ ಮೇಲೆ, ಮುಖಂಡರು-'ಹಾಳಾಗಿ ಹೋಗ್ಲಿ ಇವರು, ಒಮ್ಮೆ ನೋಡಿ ಬರುವಾ' ಅಂತ ಹೊರಟರು.

ಮುಖಂಡರ ಗುಂಪು ಮುದುಕರ ಗುಂಪಿನೊಂದಿಗೆ ದಕ್ಷಿಣ ತುದಿಯ ಮೀನು ಮಾರ್ಕೆಟ್ಟಿಗೆ ಬಂತು. ಬಸ್‌ಸ್ಟಾಪ್ ಖಾಲಿ. ಕಲ್ಲು ಬೆಂಚಿನ ಮೇಲೆ ಹನ್ನೆರಡಡಿ ಉದ್ದದ ಆನೆಯಷ್ಟು ದಪ್ಪದ ತಿಮಿಂಗಿಲದ ಬಾಯಿಯ ರಾಕ್ಷಸನನ್ನು ನೋಡ ಬಂದಿದ್ದವರಿಗೆ ಏನುಂಟು ಅಲ್ಲಿ? ಎಲ್ಲುಂಟು



ರಾಕ್ಷಸ? ಮುಖಂಡರಿಗೆ ಕೋಪ ಬಾರದಿರುತ್ತದಾ? ಈ ಮುದುಕರ ಹಣೆಬರಹವೇ ಇಷ್ಟು....

ಆದರೆ ಕಲ್ಲು ಬೆಂಚಿನ ಮೇಲೊಂದು ಚಿಕ್ಕ ಪ್ರಾಣಿಯಿತ್ತು. ಹತ್ತು ಇಂಚು ಉದ್ದ, ಎರೆ ಹುಳದಂತಹ ಮೈ. ಕಪ್ಪೆಯಂಥ ಮುಖ.... ಆ ಒಂದು ವಿಚಿತ್ರ ಪ್ರಾಣಿಯನ್ನು ಕೆಲವರು ನೋಡಿದರು. ಅದರ ಮೈಮೇಲೆ ಹುಲಿಯಂತಹ ಅಡ್ಡ ಗೆರೆಗಳು, ಬೆಕ್ಕಿನಂಥ ರೋಮಗಳು..... ತೀರಾ ವಿಚಿತ್ರ....

ಒಮ್ಮೆಗೇ ಬಂದ ಜನರ ಗುಂಪು ನೋಡಿ, ಆ ವಿಚಿತ್ರ ಪ್ರಾಣಿ ಮಂಗನಂತೆ ಹಲ್ಲುಕಿರಿಯಿತು. ಹಲ್ಲುಗಳು ಸುಣ್ಣದಂತೆ ಬಿಳಿಯಾಗಿ ಗರಗಸದಂತೆ ಚೂಪಾಗಿದ್ದುವು. 'ನೋಡಿ.... ನೋಡಿ, ಇದೇ ಮುದುಕರ ರಾಕ್ಷಸ' ಅಂತ ಯಾರೋ ತಮಾಷೆ ಮಾತಾಡಿದರು, ಕೆಲವರು ಬಿದ್ದು ಬಿದ್ದು ನಕ್ಕರು. 'ನೋಡಿ ನಿಮ್ಮ ರಾಕ್ಷಸನನ್ನು.'

ಆದರೆ ಅವರು ನೋಡುತ್ತಿರುವಂತೆಯೆ ಆ ವಿಚಿತ್ರ ಪ್ರಾಣಿ ತಾನು ಕೂತ ಕಲ್ಲು ಬೆಂಚನ್ನು ಕಚ್ಚಿ ಕಚ್ಚಿ ತಿನ್ನತೊಡಗಿತು. ಕುರ್ರ್ ಕುರ್ರ್ ಅಂತ ಬಾಯೊಳಗೆ ಕಡಿಯುವ ಸದ್ದು ಕೇಳಿ ಬರುತ್ತಿತ್ತು. ಜನರು 'ಹೇ, ಹೇ', 'ಓ ಗಾಡ್,' 'ಇನ್‌ಕ್ರೆಡಿಬಲ್' ಎಂದೆಲ್ಲಾ ಉದ್ಗಾರ ಉದ್ಗರಿಸುತ್ತಿರುವಂತೆ ಕಪ್ಪು



ಕಲ್ಲಿನ ಬೆಂಚು ಅರ್ಧ ಖಾಲಿ.

ಆದರೆ ವಿಚಿತ್ರವೆಂದರೆ ಆ ಪ್ರಾಣಿಯ ಗಾತ್ರ ಮಾತ್ರ ಚೂರೂ ಬದಲಾಗಲಿಲ್ಲ, ಅದೇ ಉದ್ದ ಅದೇ ದಪ್ಪ, ಅದೇ ಮೈ.... ಜನ ನುಗ್ಗಿಕೊಂಡು ಹತ್ತಿರ ಬಂದರು. ಅವರ ಕಣ್ಣೆದುರಿಗೇ ಬೆಂಚು ಖಾಲಿ. ಈಗ ಅದರ ಬಾಯಿ ಬೆಂಚಿನ ಕಾಲನ್ನು ಹಿಡಿದಿದೆ. ಕುರ್ರ್.... ಕುರ್ರ್....

ಕೆಲವೇ ನಿಮಿಷದಲ್ಲಿ ಅಲ್ಲಿ ಉಳಿದದ್ದು ಬಸ್ ಸ್ಟಾಪಿನ ಆರು ಸ್ಟೀಲು ಕಂಬ ಮತ್ತು ಕೆಂಪು ಹಂಚಿನ ಮಾಡು..... ಅವೂ ಈ ರಾಕ್ಷಸನ ಹೊಟ್ಟೆ ಸೇರುವ ಮೊದಲೇ ಇದನ್ನು ಆ ಗಾರ್ಬೇಜು ಗುಡ್ಡಕ್ಕೆ ಬಿಟ್ಟು ಬಿಡಬೇಕೆಂದು ನಿಶ್ಚಯವಾಯ್ತು.

ಕೆಲವರು ಓಡಿದರು, ಓಡಿ ಮೊಲದ ಗೂಡು ತಂದರು. ರಾಕ್ಷಸನ ಬಾಲ ಹಿಡಿದು ಗೂಡಿನೊಳಕ್ಕೆ ಎಳೆದು ಹಾಕಿದರು. ಗೂಡನ್ನು ಕಟೋರಿಯ ಮೇಲೆ ಇಟ್ಟರು..... ರಾಕ್ಷಸ ಈಗ ಗೂಡಿನ ಕಂಬಿಯನ್ನೇ ಕಚ್ಚಿ ಕಚ್ಚಿ ತಿನ್ನತೊಡಗಿದ. ಕುರ್ರ್... ಕುರ್ರ್.... ಓ ದೇವರೇ.... 'ಅದಕ್ಕೆ ಬೇರೇನಾದ್ರೂ ಆಹಾರ ಹಾಕಿ" "ಕೊಳೆತು ಬಿಸಾಕಿದ ಮೀನು ತನ್ನಿ" "ಇಟ್ಟಿಗೆ ಆಗ್ಬಹುದು, ಅದ್ನೇ ತನ್ನಿ" ಎಲ್ಲಾ ಗಡಿಬಿಡಿಯಿಂದ ಬೊಬ್ಬೆ ಹಾಕತೊಡಗಿದರು. ಇಟ್ಟಿಗೆ ಬಂತು, ಬಿಸಾಕಿದ ಮೀನಿನ ತಲೆಗಳು ಬಂದವು. ಕೊಳೆತ ತರಕಾರಿ ಬಂತು. ಮರದ ತುಂಡುಗಳು ಬಂದವು..... ಎಲ್ಲವನ್ನೂ ಗೂಡಿನೊಳಗೆ ತುರುಕಿ ತುರುಕಿ ಇಟ್ಟ ಹಾಗೇ ಆ ರಾಕ್ಷಸ ಒಂದು ಚೂರೂ ಬಿಡದೇ ತಿನ್ನುತ್ತಾ ಹೋದ. ಬೆಂಕಿಯೊಂದಿಗೆ ಹೋರಾಡುವವರಂತೆ ಜನ ಕೊಳಕುವಸ್ತುಗಳನ್ನೆಲ್ಲಾ ರಾಕ್ಷಸನಿಗೆ ಉಣಿಸುತ್ತಲೇ ಹೋದರು.... ಪೇಪರ್, ಕಲ್ಲಿದ್ದಲು, ಪ್ಲಾಸ್ಟಿಕ್‌ಚೀಲ, ಹಳೆಯ ಪಾದರಕ್ಷೆ, ಸವೆದ ಹಾಸಿಗೆ, ಕೊಳೆತ ಮಾಂಸ, ತೂತಾದ ಬಟ್ಟೆ ಬರೆ.... ಎಲ್ಲಾ ಅದರ ಹೊಟ್ಟೆಯೊಳಗೇ ಸೆಕೆಂಡಿನಲ್ಲಿ ಮಾಯವಾಗುತ್ತಿತ್ತು....ಕುರ್ರ್ ಕುರ್ರ್ ಕುರ್ರ್..... ಆದರೆ ಅದರ ಗಾತ್ರ ಮಾತ್ರ ಒಂದು ಚೂರೂ ಬದಲಾಗಲಿಲ್ಲ.

ಗಾರ್ಬೇಜು ರಾಕ್ಷಸನನ್ನು, ನಿನ್ನೆ ಸಂಜೆಗೆಂತ ಇವತ್ತಿಗೆ ನಾಲ್ಕೂವರೆ ಇಂಚು ಎತ್ತರ ಬೆಳೆದ ಗಾರ್ಬೇಜು ಗುಡ್ಡಕ್ಕೆ ಬಿಟ್ಟು ಬಂದ ಮೇಲೆ, ನಗರದಲ್ಲಿ ಹಿಂದೆಂದೂ ಕಾಣದ ಶಾಂತಿ. ಮುಖಂಡರಿಗೆ ಆ ಗಾರ್ಬೇಜು ರಾಕ್ಷಸನನ್ನ ತಾವೇ ತಮ್ಮ ಹೊಟ್ಟೆಯಲ್ಲಿ ಬೆಳೆಸಿ ಹೆತ್ತವರ ಹಾಗೆ ತೃಪ್ತಿ, ಜಂಭ. ಮುದುಕರ ಪ್ರಾರ್ಥನಾ ಮಂದಿರದ ಪೂಜೆಯನ್ನು ಪೇಪರಿನವರು ಹೊಗಳಿದ್ದೇ ಹೊಗಳಿದ್ದು. ಮನುಷ್ಯರು ಕಾಲಿಡುವ ಕಡೆ ಇನ್ನು ಕೊಳಕು, ಗಲೀಜು ನಾಯಿ, ವಾಸನೆಹಂದಿ, ಅಸಹ್ಯ ಹೆಗ್ಗಣ, ವಾಕರಿಕೆ ತರುವ ನೊಣಗಳನ್ನೆಲ್ಲಾ ನೋಡಬೇಕಾಗಿಲ್ಲವಲ್ಲಾ ಅಂತ ಜನ ಪುಗ್ಗದಂತೆ ಹಿಗ್ಗಿದರು.

ಬೋಜಾಯ್ ನಾಗರಿಕರೇ, ಇನ್ನು ನಾವು ಗಾರ್ಬೇಜಿಗೆ ಹೆದರುವುದೇ ಬೇಡ. ಎಂತದಕ್ಕೆ ಅಂತ ಸಾರಿದರು ಮುಖಂಡರು. ಯಾರು ಎಷ್ಟು ಬೇಕಾದರೂ ಗಾರ್ಬೇಜು ಹೊರಡಿಸಬಹುದು. ಯಾವ ತರದ್ದೂ ಆಗ್ತದೆ... ಕೊಳೆತ ನಾಯಿ ಮರಿ, ನೆರಕರೆಯವರು ಬಿಸಾಕಿದ ಊಟದೆಲೆ, ಬಸ್ಸಿನ ಹಳೆ ಟಯರ್, ಮಾರ್ಗದ ಬದಿ ಗುಟ್ಟಲ್ಲಿ ಬಿಸಾಕಿದ ಟ್ಯಾಲೆಟ್, ತುಕ್ಕು ಹಿಡಿದ ಯಾರಿಗೂ ಬೇಡವಾದ ಸೈಕಲ್ಲು.... ಏನು ಬೇಕಾದ್ರೂ ತನ್ನಿ, ಏನು ಬೇಕಾದ್ರೂ ಬಿಸಾಕಿ. ನಾವು ಏನೂ ಫೈನ್ ಹಾಕುವುದಿಲ್ಲ ಎಂದರು. ದೇವರೇ ಕಳುಹಿಸಿದ ಗಾರ್ಬೇಜು ರಾಕ್ಷಸ ಇರುವಾಗ ಯಾಕೆ ಹೆದರುತ್ತೀರಿ? ತನ್ನಿ, ನಾಗರಿಕರೇ ತನ್ನಿ. ನೋ ಪ್ರಾಬ್ಲೆಮ್.

ಒಂದು ವಾರದಲ್ಲೇ ಗಾರ್ಬೇಜು ಗುಡ್ಡ ನಾಲ್ಕಿಂಚು ತಗ್ಗಿತು. ಮುಂದೆ ಹದಿನೈದು ದಿನದಲ್ಲಿ ಕಾಲುಭಾಗ ಗುಡ್ಡ ಖಾಲಿ, ಒಂದು ತಿಂಗಳ ನಂತರ ನೋಡುತ್ತಾರೆ, ಅರ್ಧ ಗುಡ್ಡವೇ ಇಲ್ಲ... ಓ ದೇವರೇ ಹೀಗೂ ತಿನ್ನುವುದಾ?.... ತಿನ್ನುತ್ತಲೇ ಇರುವುದಾ? ಸ್ಟಾಪೇ ಇಲ್ವಾ!

ಗಾರ್ಬೇಜು ರಾಕ್ಷಸ ತಿನ್ನುತ್ತಲೇ ಇರ್ತದೆ. ಒಂದು ಗಳಿಗೆ ಕೂಡಾ ಸ್ಟಾಪ್ ಮಾಡುವದಂತಿಲ್ಲ. ರೆಸ್ಟ್ ಇಲ್ಲವೇ ಇಲ್ಲ. ಮಲಗುವುದು ಇಲ್ವೇ ಇಲ್ಲ... ರಾತ್ರಿಯಾಗಲೀ ಹಗಲಾಗಲೀ.... ಹರಟೆ ಇಲ್ಲ. ಪೇಪರ್ ಓದುವುದಿಲ್ಲ, ಪಾಲಿಟಿಕ್ಸ್ ಮಾತಾಡುವುದಿಲ್ಲ. ದಪ್ಪ ವಾದಕ್ಕಿಳಿಯುವುದಿಲ್ಲ. ಮನೆಯವಳೊಂದಿಗೆ ಜಗಳಾಡುವುದಿಲ್ಲ. ಕುಡಿದು ಬೀಳುವುದಿಲ್ಲ. ತಿನ್ನುವುದೊಂದೇ.... ಕುರ್ರ್... ಕುರ್ರ್... ಕುರ್ರ್..... ತಿನ್ನುತ್ತಲೇ ಇರುವುದು. ಹಗಲು, ರಾತ್ರಿ ಎಲ್ಲಾ ಒಂದೇ. ತಿನ್ನುತ್ತಲೇ ಇರುವುದು....

ಎರಡು ತಿಂಗಳೊಳಗೆ ಮುಕ್ಕಾಲು ಗುಡ್ಡ ಖಾಲಿ.... ನೋಡಿ ನೀವು, ಇನ್ನು ಹತ್ತೇ ದಿನದಲ್ಲಿ ನಮ್ಮ ಪಟ್ಟಣದಲ್ಲಿ ಗಾರ್ಬೇಜೇ ಇಲ್ಲದಂತಾಗುತ್ತದೆ. ಈ ಇಡೀ ಭೂಲೋಕದಲ್ಲಿ ಗಾರ್ಬೇಜಿನ ಚೂರಿರದ ಪಟ್ಟಣವೆಂದರೆ ನಮ್ಮದ್ದೊಂದೇ. ಅಪ್ಪಟ ಕ್ಲೀನ್‌ಸಿಟಿ ಅಂದರೆ ಬೋಜಾಯ್. ನಾಗರಿಕರೇ, ನಮ್ಮಷ್ಟು ಹೆಮ್ಮೆ ಪಡುವವರು ಬೇರೆ ಯಾರೂ ಇಲ್ಲ. ಏನು ಹೇಳ್ತೀರಿ ನಾಗರಿಕರೇ.... ಎಂದೆಲ್ಲಾ ಕೊಚ್ಚಿಕೊಂಡರು, ಮುಖಂಡರು.

ರಾಕ್ಷಸ ಗಾರ್ಬೇಜು ರಾಶಿಯನ್ನು ತಿನ್ನುವುದನ್ನು ನೋಡಲಿಕ್ಕೆ ಬಂದ ಐದು ವರ್ಷದ ಹುಡುಗನೊಬ್ಬ ತನ್ನ ತಾಯಿಯಲ್ಲಿ ಕೇಳಿದ, 'ಈ ಗಾರ್ಬೇಜೆಲ್ಲಾ ತಿಂದಾದ ಮೇಲೆ ರಾಕ್ಷಸ ಏನು ತಿಂತಾನೆ?'

ಅದನ್ನು ಕೇಳಿದ ಅಧ್ಯಾಪಕನೊಬ್ಬ ಮನೆಗೆ ಬಂದ ಮೇಲೆ ತನ್ನ ಹೆಂಡತಿಗೆ ಅದೇ ಪ್ರಶ್ನೆ ಹಾಕಿದ. ಆಕೆ ಪಟ್ಟಣದ ಒಬ್ಬ ಮುಖಂಡನ ಆಫೀಸಿನಲ್ಲಿ ರಿಸೆಪ್ಷನ್‌ನಲ್ಲಿ ಕೆಲಸ ಮಾಡುತ್ತಿದ್ದಳು. ಅವರ ಡೆಸ್ಕಿಗೆ ಪೇಪರ್ ಓದಲಿಕ್ಕಂತ ಬಂದ ಮುಖಂಡನಲ್ಲಿ ಅದೇ ಪ್ರಶ್ನೆ ಹಾಕಿದಳು, ಅಧ್ಯಾಪಕನ ಹೆಂಡತಿ. ಅದನ್ನು ಕೇಳಿದ್ದೇ ತಡ, ಮುಖಂಡನ ಬಾಯಿ ಮೊಸಳೆಯ ಬಾಯಂತೆ ಅಗಲವಾಗಿ ತೆರೆದುಕೊಂಡಿತು. ಅದರಿಂದ 'ಹೋ' ಎಂಬ ಧ್ವನಿ ಲಿಕ್ಕರ್ ವಾಸನೆಯೊಂದಿಗೆ ಹೊರಬಂತು. ಅವನು ಆ ಕೂಡಲೇ ತನ್ನ ಉರುಟು ಹ್ಯಾಟನ್ನು ತಲೆಗೆ ಹಾಕ್ಕೊಂಡು ಗಾರ್ಬೇಜು ಗುಡ್ಡಕ್ಕೆ ಓಡಿದ. ಅಲ್ಲಿ ಉಳಿದ ಗಾರ್ಬೇಜೆಂದರೆ ಎಷ್ಟು? ಮೂರು ನಾಲ್ಕು ದಿನಕ್ಕೆ ಮಾತ್ರ. ಹೆಚ್ಚೆಂದರೆ ಒಂದು ಆರು ದಿನ ಅಷ್ಟೇ.... ಮತ್ತೆ? ಮತ್ತೆ?....

ಅದೇ ರಾತ್ರಿ ಮುಖಂಡರ ವಿಶೇಷ ಸಭೆ ಸೇರಿತು. ಹಲವಾರು ಸಲಹೆಗಳು ಬಂದುವು. ಹಲವಾರು ವೈನ್ ಬಾಟಲಿ ಖಾಲಿಯಾದರೂ ಸರಿ ಹೋಗುವ ಉತ್ತರ ಬರಲೇ ಇಲ್ಲ. ಏನು ಮಾಡುವುದು? ಏನು ಮಾಡುವುದು?....

ಮೂರೇ ದಿನ..... ಮೂರು ದಿನದ ನಂತರ ಬಂದು ನೋಡ್ತಾರೆ.... ಗಾರ್ಬೇಜು ಗುಡ್ಡ ಸಂಪೂರ್ಣ ಖಾಲಿ. ಗುಡ್ಡದ ಗುರುತೇ ಇಲ್ಲ. ಕಪ್ಪು ಮಣ್ಣು, ಒದ್ದೆ ನೆಲ ಅಷ್ಟೇ.... ಮತ್ತೆ ರಾಕ್ಷಸ? ಗಾರ್ಬೇಜು ರಾಕ್ಷಸ?

ಎಲ್ಲಿ ನಮ್ಮ ಗಾರ್ಬೇಜು ರಾಕ್ಷಸ? ದೇವರೇ ಕಳುಹಿಸಿದ ರಾಕ್ಷಸ? ಅಲ್ಲೇ ಪಕ್ಕದ ಸ್ಮಶಾನದ ಗುರುತಿನ ಕಲ್ಲುಗಳು ರಾತ್ರಿ ಬೆಳಗಾಗುವುದರೊಳಗಾಗಿ ಕಣ್ಮರೆಯಾದಾಗ ಗಾರ್ಬೇಜು ರಾಕ್ಷಸನನ್ನು ಕಂಡು ಹುಡುಕುವುದು ಕಷ್ಟವಾಗಲಿಲ್ಲ.

ಆ ಸಂಜೆ ನೋಡುತ್ತಾರೆ... ಸ್ಮಶಾನದ ಇನ್ನೊಂದು ದಿಕ್ಕಿನಲ್ಲಿ ಪಟ್ಟಣದ ಸೋಶಿಯಲಿಸ್ಟ್ ಪೇಪರಿನ ಗೋಡೌನಿನ ಒಂದು ಪಾರ್ಶ್ವ ಮುರಿದುಬಿದ್ದಿದೆ. ಗಾರ್ಬೇಜು ರಾಕ್ಷಸ ಅಲ್ಲಿ ಮಾತಿಲ್ಲದೆ ಕೂತುಕೊಂಡು ಒಂದೊಂದೇ ಇಟ್ಟಿಗೆಯನ್ನು ತಿನ್ನುತ್ತಿದೆ. ಕುರ್ರ್ ಕುರ್ರ್ ಕುರ್ರ್....

ಆ ಗೋಡೌನಿಗೆ ತಾಗಿಕೊಂಡಿರುವುದೇ ಮುದುಕ ಸದಸ್ಯರ ಪ್ರಾರ್ಥನಾ ಮಂದಿರ. ಅಶರೀರವಾಣಿ ಕೇಳಿಬಂದ ಸ್ಥಳ..... ಜನ ಹೇಳಿದರು-

> ಅರ್ಚನೆ ಎಂದರೆ ಏನು?
> ವಾಸ್ತವವನ್ನು ಅರಿತುಕೊಳ್ಳುವ ಯತ್ನ ಅಷ್ಟೆ.
> -ಅನ್ಸಾರಿ
>
> *
>
> ಹರಿತ ಕತ್ತಿಗಿಂತಲೂ ಮಿಗಿಲು
> ಹರಿತ ಬುದ್ಧಿ.
> -ಎಕ್ಸೆಲೆಸಿಯಾಸ್ಟಸ್

'ಕೊಲ್ಲಿ ಕೊಲ್ಲಿ ಅದನ್ನು' 'ಸುಟ್ಟು ಹಾಕಿ ಅದನ್ನು ಈ ಕೂಡ್ಲೇ' ಅಂತ ಬೊಬ್ಬೆ ಹಾಕಿದರು. 'ಸಮುದ್ರಕ್ಕೆ ಬಿಸಾಕಿ. ಯಾಕೆ ನೋಡ್ತಾ ಇದ್ದೀರಿ...' 'ನಮ್ಮ ಇಡೀ ಪಟ್ಟಣ ಇನ್ನು ಅದರ ಹೊಟ್ಟೆ ಸೇರುವ ಮೊದಲೇ ಅದನ್ನು ಕೊಂದು ಹಾಕಿ.....'

ಹಲವಾರು ಕೋವಿಗಳು ಸದ್ದು ಮಾಡಿದವು, ಟ್ಯಾಂಕುಗಳು ಗುಡುಂ ಗುಡುಂ ಅಂತ ಬೆಂಕಿ ಕಾರಿದವು. ಕುದಿಯುವ ಎಣ್ಣೆಯನ್ನು ಸುರಿಯಲಾಯ್ತು. ಬಿಸಿನೀರು ಬಿತ್ತು. ಬೆಂಕಿಯ ರಾಶಿ ರಾಶಿ ಬಂತು....

ಆದರೆ ಗಾರ್ಬೇಜು ರಾಕ್ಷಸನಿಗೆ ಏನೂ ಆಗಲಿಲ್ಲ. ಯಾವ ಬದಲಾವಣೆಯೂ ಇಲ್ಲ. 'ಅದಕ್ಕೆ ಸಾವೇ ಇಲ್ಲ ಅಂತ ಕಾಣ್ತದೆ' 'ದೇವರು ಕಳುಹಿಸಿದ್ದಲ್ವಾ! ಹೇಗೆ ಸಾಯ್ತದೆ?' 'ಸಾಯುವುದೇ ಇಲ್ವಾ

ಹಾಗಂದ್ರೆ?'

ಮರುದಿನ ನೋಡ್ತಾರೆ! ಮುದುಕರ ಪ್ರಾರ್ಥನಾ ಮಂದಿರವೇ ಕಾಣೆ. ಒಂದಾದರೂ ಇಟ್ಟಿಗೆ ಉಳಿದಿಲ್ಲ.... ಓ ದೇವರೇ.... 'ಇನ್ನು ನಾವಿಲ್ಲಿ ಇರುವುದು ಹೇಗೆ?' 'ಇನ್ನು ಒಂದು ವಾರದಲ್ಲಿ ನಾವು ಕಟ್ಟಿಸಿದ್ದು ಒಂದೂ ಉಳಿಯಲಿಕ್ಕಿಲ್ಲ ಇಲ್ಲಿ'. 'ನೋಡಿ, ನೋಡಿ ಆ ಕಾನ್ವೆಂಟ್ ಜರಿದು ಬಿದ್ದಿದೆ....' 'ಇನ್ನು ನಮ್ಮ ರೈನ್‌ಬೋ ಹೋಟೇಲಿಗೆ ಬರ್ತದೆ ಅದು...' 'ಖಾಲಿ ಮಾಡಿ, ರೈನ್ ಬೋ ಹೋಟೇಲಲ್ಲಿ ರೂಮು ಮಾಡಿದವರನ್ನೆಲ್ಲಾ ಬೇರೆ ಹೋಟೇಲಿಗೆ ಕಳಿಸಿ. ಕೂಡ್ಲೆ ಆಗ್ಬೇಕು' 'ಆ ಹೊಟ್ಲು ತಿಂದ ಮೇಲೆ ಅದು ಸುಮ್ನಿರ್ತದಾ? ಇನ್ನೊಂದು ಹೋಟ್ಲಿಗೆ ಬರ್ತದೆ. ನಮ್ಮ ನಮ್ಮ ಮನೆಗೆ ಬರ್ತದೆ.... ಎಲ್ಲಾ ಕಡೆಗೆ ಬರ್ತದೆ. ಸುಮ್ನಿರ್ತದಾ ಅದು?'' 'ದೇವರೇ ಕಾಪಾಡಬೇಕು ನಮ್ಮನ್ನು....''

ಅದೇ ಸಮಯ ಅಮೇರಿಕಾ ದೇಶದಿಂದ ಒಂದು ದೊಡ್ಡ ಹಡಗು ಬೋಜಾಯ್ ಪಟ್ಟಣದಲ್ಲಿ ಬಂದು ನಿಂತಿತ್ತು. ಈ ಯಾವ ರಗಳೆಯೂ ಬೇಡ ಅಂತ ಕೆಲ ಮುದುಕರು ತಮಗೆ ಸಿಕ್ಕಿದ ಸಾಮಾನು ತಕ್ಕೊಂಡು ಹಡಗೇರಿದರು. ಅವರು ಹಡಗೇರಿದ್ದು ನೋಡಿ ಇನ್ನು ಕೆಲವರು ಹೊರಟರು. ಅವರೆಲ್ಲಾ ಹೊರಟುಹೋಗುವಾಗ ನಾವಿಲ್ಲಿ ಕೂತುಕೊಂಡು ವರ್ರಿ ಮಾಡುವುದೆಂತಕ್ಕೆ, ನಮಗೇನಾಗಬೇಕು, ನಾವೂ ಹೊರಡುವಾ ಅಂತ ಉಳಿದವರೂ ಹೊರಟರು..... 'ಈ ಒಂದು ಹಡಗು ಎಲ್ಲಿಗೆ ಸಾಕು? ಬೇರೊಂದು ಕಳಿಸಲಿಕ್ಕೆ ಹೇಳಿ.' 'ಒಂದೆರಡೆಲ್ಲಿ ಸಾಕು.... ಒಂದು ಮೂರು ನಾಲ್ಕು ಡಜನ್ ಕಳಿಸಲಿಕ್ಕೆ ಹೇಳಿ. ಕೂಡಲೇ ಕಳಿಸಬೇಕು.'

ಒಂದೇ ವಾರದೊಳಗೆ ಬೋಜಾಯ್ ಪಟ್ಟಣದ ನಾಗರಿಕರೆಲ್ಲಾ ತಮ್ಮ ತಮ್ಮ ಸಾಮಾನು, ನಾಯಿ, ಗಿಳಿ, ಬೆಕ್ಕು ಮತ್ತು ಗೋಲ್ಡ್‌ಫಿಶ್‌ಗಳೊಂದಿಗೆ ಅಮೆರಿಕಾ ದೇಶಕ್ಕೆ ಪಲಾಯನ ಮಾಡಿದರು.

ಬೋಜಾಯ್ ಪಟ್ಟಣ ಈಗ ಖಾಲಿ ಮತ್ತು ಸಂಪೂರ್ಣ ಕ್ಲೀನ್. ಮನುಷ್ಯರು ಕಟ್ಟಿಸಿದ, ತಯಾರುಮಾಡಿದ ಒಂದೇ ಒಂದು ವಸ್ತು ಕೂಡಾ ಉಳಿಯಲಿಲ್ಲ. ಉಳಿದದ್ದು ನಿಸರ್ಗದ ಮಣ್ಣು, ಗಿಡ, ಮರ, ಹುಲ್ಲು, ನೀರು, ಪ್ರಾಣಿ ಪಕ್ಷಿಗಳು ಮಾತ್ರ.

ಅವುಗಳೊಂದಿಗೆ ಒಂದು ಗಾರ್ಬೇಜ್ ರಾಕ್ಷಸ. ಹೊಟ್ಟೆ ಹಸಿದು, ಆಹಾರಕ್ಕಾಗಿ ತಾಳ್ಮೆಯಿಂದ ಕಾದು ಕುಳಿತ ವಿಚಿತ್ರಾಕಾರದ ಮಾತಾಡದ ರಾಕ್ಷಸ. ●



# ಫ್ರೆಡ್ ಹಾಯ್ಲರ್ ನಿಯಮ

• ಜಯಸುದರ್ಶನ

ಈ ಬ್ರಹ್ಮಾಂಡಕ್ಕೆ ಕೊನೆ ಮೊದಲಿಲ್ಲ, ಇದು
ಅನಾದಿ ಎಂದರು ಫ್ರೆಡ್ ಹಾಯಲರು;
ಸದಾ ಇದ್ದ ಹಾಗಿರುತ್ತದೆ ಸೃಷ್ಟಿ, ಅಲ್ಲಿ-
ಲ್ಲ ಸತತ ಮಾರ್ಪಾಡು ಕಂಡರೂ.

ನಮ್ಮ ದೃಷ್ಟಿಗಿದು ಸ್ವಯಂಭೂವೇ ಇದ್ದೀತು
ನಾಲ್ಕು ಆಯಾಮಕ್ಕೆ ಆಗಿ ಬದ್ಧ.
ಗುರುತ್ವದಿತಿಮಿತಿ, ಕಾಲದೇಶದ ಗತಿಯರಿತು
ತನ್ನ ತಿಳಿದ ಜ್ಞಾನಿ ಸುಮ್ಮನಿದ್ದ.

ಇಷ್ಟಕೇ ದೇವರು ಬೇಕೆ, ಬೇಡವೆ ಎಂಬ ಘನ
ಜಿಜ್ಞಾಸೆ ಯಾಕೆ? ಬೇಕಾದ್ದು ನಮಗೆ.
ಕಂಡವನ ಕಣ್ಣು ವಿರಚಿಸಿದ ಹಾಗೆ ತೆರೆದಿರುವ
ವಿಶ್ವ ಕಣ್ಕಟ್ಟಲ್ಲ ಅರಿತವನಿಗೆ.

ಕಾಣುವಸಂಖ್ಯ ಕಣ್ಣು, ಮನಸುಗಳ ದ್ವಾರ
ಸೃಜನಶೀಲನಾಗಿರುವ ದೇವರು.
ಕಿಂಚಿತ್ತು ನಿಮ್ಮಲ್ಲಿ, ಒಂದಂಶ ನನ್ನಲ್ಲಿ,
ಸಕಲರಲಿ ಸರಿಸಮನಾಗಿ ಇರುವವರು.

ಪ್ರತ್ಯಕ್ಷ ಪ್ರಮಾಣ ಬ್ರಹ್ಮಾಂಡವಿದು,
ಬುದ್ಧಿಪೂರ್ವಕವಾದ ನಿರ್ಮಾಣ;
ಆಕಸ್ಮಿಕವಲ್ಲವೆನ್ನುವರು ಹಾಯಲರು,
ಉಳಿದದ್ದು ಅಂತೆಕಂತೆಯ ಪುರಾಣ.

ಹೀಗೆಂದ ಹಾಯಲರು ಯಾರೆಂದು ಕೇಳಿದರೆ
ಏನೆಂದು ಹೇಳುವುದು ನಿಮಗುತ್ತರ?
ಎಲ್ಲರಂತೆಯೆ ಈತ ದೈವಾಂಶ ಸಂಭೂತ,
ಒಂದು ಕೈ ಹೆಚ್ಚೇ ಎಂದರೂ ನೇರ.

ಬ್ರಹ್ಮಾಂಡ ಪಂಚಾಂಗ ರಚನೆಯಲಿ
ತಲ್ಲೀನ ಈ ಖಗೋಳ ವಿಜ್ಞಾನಿ.
ಸೃಷ್ಟಿ ಇರುವನಕ ಪಂಚಾಂಗ ಸುಳ್ಳಲ್ಲ,
ಅರೆಬರೆಯ ಬರೆಹ ಲೇಖನಿಯದೆನ್ನಿ.

ಅನಂತ ಮುಖಿ ಸತ್ಯ, ವಿಜ್ಞಾನಿ ಮುಂದಿಟ್ಟ
ದೈವದಾಕೃತಿಗೆ ಇಲ್ಲ ಅಂಕೆ.
ಕಂಡಂತೆ ಸೃಷ್ಟಿ, ಕಂಡರಿಸಿದಂತೆ ಕಾಣ್ಕೆ,
ಇವೆರಡೂ ದೈವ ಹೌದು ನಿಃಶಂಕೆ.

ಸ್ವರೂಪ ನಿಖರವಾಗದ ದೈವಕೆ ಅಗಣಿತ
ನೇತ್ರ, ದೃಷ್ಟಿಯೋ ಅಸೀಮ.
ತನ್ನ ನಿರ್ಮಿತಿಯಿಂದ ಹೊರಗಲ್ಲ ನಿರ್ಮಾತೃ,
ಒಳಗೆ ಎನ್ನುವುದು ಹಾಯಲರ ನಿಯಮ.

# ಹೆಣ್ಣು ಮಕ್ಕಳು ಕಡಿಮೆಯಾಗುತ್ತಿದ್ದಾರೆಯೆ?

• ಡಾ. ಎಚ್.ಎಸ್. ಮೋಹನ್

ಇಪ್ಪತ್ತೇಳು ವರ್ಷದ ಪಾರ್ವತಿ ಮುಂಬಯಿಯ ಧನಿಕರಲ್ಲಿ ಮನೆಗೆಲಸ ಮಾಡುವಾಕೆ. ಅವಳಿಗೆ ಈಗಾಗಲೇ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಅವಳ ಗಂಡ ಒಂದು ಫ್ಯಾಕ್ಟರಿಯ ನೌಕರ. ಅವನೊಮ್ಮೆ ಕಂಠಪೂರ್ತಿ ಕುಡಿದು ಬಂದಾಗ, ಇನ್ನೊಂದು ಹೆಣ್ಣುಮಗುವನ್ನು ಹೆತ್ತರೆ ಮನೆಯಿಂದ ಹೊರಹಾಕುವುದಾಗಿ ಬೆದರಿಸಿದ್ದ. ಪಾರ್ವತಿ ಮತ್ತೊಮ್ಮೆ ಗರ್ಭಿಣಿಯಾದಾಗ ತೀವ್ರ ಚಿಂತೆಗೊಳಗಾದಳು. ತನ್ನ ಗರ್ಭದಲ್ಲಿ ಬೆಳೆಯುತ್ತಿರುವ ಮಗು ಹೆಣ್ಣಾದರೆ? ಎಂಬ ಭಯ ಅವಳನ್ನು ಬಹುವಾಗಿ ಬಾಧಿಸಿತು. ಹುಟ್ಟಲಿರುವ ಮಗು ಹೆಣ್ಣೋ ಗಂಡೋ ಎನ್ನುವುದನ್ನು ಮೊದಲೇ ತಿಳಿದುಕೊಳ್ಳಲು ಅವಳು ಪ್ರಯತ್ನಿಸಿದಳು.

ಹೇಗೋ ಸ್ವಲ್ಪ ಹಣ ಕೂಡಿಸಿಕೊಂಡು ಸಮೀಪದ ಆಸ್ಪತ್ರೆಗೆ ಹೋಗಿ ಮಗುವಿನ ಲಿಂಗ ಪರೀಕ್ಷೆ ಮಾಡಿಸಿದಳು. ಗರ್ಭದಲ್ಲಿರುವ ಮಗು ಹೆಣ್ಣೇ ಸರಿ ಎಂದು ಅವಳಿಗೆ ಗೊತ್ತಾಯಿತು. "ದೈಹಿಕವಾಗಿ ತಾನು ಬಹಳ ಅಶಕ್ತಳು. ಮೂರನೇ ಮಗುವನ್ನು ಹೆರುವ ಸ್ಥಿತಿಯಲ್ಲಿ ತಾನಿಲ್ಲ. ಹಾಗಾಗಿ ವೈದ್ಯರು ಗರ್ಭಪಾತ ಮಾಡಿಸಬೇಕೆಂದು ಹೇಳಿದ್ದಾರೆ," ಎಂದು ಪತಿಯನ್ನು ಒಪ್ಪಿಸಿ ಕೇವಲ ೭೦ ರೂಪಾಯಿಗಳ ಖರ್ಚಿನಲ್ಲಿ ಗರ್ಭಪಾತ ಮಾಡಿಸಿಕೊಂಡು ಪತಿಯ ಆಕ್ರೋಶಕ್ಕೆ ಒಳಗಾಗುವುದನ್ನು ತಪ್ಪಿಸಿಕೊಂಡಳು.

ದಕ್ಷಿಣ ಕೋರಿಯದಿಂದ ವರದಿಯಾದ ಇಂತಹುದೇ ಮತ್ತೊಂದು ಉದಾಹರಣೆಯನ್ನು ಗಮನಿಸಿ. ಸೋಲ್‌ನ ಒಬ್ಬ ಪದವೀಧರ ಮಹಿಳೆಗೆ ಎರಡು ಹೆಣ್ಣುಮಕ್ಕಳು. ಒಂದು ಗಂಡು ಮಗುವನ್ನಾದರೂ ಅವಳು ಹೆರಬೇಕೆಂದು ಮನೆಯವರೆಲ್ಲರ ಆಶಯ, ಒತ್ತಡ. ಮತ್ತೊಮ್ಮೆ ಗರ್ಭವತಿಯಾದಾಗ ಅವಳೂ ಮಗುವಿನ ಲಿಂಗ ಪರೀಕ್ಷೆ ಮಾಡಿಸಿದಳು. 'ಅಲ್ಟ್ರಾಸೌಂಡ್' ಪರೀಕ್ಷೆಯಿಂದ ಗರ್ಭದಲ್ಲಿ ಬೆಳೆಯುತ್ತಿರುವ ಮಗು ಕೂಡ ಹೆಣ್ಣೇ ಎಂಬುದು ಖಚಿತವಾಯಿತು. 'ತನಗೆ ಇನ್ನೊಂದು ಮಗುವಾಗದಿದ್ದರೂ ಪರವಾಗಿಲ್ಲ; ಹೆಣ್ಣನ್ನು ಮಾತ್ರ ಹೆರಲಾರೆ' ಎಂದು ನಿಶ್ಚಯಿಸಿ, ೬ ತಿಂಗಳ ಗರ್ಭಿಣಿಯಾಗಿದ್ದರೂ ಆಗ ಅಪಾಯಕರವಾದ ಗರ್ಭಪಾತವನ್ನು ಮಾಡಿಸಿಕೊಂಡಳು.

ಯಾವುದೇ ತಾಯಿಗೆ, ಆಗತಾನೇ ಹುಟ್ಟಿದ ತನ್ನ ಮಗುವಿನ ಮೊದಲ ಅಳು ತೀರ ಅಪ್ಯಾಯಮಾನ. ಆದರೆ 'ಏಶಿಯಾ ವೀಕ್' ಪತ್ರಿಕೆ ಕೆಲವು ಸಮಯದ ಹಿಂದೆ ವರದಿ ಮಾಡಿದಂತೆ, ಏಶಿಯದ ಬಹಳ ಭಾಗಗಳಲ್ಲಿ ತಾಯಿಯ ಈ ಭಾವನೆ ಹುಟ್ಟಿದ ಮಗುವಿನ ಲಿಂಗಕ್ಕೆ ನೇರವಾಗಿ ಸಂಬಂಧಪಡುತ್ತದೆ ಎಂಬುದು ತೀರ ದೌರ್ಭಾಗ್ಯಕರ. ಚೀನಾ, ದಕ್ಷಿಣ ಕೋರಿಯದ ವಿವಿಧ ಸಮಾಜಗಳಲ್ಲಿಯೇ ಅಲ್ಲದೆ ಭಾರತ, ಪಾಕಿಸ್ತಾನ, ಮಲೇಶಿಯಗಳ ವಿವಿಧ ಮತಗಳಲ್ಲಿಯೂ ಶತಮಾನಗಳ ಹಿಂದಿನಿಂದ ಹೆಣ್ಣುಮಕ್ಕಳ ಬಗೆಗೆ ಗಟ್ಟಿಯಾದ ಮೂಢನಂಬಿಕೆ ಬೇರೂರಿದೆ.

ಇತ್ತೀಚಿನ ಆರ್ಥಿಕ ಬೆಳವಣಿಗೆ, ಹೆಚ್ಚುತ್ತಿರುವ ಆಧುನಿಕ ತಾಂತ್ರಿಕ ಜ್ಞಾನ, ಮೇಲೇರುತ್ತಿರುವ ಜನಜೀವನ ಮಟ್ಟ ಈ ಎಲ್ಲ ಪ್ರಗತಿಯ ನಡುವೆಯೂ ಈ ರೀತಿಯ ಮಲತಾಯಿ ಧೋರಣೆ ಹೆಚ್ಚುತ್ತಲೇ ಇದೆ. ಏಶಿಯದ ಹಲವಾರು ಆಸ್ಪತ್ರೆಗಳಲ್ಲಿ ಈ ಮೊದಲು ಹೇಳಿದ ಪಾರ್ವತಿ ಮತ್ತು ದಕ್ಷಿಣ ಕೋರಿಯದ ಮಹಿಳೆಯಂತೆ ಎಷ್ಟೋ ತಾಯಂದಿರು ತಮ್ಮ ಗರ್ಭದಲ್ಲಿರುವ ಮಗುವಿನ ಲಿಂಗವನ್ನು ತಿಳಿಯಲು ಉತ್ಸುಕರಾಗಿದ್ದಾರೆ. ಅದಕ್ಕಾಗಿ ಅವರು ವಿವಿಧ ಪರೀಕ್ಷೆಗಳ ಮೊರೆ ಹೋಗು

ತ್ತಿದ್ದಾರೆ. ಅವರಲ್ಲಿ ಬಹಳಷ್ಟು ತಾಯಂದಿರಿಗೆ, ಮಗು ಹೆಣ್ಣು ಎಂದು ಗೊತ್ತಾದ ಕೂಡಲೇ ಅನಿವಾರ್ಯವೋ ಎಂಬಂತೆ ಗರ್ಭಪಾತಕ್ಕೆ ಮುಂದಾಗುತ್ತಿದ್ದಾರೆ.

ಎಪ್ಪತ್ತರ ದಶಕದ ಮೊದಲ ಭಾಗದಲ್ಲಿ ಪಂಜಾಬಿನ ಕೆಲವು ವೈದ್ಯರು, ಜನರಲ್ಲಿ ಬೇರೂರಿರುವ ಈ ಪ್ರವೃತ್ತಿಯನ್ನು ಉಪಯೋಗಿಸಿಕೊಂಡು ಸಾಕಷ್ಟು ಲಾಭಗಿಟ್ಟಿಸಿಕೊಳ್ಳಬಹುದೆಂಬುದನ್ನು ಮನಗಂಡರು. ಇದಕ್ಕಾಗಿ ಅವರು ಆಗ ಮೊರೆ ಹೋದ ಪರೀಕ್ಷೆ 'ಅಮ್ನಿಯೋಸಿಂಟಸಿಸ್ ಪರೀಕ್ಷೆ.' ಸಾಮಾನ್ಯವಾಗಿ ಮಗುವಿಗೆ ಜನನಾಗತ ಊನವೇನಾದರೂ ಇದೆಯೆ? ಎನ್ನುವುದನ್ನು ಕಂಡುಹಿಡಿಯಲು ಉಪಯೋಗಿಸುತ್ತಿದ್ದ ಈ ಪರೀಕ್ಷೆಯಿಂದ ಶೇಕಡಾ ೯೭ರಷ್ಟು ಖಚಿತವಾಗಿ ಮಗುವಿನ ಲಿಂಗವನ್ನೂ ಪತ್ತೆ ಹಚ್ಚಬಹುದೆಂದು ಅವರು ಕಂಡುಕೊಂಡರು. ಕೂಡಲೇ ಉತ್ತರ ಭಾರತದ ಹಲವು ಕಡೆ ಈ ಪರೀಕ್ಷೆ ಮಾಡುವ ಆಸ್ಪತ್ರೆಗಳು ನಾಯಿಕೊಡೆಗಳಂತೆ ತಲೆಯೆತ್ತಲಾರಂಭಿಸಿದವು.

ಆಮ್ನಿಯೋಸಿಂಟಸಿಸ್ ಪರೀಕ್ಷೆಯಲ್ಲಿ ವೈದ್ಯರು, ನಾಲ್ಕು ತಿಂಗಳುಗಳ ಗರ್ಭಿಣಿಯಾದಾಗ, ತಾಯಿಯ ಕಿಬ್ಬೊಟ್ಟೆಯ ಭಾಗದಲ್ಲಿ ಚುಚ್ಚಿ ೨೦ ಮಿ.ಲೀ.ನಷ್ಟು 'ಅಮ್ನಿಯಾಟಿಕ್ ದ್ರವ'ವನ್ನು ಹೊರದೆಗೆದು ಈ ದ್ರವದಿಂದ ಮಗುವಿನ ಜೀವಕೋಶವನ್ನು ಪ್ರತ್ಯೇಕಿಸುತ್ತಾರೆ. ಅನಂತರ ಮೂರು ವಾರಗಳ ವರೆಗೆ ಈ ಜೀವಕೋಶಗಳನ್ನು ಪ್ರತ್ಯೇಕವಾದ ಮಾಧ್ಯಮದಲ್ಲಿ ಬೆಳೆಸುತ್ತಾರೆ. ಹೀಗೆ ಬೆಳೆಸಿದಾಗ ಜೀವಕೋಶದ ಬೆಳವಣಿಗೆಯಿಂದ ಭ್ರೂಣದ ಲಿಂಗ ಪತ್ತೆಯಾಗುತ್ತದೆ.

ಇತ್ತೀಚಿನ ದಿನಗಳಲ್ಲಿ ಈ ದಿಶೆಯಲ್ಲಿ ಬೇರೆ ರೀತಿಯ ಪರೀಕ್ಷೆಗಳು ಜನಪ್ರಿಯವಾಗುತ್ತಿವೆ. 'ಕೋರಿಯನ್ ವಿಲ್ಲಸ್ ಬಯಾಪ್ಸಿ' ಅಂತಹ ಒಂದು ಪರೀಕ್ಷೆ. ಇದನ್ನು ಗರ್ಭಧರಿಸಿದ ಪ್ರಾರಂಭಿಕ ದಿನಗಳಲ್ಲೇ ಮಾಡಬಹುದು ಮತ್ತು ಫಲಿತಾಂಶ ಬಹಳ ಬೇಗ ಗೊತ್ತಾಗುತ್ತದೆ. ಭ್ರೂಣದ ಹೊರಗಿನ ಪದರ 'ಕೋರಿಯನ್' ಬೆರಳಿನ ರೀತಿಯ, ಅಥವಾ 'ವಿಲ್ಲೈ' ಎಂಬ ಬೆಳವಣಿಗೆ ಹೊಂದುತ್ತವೆ. ಗರ್ಭ ಧರಿಸಿದ ೭-೯ನೆಯ ವಾರಗಳಲ್ಲಿ 'ಕೋರಿಯಾನಿಕ್ ವಿಲ್ಲೈ'ನ ಅಂಶವನ್ನು ಹೊರದೆಗೆದು ಪರೀಕ್ಷಿಸಿದಾಗ ಜನನಾಗತ ಊನಗಳನ್ನು ಕಂಡುಹಿಡಿಯುವುದೇ ಅಲ್ಲದೆ ಲಿಂಗವನ್ನು ಕೂಡ ಪತ್ತೆ ಹಚ್ಚಬಹುದು.

ಇನ್ನೊಂದು ತೀರಾ ಸುರಕ್ಷಿತ ಕ್ರಮವೆಂದರೆ 'ಅಲ್ಟ್ರಾಸೋನೋಗ್ರಾಫಿ'. ಇದರಲ್ಲಿ ತೀರಾ ವೇಗದ ಶಬ್ದದ ತರಂಗಗಳು ಟಿ.ವಿ.ಯ ರೀತಿಯ ಪರದೆಯ ಮೇಲೆ ಚಿತ್ರವನ್ನು ಮೂಡಿಸುತ್ತವೆ. ಇದು ಸಾಮಾನ್ಯವಾಗಿ ಮಗುವಿನ ವಯಸ್ಸು ಮತ್ತು ವೈಕಲ್ಯವನ್ನು ಅಥವಾ ಊನವನ್ನು ಕಂಡುಹಿಡಿಯಲು ಉಪಯೋಗವಾಗುತ್ತದೆ. ಹೆಚ್ಚಿನ ಸಂದರ್ಭದಲ್ಲಿ ಈ ಪರೀಕ್ಷೆಯಿಂದಲೂ ಮಗುವಿನ ಲಿಂಗ ಪತ್ತೆ ಹಚ್ಚಬಹುದು. ಆದರೆ ಇದರಲ್ಲಿ ಲಿಂಗ ಗೊತ್ತಾಗುವುದು ಗರ್ಭಿಣಿಯು ಕೊನೆಯ ಮಾಸಗಳಲ್ಲಿರುವಾಗ ಮಾತ್ರ.

ಭಾರತದಂತೆಯೇ ಅಪಾರ ಜನಸಂಖ್ಯೆ ಹೊಂದಿರುವ ಚೀನದಲ್ಲಿ ಗರ್ಭಪಾತ ಕಾನೂನಿನ ಪ್ರಕಾರ ಸರಿ ಮಾತ್ರವಲ್ಲ, ಜನಸಂಖ್ಯೆ ನಿಯಂತ್ರಣಕ್ಕೆ ಇದು ಒಂದು ಉತ್ತಮ ಮಾರ್ಗ ಎಂದು ಗ್ರಹಿಸಲಾಗುತ್ತಿದೆ. ೧೯೭೯ ರಿಂದ ಅಲ್ಲಿ 'ದಂಪತಿಗಳಿಗೆ ಒಂದೇ ಮಗು' ಎಂಬ ಯೋಜನೆ ಜಾರಿಯಲ್ಲಿರುವುದರಿಂದ ಗಂಡುಮಕ್ಕಳನ್ನು ಬಯಸುವವರ ಸಂಖ್ಯೆ ಅಲ್ಲಿ ಬಹಳ ಹೆಚ್ಚು. ಆದ್ದರಿಂದ ಅಲ್ಲಿನ ಸರಕಾರ ಭ್ರೂಣದ ಲಿಂಗ ಪರೀಕ್ಷೆಯನ್ನು ನಿಷೇಧಿಸಿದೆ ಮತ್ತು ಹೆಣ್ಣು ಭ್ರೂಣಗಳನ್ನು ಕೊಲ್ಲುವುದು ಅಕ್ಷಮ್ಯ ಅಪರಾಧ ಎಂದು ಭಾವಿಸಿದೆ. ಆದರೂ ನಡೆಯುತ್ತಿರುವ ಭ್ರೂಣ ಹತ್ಯೆಯನ್ನು ಪತ್ತೆಹಚ್ಚುವಲ್ಲಿ ವ್ಯವಸ್ಥೆಯ ಸಮರ್ಪಕತೆಯನ್ನು ಅಲ್ಲಿನ ಬಹಳ ಜನ ಪ್ರಶ್ನಿಸುತ್ತಾರೆ. ಕುಟುಂಬ ಯೋಜನೆಯ ಅಧಿಕಾರಿಗಳು ಈ ರೀತಿಯ ಭ್ರೂಣ ಹತ್ಯೆ ಗೊತ್ತಾದರೂ ತಮ್ಮ 'ಕೋಟಾ' ಪೂರೈಸಿ ಬೋನಸ್ ಹಣ ಪಡೆಯುವುದರಲ್ಲಿಯೇ ಆಸಕ್ತಿ ತೋರಿಸುತ್ತಾರೆ ಎಂದು ಹಲವರ ದೂರು.

ಅಲ್ಲಿ ಕೆಲವು ಹೆಣ್ಣು ಶಿಶುಗಳನ್ನು ಗುಹೆಗಳಲ್ಲಿ ಅಡಗಿಸಿಡುತ್ತಾರೆ, ಇನ್ನು ಕೆಲವನ್ನು ಗೋಣಿ ಚೀಲದಲ್ಲಿ ಕಟ್ಟಿ ನದಿಗೆ ಎಸೆಯುತ್ತಾರೆ. ಮತ್ತೆ ಕೆಲವನ್ನು ಕಸದ ತೊಟ್ಟಿಗಳಲ್ಲಿ ಬಿಸುಡುತ್ತಾರೆ. ಮತ್ತೆ ಕೆಲವಕ್ಕೆ ಒತ್ತಾಯಪೂರ್ವಕವಾಗಿ ಕೀಟನಾಶಕಗಳನ್ನು ತಿನ್ನಿಸಲಾಗುತ್ತದೆ. ಇಲ್ಲವೆ ಮರದ ಪೆಟ್ಟಿಗೆಗ

ಳಲ್ಲಿ ಬಂಧಿಸಿ, ದೂರದ ಮೈದಾನದಲ್ಲಿಟ್ಟು ಕೊಲ್ಲಲಾಗುತ್ತದಂತೆ.

ಚೀನಾದ ಉತ್ತರದ ಆನ್‌ಹುಯಿ ಪ್ರಾಂತದಲ್ಲಿ ೧೯೮೦-೮೧ರಲ್ಲಿ ೪೦ ಹೆಣ್ಣುಮಕ್ಕಳನ್ನು ನೀರಲ್ಲಿ ಮುಳುಗಿಸಿ ಕೊಲ್ಲಲಾಗಿದೆ ಎಂದು 'ಪೀಪಲ್ಸ್ ಡೈಲಿ' ಪತ್ರಿಕೆ ವರದಿಮಾಡಿದೆ. ೧೯೮೨ರಲ್ಲಿ, ದಕ್ಷಿಣದ ಗ್ವಾಗ್ ಡಾಂಗ್ ಪ್ರಾಂತದಲ್ಲಿ ೨೦೦ ಮಕ್ಕಳನ್ನು ಕೊಲ್ಲಲಾಗಿದೆ ಎಂದು 'ನಾನ್ ಫಾಗ್ ಡೈಲಿ'ಯ ಅಂದಾಜು. ಕೆಲವು ಸಂದರ್ಭಗಳಲ್ಲಿ ತಾಯಿಯ ಹಾಸಿಗೆಯ ಬಳಿ ದೊಡ್ಡ ನೀರು ತುಂಬಿದ ಬಕೆಟ್ ಇರಿಸಲಾಗುವುದಂತೆ. ಮಗುವು ಹೆಣ್ಣಾದರೆ ಕೂಡಲೇ ಅದನ್ನು ನೀರಲ್ಲಿ ಮುಳುಗಿಸಿ ಕೊಲ್ಲಲಾಗುತ್ತದೆ ಎಂಬುದು ತೀರಾ ಬರ್ಬರವಷ್ಟೇ ಅಲ್ಲ, ಆಘಾತಕರವೂ ಹೌದು.

ಕೋರಿಯದ ಆರ್ಥಿಕ ಯೋಜನಾ ಸಮಿತಿ ೧೯೮೫ರಲ್ಲಿ ವರದಿ ಮಾಡಿದಂತೆ, ಅಲ್ಲಿ ೪ ವರ್ಷದೊಳಗಿನ ಮಕ್ಕಳಲ್ಲಿ ೧೦೮ ಗಂಡು ಮಕ್ಕಳಿಗೆ ೧೦೦ ಹೆಣ್ಣು ಮಕ್ಕಳು ಇದ್ದರು. ಲಿಂಗ ಪತ್ತೆ ಹಚ್ಚುವ ಪರೀಕ್ಷೆ ಮತ್ತು ಗರ್ಭಪಾತಗಳು ಹೆಚ್ಚುತ್ತಿರುವುದನ್ನು ಮನಗಂಡು, ಅಲ್ಲಿನ ಸರಕಾರ ೧೯೮೭ರ ಫೆಬ್ರವರಿಯಿಂದ ಪರೀಕ್ಷೆಗಳನ್ನು ನಿಷೇಧಿಸಿದೆ.

ಉಚ್ಚಮಟ್ಟದ ಶಿಕ್ಷಣ ಮತ್ತು ಉನ್ನತ ಜೀವನ ಮಟ್ಟ-ಈ ಎರಡು ಕಾರಣಗಳು ಜಪಾನ್ ಮತ್ತು ಸಿಂಗಾಪುರಗಳಲ್ಲಿ ಹೆಣ್ಣು ಮಕ್ಕಳ ವಿರುದ್ಧದ ಭಾವನೆಗಳಿಗೆ ಅವಕಾಶವಿಲ್ಲದಂತೆ ಮಾಡಿವೆ. 'ಆಮ್ನಿಯೋಸಿಂಟಸಿಸ್' ಪರೀಕ್ಷೆ ೧೯೬೦ರಿಂದಲೇ ಜಪಾನಿನಲ್ಲಿ ಲಭ್ಯವಿದ್ದರೂ ಅದರ ದುರುಪಯೋಗವಾದ ಸಂದರ್ಭ ತೀರಾ ಕಡಿಮೆ; ಇಲ್ಲವೆಂದರೂ ಅಡ್ಡಿಯಿಲ್ಲ. ಹೀಗಾಗಿ ಹೆಣ್ಣು ಶಿಶುಗಳ ಹತ್ಯೆ ಅಲ್ಲಿ ಇಲ್ಲವೇ ಇಲ್ಲ. ಅಂತೆಯೇ ಹಾಂಗ್‌ಕಾಂಗ್‌ನಲ್ಲಿ ಕೂಡ ಹೆಣ್ಣು ಭ್ರೂಣದ ಹತ್ಯೆ ಇಲ್ಲವೇ ಇಲ್ಲವೆನ್ನುವಷ್ಟು ನಗಣ್ಯ.

ಈ ಎಲ್ಲ ವರದಿಗಳನ್ನು ಗಮನಿಸಿದಾಗ ನಮ್ಮಲ್ಲಿ ಕಾನೂನು ಸಾಮಾಜಿಕ ಪರಂಪರೆಯನ್ನು ಬದಲಾಯಿಸಬಲ್ಲದೆ? ಎಂಬ ಸಂಶಯ ಮೂಡುತ್ತಿದೆ. ಕೆಲವು ವರ್ಷಗಳ ಹಿಂದೆ ಮಹಾರಾಷ್ಟ್ರ ಸರಕಾರ ಈ ರೀತಿ ಲಿಂಗ ಪತ್ತೆಹಚ್ಚುವ ಎಲ್ಲ ಪರೀಕ್ಷೆಗಳನ್ನೂ ನಿಷೇಧಿಸಿತು. ಹೊಸ ಕಾನೂನಿನ ಪ್ರಕಾರ, ಅಲ್ಲಿ ಆಮ್ನಿಯೋಸಿಂಟಸಿಸ್‌ನಂತಹ ಪರೀಕ್ಷೆ ಅಂಗವೈಕಲ್ಯ ಅಥವಾ ಊನಗಳನ್ನು ಪತ್ತೆಹಚ್ಚಲು ಮಾತ್ರ ಉಪಯೋಗಿಸಬೇಕು. ಅಲ್ಲದೆ ಹಾಗೆ ಪರೀಕ್ಷೆ ಮಾಡಿದಾಗ ಈ ರೀತಿಯ ಎಲ್ಲ ಪರೀಕ್ಷೆಗಳನ್ನೂ ಸರಕಾರದಲ್ಲಿ ನೋಂದಾಯಿಸಬೇಕು. ಆದರೆ ಈ ರೀತಿಯ ಕಾನೂನಿನಿಂದ ಸಮಸ್ಯೆ ಪರಿಹಾರವಾಗುವುದೆ? ಕುಟುಂಬಯೋಜನಾ ತಜ್ಞರೊಬ್ಬರು ಹೇಳುವಹಾಗೆ ಈ ರೀತಿಯ ಕ್ರಮಗಳು ಅನೀತಿಯುತ ಅಕ್ರಮವಾದ ಕೃತ್ಯಗಳನ್ನು ಪ್ರೋತ್ಸಾಹಿಸುತ್ತವೆ ಮತ್ತು ನಿಜ ವೈದ್ಯರಿಗಿಂತ ಖೊಟ್ಟಿ ವೈದ್ಯರುಗಳಿಗೇ ಹೆಚ್ಚು ಪ್ರಯೋಜನ ಮಾಡಿಕೊಡುತ್ತವೆ. ಆದರೆ ಮಹಿಳೆಯರ ಹಕ್ಕುಗಳಿಗೆ ಹೋರಾಡುತ್ತಿರುವ ಶ್ರೀಮತಿ ವಿಭೂತಿ ಪಟೇಲ್, ಈ ರೀತಿಯ ಕ್ರಮಗಳಿಂದ ಲಿಂಗ ಪತ್ತೆ ಹಚ್ಚುವುದು ಖಂಡಿತ ಕಡಿಮೆ ಆಗುತ್ತದೆ; ಅಲ್ಲದೆ ಇದರಿಂದ ವಿಜ್ಞಾನದ ತಂತ್ರಜ್ಞಾನವನ್ನು ದುರುಪಯೋಗಪಡಿಸುವುದರ ವಿರುದ್ಧ ಮಹಿಳೆಯರ ಮತ್ತು ಗ್ರಾಹಕರ ಆಂದೋಳನಕ್ಕೆ ಹೆಚ್ಚಿನ ಬೆಂಬಲ ಕೊಟ್ಟಂತಾಗುತ್ತದೆ ಎಂದು ವಾದಿಸುತ್ತಾರೆ. ಹಾಗೆ ನೋಡಿದರೆ ನಮ್ಮ ಜನರಲ್ಲಿ ಗತಾನುಗತವಾಗಿ ಉಳಿದುಕೊಂಡು ಬಂದಿರುವ ಮೌಲ್ಯಗಳು ಬದಲಾದ ಹೊರತು, ಈ ರೀತಿಯ ಪರೀಕ್ಷೆಗಳು ನಡೆಯುವಂಥವೇ. ಅದರ ವಿರುದ್ಧ ನಾವು ಸತತವಾಗಿ ಹೋರಾಡಲೇಬೇಕು, ಅನ್ಯ ಮಾರ್ಗವೇ ಇಲ್ಲ ಎಂಬುದು ಅವರ ಅಭಿಪ್ರಾಯ.

ನಮ್ಮ ಸಂಸ್ಕೃತಿಯ ಆದ್ಯತೆಯನ್ನು ಬದಲಿಸುವುದು ಸುಲಭವಲ್ಲ. ಆದರೆ ಈಗಿನ ಸಾಮಾಜಿಕ ಶಿಕ್ಷಣ, ಕಠಿಣವಾದ ಕಾನೂನು ಮೊದಲಾದ ಕ್ರಮಗಳಿಂದ ಏಶಿಯದ ಬಹು ಸಂಸ್ಕೃತಿಯ ಸಮಾಜದಲ್ಲಿ ಗಂಡಸರು-ಹೆಂಗಸರಿಬ್ಬರಿಗೂ ನಿಜವಾದ ಸಮಾನತೆ ಬಂದು, ಹೆಂಗಸರೆಂದರೆ ಕೀಳು, ತಂದೆತಾಯಿಗಳಿಗೆ ಭಾರ ಎಂಬ ಭಾವನೆ ದೂರಗೊಳ್ಳುವುದು ಎಂದು ನಾವು ಆಶಿಸೋಣವೆ?

● ● ●

# ಕಚೇರಿಯಲ್ಲಿ ಹಾಸ್ಯ

• ಎಚ್. ಆನಂದರಾಮ ಶಾಸ್ತ್ರೀ

**ಕಚೇರಿಗಳಿಗೆ ಎಂಥೆಂಥಾ ಜನಾ ಬರ್ತಾರೇಂತೀರೀ? ದಿನದ ಕೆಲಸದ ಏಕತಾನತೆಯನ್ನು ಮುರಿದು ಒಂದಷ್ಟು ನಗಿಸಿ-ನಕ್ಕು ಹೋಗುವಂಥವರು.....**

'ಕಚೇರಿಯಲ್ಲಿ ಹಾಸ್ಯ' ಅಂದರೆ? ಸಂಗೀತ ಕಚೇರಿಯಲ್ಲಿ ಹಾಸ್ಯ? ಸರಿಹೋಯಿತು! ಸಂಗೀತ ಕಚೇರಿಯಲ್ಲಿ ಹಾಸ್ಯವೆಲ್ಲಿಂದ ಬರಬೇಕು? ಸಂಗೀತ ಅರ್ಥವಾಗದೇ ಇರುವವರಿಗೆ ಸಂಗೀತ ಗಾರರ ಹಾವಭಾವಗಳು ಹಾಸ್ಯವಾಗಿ ಕಾಣಬಹುದು. ಸಂಗೀತದ ಗಾಳಿ ಬೀಸುತ್ತಿದ್ದಂತೆ, ಸಂಗೀತದ ಗಂಧಗಾಳಿ ಇಲ್ಲದವರು ಕುಳಿತಲ್ಲಿಯೇ ತೂಕಡಿಸಿ ಬೀಳುವುದು ಉಳಿದವರಿಗೆ ಹಾಸ್ಯವಾಗಿ ತೋರಬಹುದು. ಇಷ್ಟು ಬಿಟ್ಟರೆ, ಸಂಗೀತವೆನ್ನುವುದೊಂದು ಗಂಭೀರ ಸಮಸ್ಯೆ; ಕ್ಷಮಿಸಿ, ಗಂಭೀರ ಕಲೆ. ಆದರೆ ನಾನಿಲ್ಲಿ ಹೇಳಹೊರಟಿರುವ ವಿಷಯ ಸಂಗೀತ ಕಚೇರಿಗೆ ಸಂಬಂಧಿಸಿದ್ದಲ್ಲ.

ಕಚೇರಿಯೆಂದರೆ ಬರೀ 'ಕಚೇರಿ,' ಅರ್ಥಾತ್, ಆಫೀಸು. 'ಆಫೀಸ್‌ನಲ್ಲಿ ಹಾಸ್ಯ' ಇದು ಈ ಬರಹದ ವಿಷಯ.

*

'ಗೋಕುಲಾಷ್ಟಮಿಗೂ ಇಮಾಂ ಸಾಹೇಬರಿಗೂ ಸಂಬಂಧ ಇರಬಹುದಾಗಲಿ ಕಚೇರಿಗೂ ಹಾಸ್ಯಕ್ಕೂ ಏನು ಸಂಬಂಧ?' ಎಂಬ ಪ್ರಶ್ನೆ ಓದುಗರಲ್ಲಿ ಉದ್ಭವಿಸಬಹುದು. ಹಾಗೆನೋಡಿದರೆ ಕಚೇರಿ ಇರುವುದೇ ಸೀರಿಯಸ್ ಆಗಿ ಕೆಲಸ ಮಾಡಲು ಅಥವಾ ರೆಸ್ಟ್ ತೆಗೆದುಕೊಳ್ಳಲು ಎಂದು ವಾಚಕರು ಉದ್ಗಾರವೆತ್ತಬಹುದು. 'ಕಚೇರಿಗೆ ಬರುವ ಗಿರಾಕಿಗಳೂ ಸಹ, ತಮ್ಮ ಕೆಲಸ ಮಾಡಿಸಿಕೊಳ್ಳಲು, ಒಂದೋ ಅಂಗಲಾಚುವವರಾಗಿರುತ್ತಾರೆ ಇಲ್ಲವೇ ಜಗಳಕಾಯುವವರಾಗಿರುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಕಚೇರಿಯಲ್ಲಿ ಹಾಸ್ಯವೆಲ್ಲಿಂದ ಹುಟ್ಟೀತು?' ಎಂಬ ವಾದವೂ ಮಂಡಿತವಾಗಬಹುದು. ಈ ಎಲ್ಲ ಪ್ರಶ್ನೆಗಳನ್ನೆತ್ತುವವರಿಗೆ ನಾನು ಹಾಕುವ ಮರುಪ್ರಶ್ನೆ, 'ಕಚೇರಿಯಲ್ಲಿ ಹಾಸ್ಯ ಏಕಿಲ್ಲ? ಏಕಿರಬಾರದು?' ಎಂದು. ಕಾಣುವ ಕಣ್ಣಿದ್ದರೆ, ಅರಿಯುವ ತಲೆ ಇದ್ದರೆ ಹಾಗೂ ಆಸ್ವಾದಿಸುವ ಮನಸ್ಸಿದ್ದರೆ ನಮ್ಮ ಜೀವನದಲ್ಲಿ ಹಾಸ್ಯ ಎಲ್ಲಿಲ್ಲ? ಜೀವನದ ಎಲ್ಲ ರಂಗಗಳಲ್ಲೂ, ಎಲ್ಲ ಅಂಗಗಳಲ್ಲೂ ಹಾಸ್ಯ ಹಾಸು ಹೊಕ್ಕಾಗಿದೆ. ನಮ್ಮ ಕಚೇರಿಗಳೇನೂ ಅದಕ್ಕೆ ಹೊರತಲ್ಲ.

*

ನೀವು ಕಚೇರಿಯೊಂದಕ್ಕೆ ಹೋಗಿ ಅಲ್ಲಿರುವ ಗುಮಾಸ್ತನೊಬ್ಬನನ್ನು ಕೇಳುತ್ತೀರಿ, "ಶ್ರೀರಾಮ್ ಅನ್ನೋರು ಎಲ್ಲಿರ್ತಾರೆ?"

ಆತ ತಟಕ್ಕನೆ ಉತ್ತರಿಸುತ್ತಾನೆ, "ಅಯೋಧ್ಯೇಲಿ."

ಸುತ್ತಲೂ ಇದ್ದವರೆಲ್ಲ ಖೊಳ್ಳನೆ ನಗುತ್ತಾರೆ. ನೀವೋ ತಬ್ಬಿಬ್ಬು! ಕೊಂಚ ಸುಧಾರಿಸಿಕೊಂಡು

ಮತ್ತೆ ಕೇಳುತ್ತೀರಿ, "ಅಲ್ಲಾ, ಕೇಸ್ ವರ್ಕರ್ ಶ್ರೀರಾಮ್...."

ಆ ಗುಮಾಸ್ತ ಮರು ಪ್ರಶ್ನೆ ಹಾಕುತ್ತಾನೆ, "ಯಾವ ಕೇಸು ಸಾರ್? ಕೋರ್ಟ್ ಕೇಸೋ, ಡೆಲಿವರಿ ಕೇಸೋ?" ಮತ್ತೆ ಸುತ್ತಲಿನವರು ನಗುತ್ತಾರೆ. ಮತ್ತೆ ನೀವು ತಬ್ಬಿಬ್ಬು! ಈಗ ನೀವು, ಆ ಕಚೇರಿಯಲ್ಲಿ ನಿಮಗಾಗಬೇಕಾಗಿರುವ ಕೆಲಸದ ವಿವರ ತಿಳಿಸಿ, ಆ ಕೆಲಸ ನೋಡಿಕೊಳ್ಳುವ ಕೇಸ್ ವರ್ಕರ್ ಶ್ರೀರಾಮ್ ಅನ್ನುವವರು ಯಾರೆಂದು ಆ ಗುಮಾಸ್ತನನ್ನು ಕೇಳಿದಾಗ ಆತ ಕೂಲ್ ಆಗಿ ನುಡಿಯುತ್ತಾನೆ:

"ನಾನೇ ಸಾರ್. ಕೂತ್ಕೊಳ್ಳಿ," ಅಂತ. ಸುತ್ತಲಿನವರ ನಗುವಿನಲ್ಲೀಗ ನೀವೂ ಭಾಗಿಯಾಗುತ್ತೀರಿ.

*

ನಾನು ನನ್ನ ಇದುವರೆಗಿನ ಜೀವನದಲ್ಲಿ ಅದೇ ಮೊದಲ ಬಾರಿ ಹಾಗೂ ಅದೇ ಕಡೇ ಬಾರಿ ಸರ್ಕಾರಿ ಕಚೇರಿಯೊಂದಕ್ಕೆ ನನ್ನ ಸ್ನೇಹಿತನ ಜೊತೆಯಲ್ಲಿ ಹೋಗಿದ್ದೆ. ಅವನದಾವುದೋ ಬಿಲ್ಲು ಸ್ಯಾಂಕ್ಷನ್ ಆಗಬೇಕಿತ್ತಂತೆ, ದಾರಿಯಲ್ಲಿ ಸಿಕ್ಕಿದ ತಪ್ಪಿಗೆ ನನ್ನನ್ನೂ ಎಳೆದುಕೊಂಡು ಹೋಗಿದ್ದ. ಸಂಬಂಧಿಸಿದ ಟೇಬಲ್ ಬಳಿ ಹೋಗಿ ಆತ ಅಲ್ಲಿದ್ದ ಕ್ಲರ್ಕ್‌ಗೆ ಚೀಟಿಯೊಂದನ್ನು ತೋರಿಸುತ್ತ, ಅತ್ಯಂತ ನಮ್ರತೆಯಿಂದ,

"ಬಿಲ್ಲು ಪಾಸಾಗಿದೆಯಾ ಸಾರ್?" ಎಂದು ಕೇಳಿದ. ಅಷ್ಟೇ ಜರ್ಬಿನಿಂದ ಆ ಕ್ಲರ್ಕು ನುಡಿದ, "ಬಿಲ್ಲು ಹೇಗ್ರೀ ಪಾಸಾಗುತ್ತೇ?"

"ಅಲ್ಲಾ ಸಾರ್, ಬಿಲ್ಲೂ...," ನನ್ನ ಸ್ನೇಹಿತ ಮತ್ತೆ ರಾಗ ಎಳೆದ.

"ಬಿಲ್ಲು ಹ್ಯಾಂಗ್ರೀ ಪಾಸಾಗೋಕೆ ಸಾಧ್ಯ?" ಮತ್ತೆ ಕ್ಲರ್ಕಿನ ಜರ್ಬು!

ನನ್ನ ಸ್ನೇಹಿತ ಕಕ್ಕಾವಿಕ್ಕಿಯಾದ! 'ಬಹುಶಃ ಸಮ್‌ಥಿಂಗಿಗಾಗಿ ಈತ ಈ ರೀತಿ ದಬಾಯಿಸುತ್ತಿ



ದ್ದಾನೇನೋ!' ಎಂದು ನನ್ನ ಫ್ರೆಂಡು ಯೋಚಿಸ ತೊಡಗಿದ. ಆದರೆ ಹಾಗೆಂದು ಗ್ಯಾರಂಟಿ ಮಾಡಿ ಕೊಳ್ಳುವುದು ಹೇಗೆ? ಅಷ್ಟಕ್ಕೂ ನನ್ನ ಸ್ನೇಹಿತನಿಗೆ ಹಾಗೆಲ್ಲ ಕೊಟ್ಟು ತೆಗೆದುಕೊಂಡು ಅಭ್ಯಾಸವಿಲ್ಲ. ಇಂಥದ್ದರಲ್ಲಿ ನಾನೋ, ಇನ್ನೂ ಅತ್ತತ್ತ.

'ಹೇಗೆ ಕೇಳಲಿ?' ಎಂದು ಯೋಚನೆ ಮಾಡುತ್ತಾ ನನ್ನ ಸ್ನೇಹಿತ ಮತ್ತೆ ನಿಧಾನವಾಗಿ,

"ಅದೂ, ಬಿಲ್ಲೂ.....," ಅನ್ನುತ್ತಿದ್ದ ಹಾಗೇ ಆ ಕ್ಲರ್ಕು,

"ಅದೇರೀ ಮಿಸ್ಟರ್, ನಾನೂ ಕೇಳೋದು. ಬಿಲ್ಲು ಪಾಸಾಯ್ತು ಅಂದರೆ? ಬಿಲ್ಲು ಹೇಗೆ ಪಾಸಾಗೋಕೆ ಸಾಧ್ಯ? ಬಿಲ್ಲು ಕೈಯಲ್ಲೇ ಇರುತ್ತೆ, ಬಾಣ ಮಾತ್ರ ಪಾಸಾಗುತ್ತೆ. ಅಲ್ವೆ?" ಎಂದು ನಗತೊಡಗಿದ. ನಮಗೂ ನಗು ಒತ್ತರಿಸಿ ಬಂತು.

*

ಅಂಚೆ ಕಚೇರಿಗೆ ಒಬ್ಬ ನಿರಕ್ಷರಕುಕ್ಷಿ ಹೋಗಿ ಕೇಳಿದ,

"ಸೋಮೀ, ಒಂದು ಗಾಂಧಿ ತಿಕೇಟು ಕೊಡಿ." ಅಂಚೆ ಇಲಾಖೆ ಗುಮಾಸ್ತ ತಟ್ಟನೆ ಹೇಳಿದ, "ಟೀಕೇಟು ಇಲ್ಲಿ ಸಿಗಲ್ಲಣ್ಣೋ, ಇಲ್ಲಿ ಬರೀ ಸ್ಟಾಂಪು ಸಿಗೋದು. ಸಿನೆಮಾ ಥೇಟರು ಎದುರ್ಗಡೆ ಇದೆ ಹೋಗು. ಅಲ್ಲಿ ತಕ್ಕೋ ಗಾಂಧಿ ಕ್ಲಾಸ್ ಟಿಕೇಟು." ನಮ್ಮ ನಿರಕ್ಷರಿಕುಕ್ಷಿ ಅನಕ್ಷರಸ್ಥನಾದರೂ ದಡ್ಡನೇನಲ್ಲ, ಅವನಿಗೂ ಹಾಸ್ಯ ಪ್ರಜ್ಞೆ ಇದ್ದೇ ಇತ್ತು. ನಗುನಗುತ್ತಾ ಆತ ಹೇಳಿದ, "ಟಾಂಪೋ ಅದೇನೋ ಅಂದ್ರಲ್ಲಾ, ಅದ್ನೇ ಕೊಡಿ ಒಂದ್ರು ಪಾಯ್ಗೆ. ಅಷ್ಟು ಹಿಂಗ್ಲೀಸ್ ಬಂದಿದ್ದಿದ್ರೆ ನಾನು ಇಲ್ಯಾಕೆ ನಿಂತಿರ್ತಿದ್ದೆ? ನಿಮ್ ಕುರ್ಚಿಯಾಗೆ ಕುಂತಿರ್ತಿದ್ದೆ, ಹ್ಲಾಂ!"

ನಮ್ಮ ಗುಮಾಸ್ತೆಯೇ ಪೆಚ್ಚು! ಹಲ್ಲು ಕಿರಿಯುತ್ತಾ ಒಂದು ರೂಪಾಯಿ ತೆಗೆದುಕೊಂಡು ಗಾಂಧೀ ಚಿತ್ರದ ಸ್ಟಾಂಪ್ ಕೊಟ್ಟು ಆ ಬುದ್ಧಿವಂತ ದಡ್ಡನನ್ನು ಸಾಗಹಾಕಿದ.

*

ತಂತಿ ಕಚೇರಿಯೊಂದಕ್ಕೆ ಒಬ್ಬಾಕೆ ಟೆಲಿಗ್ರಾಂ ಕೊಡಲು ಹೋದಳು. ಬೇರೆ ಊರಿನಲ್ಲಿರುವ ಪತಿಗೆ ಟೆಲಿಗ್ರಾಂ ಕೊಡಬೇಕಿತ್ತು. ಆಕೆಗೆ ಓದುಬರಹ ಗೊತ್ತಿಲ್ಲ. ಟೆಲಿಗ್ರಾಂ ಫಾರ್ಮನ್ನು ಭರ್ತಿ ಮಾಡುವಂತೆ ಕೌಂಟರ್ ಕ್ಲರ್ಕನ್ನೇ ಕೇಳಿಕೊಂಡಳು.

"ನಿನ್ನ ಗಂಡನ ಹೆಸರೇನಮ್ಮಾ?" ಕ್ಲರ್ಕು ಕೇಳಿದ. ಕೂಡಲೇ ಆಕೆಯ ಮುಖ ಕೆಂಪಾಯಿತು. ನಾಚಿಕೆಪಟ್ಟುಕೊಳ್ಳುತ್ತಾ, "ಥೂ, ಹೋಗ್ರೀ, ನಾಚ್ಕೆ ಆಗ್ತೈತೆ!" ಅಂದಳಾಕೆ!

"ಇದರಲ್ಲಿ ಹೆಸರು, ವಿಳಾಸ ಬರೆಯಬೇಕಲ್ಲಮ್ಮಾ ಗಂಡನ ಹೆಸರು ಹೇಳು," ಮತ್ತೆ ಕ್ಲರ್ಕು ಕೇಳಿದ.

"ಗಂಡನೆಸ್ರು ಎಂಗ್ರೀ ಏಳಾದು? ಅವ್ರು ಅಂತ ಬರದ್ಬುಡಿ ಸಾಕು."

ಈಗ ಕ್ಲರ್ಕು ಏನು ಮಾಡಬೇಕು?! ನಗಬೇಕು ಅಷ್ಟೆ; ಅಲ್ಲವೆ?

*

ನಾನು ಕೆಲಸ ಮಾಡುತ್ತಿರುವುದು ಬ್ಯಾಂಕಿನಲ್ಲಿ. ಕೆಲ ವರ್ಷಗಳ ಹಿಂದೆ ದಾವಣಗೆರೆಯಲ್ಲಿದ್ದಾಗ ನಮ್ಮ ಬ್ಯಾಂಕಿಗೆ ಒಬ್ಬ ವಯೋವೃದ್ಧ ಕಸ್ಟಮರು ಬರುತ್ತಿದ್ದರು. ಲಾರ್ಡ್ ಸುಬ್ಬರಾಯರು ಅಂತ ಅವರ ಹೆಸರು. ಅವರ ಅಜ್ಜ ಬ್ರಿಟಿಷ್ ಲಾರ್ಡ್ ಒಬ್ಬರ ಕೈಕೆಳಗೆ ಕೆಲಸ ಮಾಡುತ್ತಿದ್ದರಂತೆ. ಯಾವಾಗಲೂ ಅದನ್ನು ಭಾರೀ ವಿಶೇಷವೆಂಬಂತೆ ಹೇಳಿಕೊಳ್ಳುತ್ತಿದ್ದರು. ಆದ್ದರಿಂದಲೇ ನಾವು ಅವರನ್ನು ಲಾರ್ಡ್ ಸುಬ್ಬರಾಯರು ಅಂತ ಕರೆಯುತ್ತಿದ್ದುದು. ಈಗವರು ಲಾರ್ಡ್ ಪಾದ ಸೇರಿದ್ದಾರೆ. ಅವರ ಆತ್ಮಕ್ಕೆ ಶಾಂತಿ ದೊರಕಲಿ.....

ಲಾರ್ಡ್ ಸುಬ್ಬರಾಯರಿಗೆ ಇಂಗ್ಲಿಷ್ ಪದಗಳ ಬಳಕೆಯ ವ್ಯಾಮೋಹ ಜಾಸ್ತಿ. ಅದೂ ಸಹ, ಎಲ್ಲಾ ಪ್ಲೂರಲ್, ಯೂನೇ, ಬಹುವಚನದ ಪದಗಳೇ. ಯಾವುದೇ ಶಬ್ದಕ್ಕಾಗಲೀ 'ಎಸ್' ಸೇರಿಸಿ ಬಹುವಚನ ಮಾಡಿಯೇ ಅವರು ಉಚ್ಚರಿಸುತ್ತಿದ್ದುದು. ಅದರಿಂದ ತಮ್ಮ ಘನತೆಯೂ ಬಹುವಾಗುತ್ತದೆ ಎಂದುಕೊಂಡಿದ್ದರೋ, ಅವರ ಇಂಗ್ಲಿಷ್ ಜ್ಞಾನವೇ ಅಷ್ಟೋ, ಅದು ನಮಗಿಲ್ಲಿ ಅಪ್ರಸ್ತುತ. ಅವರ ಮಾತುಗಳು ಮಾತ್ರ ಬಲು ಮೋಜೆನಿಸುತ್ತಿದ್ದವು.

"ಏನು ಲಾರ್ಡ್ ಸುಬ್ರಾರ್ಯರೇ ವಿಶೇಷ?" ಅಂದರೆ ಸಾಕು, ಶುರುಮಾಡುವವರು:

"ನೋ ಸ್ಪೆಷಲ್ಸ್, ಎಲ್ಲಾ ಮಾಮೂಲ್ಸ್. ನನ್ನ

ಹೆಲ್ತ್ ಸ್ವಲ್ಪ ಸರಿಯಾಗಿರಲಿಲ್ಲ, ಈಗ ಪರವಾಗಿಲ್ಲ, ಎಷ್ಟೋ ಇಂಪ್ರೂವ್‌ಮೆಂಟ್ಸ್. ಆದರೂ ಆವಾಗಾವಾಗ ಹೆಲ್ತ್ ಅಪ್‌ಸೆಟ್ಸ್ ಆಗ್ತಾನೇ ಇರುತ್ತೆ. ಏನ್ ಮಾಡೋದು? ಎಲ್ಲಾ ನಂನಮ್ಮ ಕರ್ಮಾಸ್!"

ನಮ್ಮ ಆಫೀಸ್ ವ್ಯವಸ್ಥೆಯ ಸುಧಾರಣೆಗಾಗಿ ಆಗಾಗ ಸುಬ್ಬರಾಯರು ಈ ರೀತಿ ಸಲಹೆ ನೀಡುತ್ತಿದ್ದರು, "ಅದೂ, ನಿಮ್ಮಲ್ಲಿ ಡಿಪಾರ್ಟ್‌ಮೆಂಟ್ಸ್ ಸರೀಇಲ್ಲಾ. ಎಲ್ಲಾ ಬೇರೆ ಬೇರೆ ಕಂಪಾರ್ಟ್‌ಮೆಂಟ್ಸ್ ಮಾಡಿಬಿಟ್ಟು ಇಂಪಾರ್ಟ್‌ಮೆಂಟ್ಸ್ ಐಟಮ್ಸ್ ಎಲ್ಲಾ ಒಂದೊಂದು ಅಪಾರ್ಟ್‌ಮೆಂಟ್ಸ್‌ಗೆ ಒಪ್ಪಿಸಿಬಿಟ್ರೆ ತುಂಬಾನೇ ಇಂಪ್ರೂವ್‌ಮೆಂಟ್ಸ್ ಆಗುತ್ತೆ ಸರ್ವೀಸಸ್ಸು."

ಇಂಥಾ ಸುಬ್ಬರಾಯರು ಒಂದು ದಿನ ನನ್ನ ಕ್ಯಾಬಿನ್ನಿಗೆ ಬಂದು, "ಸಾರ್, ನ್ಯೂಸ್ ಏನಾದರೂ ಇದೆಯೇ?" ಎಂದು ಕೇಳಿದರು. ನನಗೆ ಅರ್ಥವಾಗಲಿಲ್ಲ, ಅವರ ಮುಖ ನೋಡಿದೆ. "ನ್ಯೂಸ್ ಇಲ್ವೆ?" ಮತ್ತೆ ಕೇಳಿದರು.

"ಏನು ನ್ಯೂಸು?" ಅವರಿಗೇ ಮರುಪ್ರಶ್ನೆ ಹಾಕಿದೆ.

'ನ್ಯೂಸ್ ಸಾರ್, ನ್ಯೂಸ್. ಒನ್ಸ್ ರುಪೀಸ್ ಪ್ಯಾಕೆಟ್ಸ್ ನ್ಯೂಸ್," ಅನ್ನುತ್ತಾ ಅವರು ಒಂದು ರೂಪಾಯಿ ನೋಟುಗಳ ಹಳೇ ಪ್ಯಾಕೆಟ್ ಒಂದನ್ನು ತಮ್ಮ ಜೇಬಿನಿಂದ ಹೊರತೆಗೆದು ನನ್ನೆದುರಿಗಿಟ್ಟರು! ಆಗ ನನಗೆ ಜ್ಞಾನೋದಯವಾಯಿತು! ಆ ಹಳೆಯ ಪ್ಯಾಕೆಟ್ಟನ್ನು ಕ್ಯಾಷಿಯರ್‌ಗೆ ಕಳಿಸಿ ಹೊಸ ಯಾನೇ ನ್ಯೂ ನೋಟುಗಳ ಪ್ಯಾಕೆಟ್ಟನ್ನು ತರಿಸಿ ಆ ಬಹುವಚನ ಪ್ರಿಯರಿಗೆ ಕೊಟ್ಟೆ. ಇಂಗ್ಲಿಷ್ ಧನ್ಯವಾದವನ್ನು ಬಹುವಚನದಲ್ಲಿ ಹೇಳಿ ಅಜ್ಜ ಹೊರಟು ಹೋದರು. ನನಗೆ ಆ ದಿನವೆಲ್ಲ ನೆನೆಸಿಕೊಂಡು ನಗಲಿಕ್ಕಾಯಿತು. ಆ 'ನ್ಯೂಸು!'

*

ನಮ್ಮ ಬ್ಯಾಂಕಿಗೆ ಒಂದು ದಿನ ಓರ್ವ ಮಹಿಳೆ ಆಗಮಿಸಿ ಹಣಕ್ಕಾಗಿ ಕೌಂಟರ್‌ನಲ್ಲಿ ಚೆಕ್ ನೀಡಿದಳು. ಚೆಕ್ಕನ್ನು ನೋಡಿ ಕ್ಲರ್ಕು ಮುಸಿಮುಸಿ ನಗತೊಡಗಿದ. ಚೆಕ್ಕನ್ನು ಪಾಸ್ ಮಾಡುವಾಗ ಆಫೀಸರೂ ಒಳಗೇ ನಗತೊಡಗಿದ. ಕ್ಯಾಷ್ ಕೊಡವಾಗ ಕ್ಯಾಷಿಯರ್ ಸಹಾ ಚೆಕ್ಕನ್ನು ನೋಡಿ ನಗುವುದೇ?! ಇದನ್ನೆಲ್ಲ ಗಮನಿಸುತ್ತಿದ್ದ ನಾನು ಕುತೂಹಲ ತಾಳಲಾರದೇ ಕ್ಯಾಬಿನ್ನಿನಿಂದ ಎದ್ದು ಕ್ಯಾಷಿಯರ್ ಬಳಿ ಹೋಗಿ ಆ ಚೆಕ್ಕನ್ನು ಗಮನಿಸಿದೆ. ನನಗೂ ನಗು! ೧೯೦ ರೂಪಾಯಿಗಳಿಗೆ ಚೆಕ್ ಬರೆದಿದ್ದಾಳೆ ಆಕೆ. ಇಂಗ್ಲಿಷ್ ಸರಿಯಾಗಿ ಬಾರದು. ಆದರೂ ಇಂಗ್ಲಿಷ್ ಪದಗಳಲ್ಲೇ ಮೊತ್ತವನ್ನು ಬರೆದಿದ್ದಾಳೆ. One hundred ninety ಎಂದು ಬರೆಯುವ ಬದಲು One hundred nighty ಎಂದು ಬರೆದಿದ್ದಾಳೆ! ಆಕೆಗೆ ನೂರು ರಾತ್ರಿಯ ಡುಪುಗಳನ್ನು ನಾವು ಬ್ಯಾಂಕಿನವರು ಎಲ್ಲಿಂದ ತಂದುಕೊಡಬೇಕು?!

*

ಸಣ್ಣ ಕೈಗಾರಿಕೆಗಳಿಗಾಗಿ ಬ್ಯಾಂಕುಗಳು ಸಾಲ ನೀಡುತ್ತವಷ್ಟೇ. ಹೀಗೊಂದು ಬ್ಯಾಂಕ್ ಶಾಖೆಯಲ್ಲಿ ಸಾಲ ತೆಗೆದುಕೊಂಡು ಕೈಗಾರಿಕೆ ಪ್ರಾರಂಭಿಸಿದ ಉದ್ಯಮಿಗಳು ತಂತಮ್ಮ ಪ್ರಾರಂಭಿಕ ಉತ್ಪನ್ನಗಳ ಸ್ಯಾಂಪಲ್‌ಗಳನ್ನು ಆ ಬ್ಯಾಂಕ್ ಶಾಖೆಯ ನೌಕರರಿಗೆಲ್ಲ ಉಚಿತವಾಗಿ ಹಂಚುವ ಪರಿಪಾಠವಿತ್ತು. ಊದುಬತ್ತಿ ಫ್ಯಾಕ್ಟರಿ ಆರಂಭಿಸಿದವರು ಒಂದೊಂದು ಊದು ಬತ್ತಿ ಪ್ಯಾಕೆಟ್ಟು, ಬಿಸ್ಕತ್ ಕಾರ್ಖಾನೆಯವರು ಒಂದೊಂದು ಬಿಸ್ಕತ್ ಪ್ಯಾಕೆಟ್ಟು, ಈ ರೀತಿ. ಹೀಗೆ ಒಂದು ದಿನ ಆ ಬ್ಯಾಂಕ್ ಶಾಖೆಯ ಎಲ್ಲ ನೌಕರರ ಕೈಗೂ ಒಂದೊಂದು ಆಕರ್ಷಕ ಪ್ಯಾಕೆಟ್ಟು ಬಂತು. ಕೊಟ್ಟ ಕಾರ್ಖಾನೆ ಮಾಲೀಕರು ಆ ಕಡೆ ಹೋಗುತ್ತಲೂ ಈ ಕಡೆ ಒಬ್ಬೊಬ್ಬರೇ ಪ್ಯಾಕೆಟ್ ಬಿಚ್ಚತೊಡಗಿದರು. ಪ್ಯಾಕೆಟ್ ಬಿಚ್ಚಿ ನೋಡುತ್ತಿದ್ದಂತೆ ಒಬ್ಬೊಬ್ಬರ ಮುಖ ಒಂದೊಂದು ಬಣ್ಣಕ್ಕೆ ತಿರುಗತೊಡಗಿತು. ಕೆಲವರ ಮುಖ ವರ್ಣರಂಜಿತ, ಮತ್ತೆ ಕೆಲವರ ಮುಖ ವಿವರ್ಣ! ಸದರೀ ಪ್ಯಾಕೆಟ್ಟನ್ನು ಕೊಟ್ಟ ಕಾರ್ಖಾನೆ ಬೀಡಿ ಕಾರ್ಖಾನೆ! ಮುದುಕರು, ಹುಡುಗರು, ಮುದುಕಿಯರು, ಹುಡುಗಿಯರು ಎಲ್ಲರ ಕೈಲೂ ಒಂದೊಂದು ಭಾರೀ ಗಾತ್ರದ ಬೀಡಿ ಪ್ಯಾಕೆಟ್ಟು!

*

ಒಂದು ಸರ್ಕಾರೀ ಕಚೇರಿಯ ಬಾಸ್‌ಗೆ ತನ್ನ ಕಚೇರಿಯಲ್ಲಿ ಏರ್ಪಾಟಾಗುವ ಚಿಕ್ಕ-ದೊಡ್ಡ ಸಮಾರಂಭಗಳೆಲ್ಲಕ್ಕೂ ಶಾಸಕರನ್ನೋ ಮಂತ್ರಿಗಳನ್ನೋ

ಆಹ್ವಾನಿಸುವ ಹುಚ್ಚು! ಸಾಲದುದಕ್ಕೆ ಅವರುಗಳಿಂದ ಸಮಾರಂಭವನ್ನು 'ಪ್ರಾಕ್ಟಿಕಲ್' ಆಗಿ ಉದ್ಘಾಟನೆ ಮಾಡಿಸುವ ಐಡಿಯಾ. ಹಿಂದೊರ್ವ ಧುರೀಣರು ಈಜುಗೊಳವೊಂದನ್ನು ಸ್ವಯಂ ಈಜಿ ಉದ್ಘಾಟಿಸಿರಲಿಲ್ಲವೆ? ಹಾಗೆ. ಸದರಿ ಕಚೇರಿಯ ಆವರಣದಲ್ಲಿ ಆಂಜನೇಯನ ದೇವಸ್ಥಾನದ ನಿರ್ಮಾಣವಾಯಿತು. ಬಾಸ್‌ನ ಪ್ರಯತ್ನದ ಫಲವಾಗಿ ಮಂತ್ರಿಯೋರ್ವರು ಆಗಮಿಸಿ ಆ ದೇವಸ್ಥಾನವನ್ನು ಉದ್ಘಾಟಿಸಿದರು. ಬಾಸ್‌ನ ಬಯಕೆಯಂತೆ ಆ ಮಂತ್ರಿ ಮಹೋದಯರು ಮಡಿ ಉಟ್ಟು ಆಂಜನೇಯ ಸ್ವಾಮಿಗೆ ಸ್ವಯಂ ಪೂಜೆ ಮಾಡುವ ಮೂಲಕವೇ ದೇವಸ್ಥಾನವನ್ನು ಉದ್ಘಾಟಿಸಿದರು. ಕೆಲವು ತಿಂಗಳುಗಳು ಕಳೆದವು. ಆ ಕಚೇರಿಯು ಮತ್ತೊಂದು ಸಮಾರಂಭಕ್ಕೆ ಸಜ್ಜಾಯಿತು. ಪುನಃ ಅದೇ ಮಂತ್ರಿಗಳ ಬಳಿಗೆ ಹೋಗಿ ಬಾಸ್ ಮಹಾಶಯರು ಆಮಂತ್ರಿಸಿದರು. ಉದ್ಘಾಟನೆಗೆ ಬರಲು ಸಮ್ಮತಿ ನೀಡುವ ಹಂತದಲ್ಲಿ ಮಂತ್ರಿಗಳು ಹೀಗೇ ಕೇಳಿದರು, "ಯಾತರ ಉದ್ಘಾಟನೇರೀ? ಈ ಸಲ?"

"ನೂತನ ಶೌಚಾಲಯದ್ದು ಸಾರ್," ವಿನಮ್ರರಾಗಿ ನಮ್ಮ ಬಾಸ್ ಉತ್ತರಿಸಿದರು! ಮಂತ್ರಿಗಳ ಎದೆ ಧಸಕ್ಕೆಂದಿತು!' ಕೂಡಲೇ ಸುಧಾರಿಸಿಕೊಂಡು,

"ಓಹೋ! ಮರೆತೇ ಬಿಟ್ಟಿದ್ದೆ, ಆ ದಿನ ನಾನು ಊರಲ್ಲಿರೊಲ್ಲ, ಟೂರಲ್ಲಿರ್ತೀನಿ. ಆದ್ರಿಂದ ಬರೋಕಾಗೊಲ್ಲ," ಎಂದು ಹೇಳಿ ಪಾರಾದರು!"

ನಿರ್ಲಿಪ್ತತೆಯಿಂದ ಇವೆಲ್ಲ ಮಾತುಕತೆಯನ್ನು ಆ ಬಾಸು ಆಫೀಸಲ್ಲಿ ತನ್ನ ನೌಕರರೆದುರು ಹೇಳಿಕೊಂಡಾಗ, ಬಾಸಿನೆದುರು ಬಾಯಿ ಬಿಗಿಹಿಡಿದುಕೊಂಡಿದ್ದ ನೌಕರರೆಲ್ಲ ಬಾಸ್ ಆಕಡೆ ಪಾಸ್ ಆದ ಕೂಡಲೇ ಬಾಯಿ ಬಿಚ್ಚಿ ಮನಸಾರೆ ನಕ್ಕಿದ್ದೇ ನಕ್ಕಿದ್ದು!

*

ಸಾಲಮೇಳಗಳ ಸುಗ್ಗಿಯ ಕಾಲ. 'ಕೊಟ್ಟವ ಕೋಡಂಗಿ, ಇಸಗೊಂಡವ ಈರಭದ್ರ' ಎಂಬ ಸ್ಥಿತಿ. ಆಗ ನಾನು ಆಂಧ್ರ ಪ್ರದೇಶದ ಒಂದು ಹಳ್ಳಿಯ ಬ್ಯಾಂಕ್ ಶಾಖೆಯಲ್ಲಿ ಮೇನೇಜರ್ ಆಗಿದ್ದೆ. ಒಂದು ದಿನ ಬೆಳಿಗ್ಗೆ ಬ್ಯಾಂಕಿಗೆ ಬಂದ ನನಗೆ ಬ್ಯಾಂಕ್ ಆವರಣ ಕಂಡು ಆಶ್ಚರ್ಯವಾಯಿತು. ಕಾಂಪೌಂಡ್ ಒಳಗಡೆ ಬ್ಯಾಂಕಿನ ಆವರಣದಲ್ಲಿ ನಾಲ್ಕಾರು ಜನರು ತಲಾ ಒಂದೊಂದು ಎಮ್ಮೆಯನ್ನು ಹಿಡಿದುಕೊಂಡು ನಿಂತಿದ್ದಾರೆ! 'ವಿಶ್ರಾಂತಿಗಾಗಿ ನಿಂತಿರಬಹುದು,' ಅಂದುಕೊಳ್ಳುತ್ತಾ ಬ್ಯಾಂಕಿನ ಬಾಗಿಲು ತೆರೆದು ಒಳಕ್ಕೆ ಹೋದೆ. ಅವರುಗಳೂ ತಂತಮ್ಮ ಎಮ್ಮೆ ಸಮೇತ ಒಳಕ್ಕೆ ಬರೋದೆ! ನನಗೆ ಗಾಬರಿಯಾಯಿತು! 'ಯಾಕೆ ಹೀಗೆ?' ಎಂದು ಹರಕು ಮುರಕು ತೆಲುಗಿನಲ್ಲಿ ವಿಚಾರಿಸಿದೆ. ಏನೇನೋ ಅಂದರು. ಅರ್ಧಮರ್ಧ ಅರ್ಥವಾಯಿತು. ಅಷ್ಟರಲ್ಲಿ ಅಲ್ಲಿಗೆ ಬಂದ ನಮ್ಮ ಅಟೆಂಡರು ಅವರನ್ನು ವಿಚಾರಿಸಿ, ಉತ್ತರ ತಿಳಿದು, ನನಗೆ ನನ್ನ 'ಭಾಷೆಯಲ್ಲೇ ವಿವರಿಸಿದ. ಎಮ್ಮೆಗೆ ಸಾಲ ಕೊಡುತ್ತೇವೆಂದು ಹಿಂದಿನ ದಿನವಷ್ಟೇ ನಾನು ಅದಾರ ಬಳಿಯೋ ತಿಳಿಸಿದ್ದರಿಂದ ಇವರುಗಳೆಲ್ಲ ತಂತಮ್ಮ ಎಮ್ಮೆ ಹೊಡೆದುಕೊಂಡು ಬಂದಿದ್ದರು! ನನ್ನ ತೆಲುಗು ಜ್ಞಾನ, ಆ ಜನಗಳ ಕನ್ನಡ ಜ್ಞಾನ ಸೇರಿ ಈ ಅವಾಂತರವಾಗಿತ್ತು!

ಹೀಗೆ, ಕಚೇರಿಗಳಲ್ಲಿ ಹಾಸ್ಯ ಹಲವು ಹತ್ತು ವಿಧ. ನಾನು ಮೊದಲೇ ಹೇಳಿರುವಂತೆ, ಇಂಥ ಹಾಸ್ಯವನ್ನು ಅರಿಯುವ ತಲೆ, ಆಸ್ವಾದಿಸುವ ಮನಸ್ಸು ಇರಬೇಕು ಅಷ್ಟೇ. ಇಂಥ ಹಾಸ್ಯ ಪ್ರಸಂಗಗಳು ಕಚೇರಿಯ ನೌಕರರಿಗೆ ಕೆಲಸದ ಏಕತಾನದಿಂದ ಕೊಂಚ ರಿಲೀಫನ್ನು ನೀಡಿದರೆ ಗ್ರಾಹಕರಿಗೆ ಸಂದರ್ಭಾನುಸಾರ ಹಾಗೂ ಅವರವರ ಮನೋವೃತ್ತಿಯನುಸಾರ ಸ್ಪಂದನವನ್ನೊದಗಿಸುತ್ತವೆ. ಒಂದು ಮಾತಂತೂ ನಿಜ, ಇಂಥ ಹಾಸ್ಯ ಪ್ರಸಂಗಗಳು ನೌಕರರ ಹಾಗೂ ಗ್ರಾಹಕರ ನಡುವಣ ಅಂತರವನ್ನು ಖಂಡಿತವಾಗಿಯೂ ಕಡಿಮೆ ಮಾಡುತ್ತವೆ. ಈ ಎಲ್ಲ ಕಾರಣಗಳಿಂದಾಗಿ ಹಾಗೂ ನನ್ನ ಮನೋಭಾವಕ್ಕೂ ಸಹಜವಾಗಿ ನಾನು ಸದಾ ನನ್ನ ಕಚೇರಿಯಲ್ಲಿ ಹಾಸ್ಯವನ್ನು ಸ್ವಾಗತಿಸುತ್ತೇನೆ.

(ಬೆಂಗಳೂರು ಆಕಾಶವಾಣಿಯಲ್ಲಿ ೨೪-೬-೯೫ರಂದು ಭಾಷಣ ರೂಪದಲ್ಲಿ ಪ್ರಸಾರಗೊಂಡ ಬರಹ)

# ವಿಶ್ವನಾಥ ಕವಿರಾಜ

ಮಮ್ಮಟ ಮತ್ತು ಆನಂದ ವರ್ಧನರ ತೀರ್ಮಾನಗಳನ್ನು ಪ್ರಶ್ನಿಸುವ ಛಾತಿ ಅವನಿಗಿತ್ತು. ಧನಂಜಯನ 'ದಶರೂಪಕ'ದಲ್ಲಿನ ಲೋಪದೋಷಗಳನ್ನೂ ಎತ್ತಿ ತೋರಿಸಿಕೊಟ್ಟಂಥವ ಆತ.

• ಗುರುಮೂರ್ತಿ ಪೆಂಡಕೂರು

ಒರಿಸ್ಸಾದ ಪ್ರಸಿದ್ಧ ಮನೆತನದ ಕಪಿಂಜಲ ಗೋತ್ರದ ವಿಶ್ವನಾಥ ಕವಿರಾಜ ಸಂಸ್ಕೃತ ಸಾಹಿತ್ಯ ದಲ್ಲಿ ದೊಡ್ಡ ಹೆಸರು. ವಿಶ್ವನಾಥನ ತಂದೆ ಚಂದ್ರಶೇಖರನೂ ಕವಿಯಾಗಿ, ಮೀಮಾಂಸಕಾರ ನಾಗಿ ಸಾಕಷ್ಟು ಹೆಸರು ಮಾಡಿದ್ದಾನಲ್ಲದೆ ಕಳಿಂಗದ ಗಜಪತಿರಾಜರ ಆಸ್ಥಾನವನ್ನೂ ಅಲಂಕರಿಸಿದ್ದ. ವಿಶ್ವ ನಾಥನ ಮೇರು ಕೃತಿ 'ಸಾಹಿತ್ಯದರ್ಪಣ.'

ವಿಶ್ವನಾಥನ ಮಗ ಅನಂತದಾಸನೇ ಸಾಹಿತ್ಯ ದರ್ಪಣದ ಟೀಕೆಯನ್ನು 'ಲೋಚನ ಭಾಷ್ಯ' ಎಂಬ ಹೆಸರಿನಲ್ಲಿ ಬರೆದಿದ್ದಾನೆ. ವಿಶ್ವನಾಥನನ್ನು ಕಪಿಂಜಲ ವಂಶವೆಂಬ ಕ್ಷೀರಸಮುದ್ರದಲ್ಲಿ ಉದ ಯಿಸಿದ ಚಂದ್ರನೆಂದೂ, ತ್ರಿಕಳಿಂಗ ರಾಜನ ಮಂತ್ರಿಯೆಂದೂ ಬಹುಭಾಷಾ ಪಂಡಿತನೆಂದೂ, ಮಹಾಕವಿಯೆಂದೂ ಧ್ವನಿತತ್ವ ಪ್ರತಿಪಾದಕ ನೆಂದೂ ಕರೆಯಲಾಗಿದೆ. ವಿಶ್ವನಾಥನ ತಾತನಾದ ನಾರಾಯಣದಾಸನು ಜಯದೇವನ 'ಗೀತ ಗೋವಿಂದ'ಕ್ಕೆ 'ಸರ್ವಾಂಗಸುಂದರಿ' ಎಂಬ ಹೆಸ ರಿನ ವ್ಯಾಖ್ಯಾನವನ್ನು ಬರೆದ. ಸಣ್ಣ ತಾತನಾದ ಚಂಡೀದಾಸನು ಕಾವ್ಯಪ್ರಕಾಶದ ಮೇಲೆ 'ಕಾವ್ಯಪ್ರ ಕಾಶ ದೀಪಿಕೆ'ಯೆಂಬ ಧ್ವನಿಸಿದ್ಧಾಂತ ಸಂಗ್ರಹವನ್ನು ಬರೆದ. ಅವನ ದೊಡ್ಡ ತಾತನೂ ಪ್ರಸಿದ್ಧ ಕವಿಯಾಗಿದ್ದವನೆ. ವಿಶ್ವನಾಥನಂತೂ ಹದಿನಾರು ಭಾಷೆಗಳನ್ನು ಬಲ್ಲವನಾಗಿ, ಪುಷ್ಪಮಾಲಾ, ಭಾಸಾ ರ್ಣವ ಮತ್ತು ಸಾಹಿತ್ಯದರ್ಪಣಗಳ ಕರ್ತೃವಾಗಿ ಸುಪ್ರಸಿದ್ಧನಾಗಿದ್ದ. ಹೀಗಾಗಿ ಒರಿಸ್ಸಾದಲ್ಲಿ ಕಪಿಂ ಜಲ ಗೋತ್ರ ಸಾಹಿತ್ಯಪ್ರಪಂಚದಲ್ಲಿ ಮನೆ ಮಾತಾ ಗಿತ್ತು.

ಇಂತಹ ಪ್ರಸಿದ್ಧ ಲೇಖಕರ ಮನೆತನದಲ್ಲಿ ಜನಿಸಿದ ವಿಶ್ವನಾಥ ಪ್ರಕಾಂಡ ಪಂಡಿತನೂ ಬಹುಭಾಷಾ ವಿಶಾರದನೂ ಆಗಿ ಅನೇಕ ಗ್ರಂಥ ಗಳನ್ನು ರಚಿಸಿದ. 'ಚಂದ್ರಕಲಾ' ಮತ್ತು 'ಪ್ರಭಾ ವತೀ ವಿಜಯ' ಎಂಬ ನಾಟಕಗಳನ್ನೂ 'ರಾಘವ ವಿಲಾಸ' 'ರಾಘವ ವಿಲಾಪ' 'ಕುವಲಯಾಶ್ವ ಚರಿತ' 'ನರಸಿಂಹವಿಜಯ' ಎಂಬ ಕಾವ್ಯಗಳನ್ನೂ ಹದಿನಾರು ಭಾಷೆಗಳಲ್ಲಿ 'ಪ್ರಶಸ್ತಿ ರತ್ನಾವಳಿ' ಎಂಬ ಗ್ರಂಥವನ್ನೂ 'ಕಂಸವಧ' ಎಂಬ ಖಂಡಕಾವ್ಯ ವನ್ನೂ 'ಸಾಹಿತ್ಯ ದರ್ಪಣ' ಮತ್ತು 'ಕಾವ್ಯ ಪ್ರಕಾಶ ದರ್ಪಣ'ಗಳನ್ನೂ ರಚಿಸಿದ. ಗಜಪತಿರಾಜರ ಆಸ್ಥಾ ನದಲ್ಲಿ 'ಸಂಧಿವಿಗ್ರಹ' ಮಹಾಪಾತ್ರನಾಗಿದ್ದ ಅವನು ನಾಟ್ಯಾಚಾರ್ಯನೂ ನಾಟಕ ನಿರ್ದೇಶಕನೂ ಆಗಿದ್ದ.

ಪಾರ್ವತೀ ದೇವಾಲಯದ ಶಾಸನಗಳಿಂದಲೂ ಸಿಂಹಾಚಲ ದೇವಸ್ಥಾನದ ಶಾಸನಗಳಿಂದಲೂ ನರಸಿಂಹದೇವನ ಪುರಿ ತಾಮ್ರಶಾಸನದಿಂದಲೂ ಚಂದ್ರಕಲಾ ನಾಟಕದಿಂದಲೂ ವಿಶ್ವನಾಥನ ಬಗ್ಗೆ ಕೆಲ ವಿಷಯಗಳು ತಿಳಿದುಬರುತ್ತವೆ.

ಚಂದ್ರಕಲಾ ನಾಟಕದಲ್ಲಿ ಉಲ್ಲೇಖಗೊಳ್ಳುವ ನಿಶಾಂಕ ಭಾನುದೇವನೇ ಬಂಗಾಲದ ಸುಲ್ತಾನ ನನ್ನು ಜಯಿಸಿದವ. ಈ ವಿಜಯದ ನೆನಪಿಗಾಗಿ ರಚಿಸಿದ್ದೇ 'ಚಂದ್ರಕಲಾ' ನಾಟಕ. ಈ ಎಲ್ಲ

ಆಧಾರಗಳ ಮೇಲೆ ವಿಶ್ವನಾಥನ ಕಾಲವನ್ನು ಕ್ರಿ.ಶ. ೧೩೭೮-೧೪೩೪ ಎಂದು ನಿರ್ಧರಿಸಬಹುದು.

ಅವನ ಲೋಕಪ್ರಸಿದ್ಧವಾದ ಕೃತಿಯೇ 'ಸಾಹಿತ್ಯದರ್ಪಣ.' ಕಾವ್ಯಪ್ರಕಾಶದ ರೀತಿಯನ್ನೇ ಇಲ್ಲಿಯೂ ಅನುಸರಿಸಲಾಗಿದೆ. ಈ ಕೃತಿಯಲ್ಲಿ ಹತ್ತು ಭಾಗಗಳಿವೆ. ಮೊದಲ ಭಾಗದಲ್ಲಿ ಕಾವ್ಯಾರ್ಥವನ್ನು ಚರ್ಚಿಸಲಾಗಿದೆ. ಇಲ್ಲಿ ಮಮ್ಮಟ ಮತ್ತು ಆನಂದವರ್ಧನನ ತೀರ್ಮಾನಗಳನ್ನು ಆತ ಪ್ರಶ್ನಿಸಿದ್ದಾನೆ. ಪ್ರಕಾರ 'ವಾಕ್ಯಂ ರಸಾತ್ಮಕಂ ಕಾವ್ಯಂ' ಎರಡನೇ ಭಾಗದಲ್ಲಿ ವಾಕ್ಯಗಳನ್ನೂ ಪದಗಳನ್ನೂ ಅರ್ಥೈಸುತ್ತಾ ಶಬ್ದಗಳ ನಾನಾರ್ಥ ಸಾಧ್ಯತೆಗಳನ್ನು ಪರಿಶೀಲಿಸಿದ್ದಾನೆ. ಪದಗಳ ಶಬ್ದಶಕ್ತಿ ಅಧಿಕ್ಷಾ, ಲಕ್ಷಣಾ, ವ್ಯಂಜನ ಮತ್ತು ತಾತ್ಪರ್ಯಗಳನ್ನು ಪರಿಶೀಲಿಸಿದ್ದಾನೆ. ಮೂರನೇ ಭಾಗದಲ್ಲಿ ರಸ ತತ್ವದ ವಿಶ್ಲೇಷಣೆಯಿದೆ. ರಸಾನುಭವಕ್ಕೆ ಇಲ್ಲಿ ನಲವತ್ತೆಂಟು ವಿಧದ ನಾಯಕರೂ ಮುನ್ನೂರಾ ಎಂಭತ್ತುನಾಲ್ಕು ವಿಧದ ನಾಯಕಿಯರೂ ಉಲ್ಲೇಖಿಸಲ್ಪಟ್ಟಿದ್ದಾಗೆ. ನಾಲ್ಕನೇ ಭಾಗದಲ್ಲಿ ಕಾವ್ಯಗಳ ವರ್ಗೀಕರಣವಿದೆ. ಐದನೆಯ ಭಾಗದಲ್ಲಿ ಎಲ್ಲಾ ವಾದಗಳನ್ನು ಸೋಲಿಸಿ ವ್ಯಂಜನದ ಪ್ರಾಮುಖ್ಯವನ್ನು ಸ್ಥಾಪಿಸಿದ್ದಾನೆ. ಆರನೇ ಭಾಗದಲ್ಲಿ ನಾಟ್ಯಶಾಸ್ತ್ರ ವಿವೇಚನೆಯಿದೆ. ರೂಪಕ ಮತ್ತು ಉಪರೂಪಕಗಳ ಲಕ್ಷಣಗಳನ್ನು ಇಲ್ಲಿ ನಿರ್ಧರಿಸಲಾಗಿದೆ. ಕಾವ್ಯ ಪ್ರಕಾರಗಳಾದ ಕಥಾ, ಚಂಪು, ವಿರುದ, ಕರಂಭಕಾ ಮುಂತಾದವುಗಳ ವಿವರಣೆಯಿದೆ. ಧನಂಜಯನನ್ನು ಅನುಸರಿಸುತ್ತಾ, ಅವನ ಲೋಪಗಳನ್ನು ಎತ್ತಿ ತೋರಿಸುತ್ತಾ, ಧನಂಜಯನ 'ದಶರೂಪಕ'ದಲ್ಲಿಲ್ಲದ ಉಪರೂಪಕಗಳನ್ನಾತ ವ್ಯಾಖ್ಯಾನಿಸುತ್ತಾನೆ. ಏಳನೇ ಭಾಗದಲ್ಲಿ ಪದ, ಪದಾಂಶ, ವ್ಯಾಕ್ಯಾರ್ಥ, ರಸದೋಷ, ಮುಂತಾದ ಕಾವ್ಯದೋಷಗಳನ್ನು ಗುರುತಿಸಿದ್ದಾನೆ. ಎಂಟನೇ ಭಾಗದಲ್ಲಿ ಗುಣದ ವಿಶ್ಲೇಷಣೆಯಿದೆ. ವಿಶ್ವನಾಥನು ಅಲಂಕಾರ ದೋಷವನ್ನು ಗುಣಾಭಾವ ಎನ್ನುತ್ತಾನೆ. ವಾಮನ ಮತ್ತು ಭೋಜರ ಇಪ್ಪತ್ತು ಗುಣ ವಿಭಾಜನಗಳನ್ನು ಅವನು ಒಪ್ಪುವದಿಲ್ಲ, ಅವನ ಪ್ರಕಾರ ಗುಣಗಳು ಮೂರೇ ಮೂರು ವಿಧ. ಒಂಭತ್ತನೇ ಭಾಗದಲ್ಲಿ ವೈದರ್ಭಿ, ಗೌಡೀ, ಪಾಂಚಾಲಿ ಮತ್ತು ಲಾಟೀ ರೀತಿಗಳ ವಿವರವಿದೆ. ಹತ್ತನೆಯ ಭಾಗದಲ್ಲಿ ಎಲ್ಲ ಅಲಂಕಾರಗಳನ್ನೂ ಅದರ ಉಪಭಾಗಗಳನ್ನೂ ವಿವರವಾಗಿ ವಿವೇಚಿಸಲಾಗಿದೆ.

ಸಂಸ್ಕೃತದಲ್ಲಿ ದೃಶ್ಯ ಮತ್ತು ಶ್ರವ್ಯ ಎಂಬ ಎರಡು ವಿಧದ ಕೃತಿಗಳಿವೆ. ಆನಂದವರ್ಧನ, ಮಮ್ಮಟ ಮತ್ತು ಜಗನ್ನಾಥರು ಶ್ರವ್ಯಕಾವ್ಯಗಳನ್ನು ಮಾತ್ರ ಗಮನಿಸಿದರೆ ಭರತ ಮತ್ತು ಧನಂಜಯರು ದೃಶ್ಯ ಕಾವ್ಯಗಳನ್ನು ಮಾತ್ರ ಗಮನಿಸಿದರು. ಆದರೆ ವಿಶ್ವನಾಥನು ಎರಡೂ ಪ್ರಕಾರಗಳನ್ನು ಗಮನಿಸಿದ್ದಾನೆ. ಪ್ರಪಂಚದಲ್ಲಿರುವುದೆಲ್ಲಾ ಇಲ್ಲಿ ಇರುವುದಲ್ಲದೆ ಇಲ್ಲಿಲ್ಲದ್ದು ಪ್ರಪಂಚದಲ್ಲಿಲ್ಲ ಎಂಬ ಹೆಮ್ಮೆ ಅವನದು.

'ಸಾಹಿತ್ಯ ದರ್ಪಣ'ವು ಅನವಶ್ಯಕ ವಿಷಯಗಳನ್ನು ಕೈ ಬಿಟ್ಟಿದೆ. ಇಲ್ಲಿ ನಡೆಸಿರುವ ಚರ್ಚೆ ನೇರವಾಗಿದೆ. ಹೊಸತತ್ವ ಸಿದ್ಧಾಂತಗಳನ್ನು ಪ್ರತಿಪಾದಿಸಲಾಗಿದೆ. ನಾಟಕದ ಪ್ರಭೇಧಗಳನ್ನೂ ತಂತ್ರಗಳನ್ನೂ ಕುರಿತು ವಿವರವಾಗಿ ಚರ್ಚಿಸಲಾಗಿದೆ. ಸಾಹಿತ್ಯದರ್ಪಣವು ಸರಳವೂ ನೇರವೂ ಸರ್ವಗ್ರಾಹ್ಯವೂ ಆಗಿದ್ದ ಕಾರಣ ಅಲ್ಪಕಾಲದಲ್ಲಿಯೇ ಕಾಶ್ಮೀರವನ್ನೊಳಗೊಂಡು ರಾಷ್ಟ್ರದ ಎಲ್ಲಾ ಕಡೆ ಪ್ರಸಿದ್ಧವಾಯಿತು. ಈ ಮೊದಲು ಭಾಮಹ, ದಂಡಿ ಮತ್ತು ಉದ್ಭಟರು ಅಲಂಕಾರ ತತ್ವವನ್ನು ಪ್ರತಿಪಾದಿಸಿದರು. ಆನಂದವರ್ಧನನ ಧ್ವನಿತತ್ವವನ್ನು ಮಮ್ಮಟನು ಅನುಮೋದಿಸಿದನು. ವಾಮನನ ರೀತಿಯಾಗಲಿ ಕುಂತಕನ ವಕ್ರೋಕ್ತಿ ತತ್ವವಾಗಲಿ ಪ್ರಚಲಿತವಾಗಲಿಲ್ಲ, ಬಹುಕಾಲ ಅಲಂಕಾರ ಮತ್ತು ಧ್ವನಿತತ್ವಗಳ ಚರ್ಚೆ ನಡೆದಿತ್ತು. ವಿಶ್ವನಾಥನೇ ಧ್ವನಿತತ್ವವನ್ನು ಸಿದ್ಧಾಂತರೂಪದಲ್ಲಿ ನೀಡಿ 'ಧ್ವನಿ ಪ್ರಸ್ಥಾಪನಾ ಪರಮಾಚಾರ್ಯ' ಎಂಬ ಬಿರುದನ್ನು ಧರಿಸಿದನು. ಕಾವ್ಯದ ಆತ್ಮವೇ ಧ್ವನಿಯೆಂದು ಆನಂದವರ್ಧನನೂ ಅಂಗೀಕರಿಸುತ್ತಾನೆ. ಧ್ವನಿಯಲ್ಲಿ ವಸ್ತುಧ್ವನಿ, ಅಲಂಕಾರಧ್ವನಿ ಮತ್ತು ರಸಧ್ವನಿಗಳನ್ನು ಗುರುತಿಸುತ್ತಾನೆ. ರಸದ ಪ್ರಾಮುಖ್ಯವನ್ನು ಆತ ಪ್ರತಿಪಾದಿಸುತ್ತಾನೆ. ನಿಜವಾಗಿ ಕಾವ್ಯದ ಆತ್ಮವೆಂದರೆ ರಸಧ್ವನಿಯೇ ಆಗಿದೆ.

ಭಾರತೀಯ ಕಾವ್ಯಮೀಮಾಂಸೆಯ ಬೆಳವಣಿಗೆಯಲ್ಲಿ ವಿಶ್ವನಾಥನ ಸಾಹಿತ್ಯದರ್ಪಣಕ್ಕೆ ಮಹತ್ವದ ಸ್ಥಾನವಿದೆ. ಧ್ವನಿ ಮತ್ತು ರಸತತ್ವ ಪ್ರತಿಪಾದಕರಲ್ಲಿ ವಿಶ್ವನಾಥ ಕವಿರಾಜನೇ ಅಗ್ರಗಣ್ಯ.

# ಕಿರಣ ಬೇಡಿಯು ಸಾಹಸ ಗಾಥೆ

• ಡಿ. ಗುಂಡೂರಾವ್

ಈಗ ಎಲ್ಲರ ಕಣ್ಣೂ ಕಿರಣ್ ಬೇಡಿ ಮೇಲೆ. ಹಾಗೆಂದ ಮಾತ್ರಕ್ಕೆ ಅವರು ಸುಂದರಿಯೆಂದೇನೂ ಭಾವಿಸಬೇಕಿಲ್ಲ. ಕಳೆದ ವರ್ಷ ಏಶಿಯದ ಪ್ರತಿಷ್ಠಿತ ಮ್ಯಾಗಾಸೆಸೆ ಪ್ರಶಸ್ತಿ ಅವರಿಗೆ ದೊರೆತಾಗ ಇಡಿ ಜಗತ್ತಿನ ಕಣ್ಣೇ ಅವರ ಮೇಲೆ ಕೇಂದ್ರೀಕೃತವಾಯಿತು. ಸಾಗರದಾಚೆ ಅಂತಾರಾಷ್ಟ್ರೀಯ ವಲಯದಲ್ಲಿ ಭಾರತದ ವರ್ಚಸ್ಸು ಹೆಚ್ಚಿತು. ಇಂಡಿಯನ್ ಪೊಲೀಸ್ ಸರ್ವಿಸ್ ಸೇರಿದ ಮೊಟ್ಟ ಮೊದಲ ಮಹಿಳೆ ಅವರು. ಸ್ನಾತಕೋತ್ತರ ಪದವೀಧರೆ.

ಐ.ಎ.ಎಸ್‌ನಲ್ಲಿ ರ್‍ಯಾಂಕ್ ಪಡೆದ ಮೇಲೆ ಅವರು ಆರಿಸಿಕೊಂಡದ್ದು ಪೊಲೀಸ್ ಇಲಾಖೆಯನ್ನು. ಸಾಮಾನ್ಯವಾಗಿ ಹೆಂಗಸರಿಗೆ ಅಲರ್ಜಿ ಎನಿಸುವ ಇಲಾಖೆ ಅದು. ರಾತ್ರಿ ಹಗಲೆನ್ನದೆ ಗಂಡಿನೊಡನೆ ಗಂಡಾಗಿ ದುಡಿಯಬೇಕು. ಆದರೆ ಎಲ್ಲಿ ದೊಂಬಿ, ದಂಗೆ, ದರೋಡೆ ನಡೆಯುವುದೋ ಅಲ್ಲಿ ಪ್ರಾಣಾಪಾಯವನ್ನೂ ಲೆಕ್ಕಿಸದೆ ಮುನ್ನುಗ್ಗುವ ಸ್ವಭಾವ ಕಿರಣ್ ಬೇಡಿಯದು. ಅಪಾಯದ ಅಂಚಿನಲ್ಲೇ ಖುಷಿಪಡುವ ಜೀವ ಅವರದು. ಬರ್ಬರ ಕೃತ್ಯವನ್ನೆಸಗಿದವರನ್ನು ಅರೆದು ಚಟ್ನಿ ಮಾಡುವ ಛಲ. ಕಾನೂನು ಮೀರಿದವರನ್ನು, ಮುರಿದವರನ್ನು ತದಕುವ ಚಪಲ. ಕಿರಣ್ ಬೇಡಿಯವರ ಅಂತಃಸತ್ವವೇ ಅಂಥಾದ್ದು.

ರಾಜಧಾನಿ ದಿಲ್ಲಿಯಲ್ಲಿ ಏಶಿಯನ್ ಕ್ರೀಡೆಗಳು ನಡೆದಾಗ (೧೯೮೧) ಸರಕಾರ ಕಿರಣ್ ಬೇಡಿಯವರನ್ನು ನಗರದ ಉಸ್ತುವಾರಿಗೆ ನಿಯಮಿಸಿತು. ಅವರಾಗ ದಿಲ್ಲಿಯ ಡೆಪ್ಯುಟಿ ಕಮೀಷನರ್. ಅಂತಾರಾಷ್ಟ್ರೀಯ ಕ್ರೀಡೆಗಳ ಕೊಲಾಹಲ-ಸಂಭ್ರಮದಿಂದಾಗಿ ಎಲ್ಲೆಂದರಲ್ಲಿ ಕಾರುಗಳನ್ನು ನಿಲ್ಲಿಸಲಾಗಿತ್ತು. ಇದರಿಂದ ವ್ಯಗ್ರರಾದ ಕಿರಣ್ ಬೇಡಿ ಕ್ರೇನನ್ನು ಉಪಯೋಗಿಸಿ ಕಾರುಗಳನ್ನೆಲ್ಲಾ ಎತ್ತಿಹಾಕಿಸಿ ಸುಗಮ ಸಂಚಾರಕ್ಕೆ ದಾರಿ ಮಾಡಿಕೊಟ್ಟರು. ಕ್ಷಿಪ್ರ ತೀರ್ಮಾನವನ್ನು ತೆಗೆದುಕೊಳ್ಳುವಲ್ಲಿ ಕಿರಣ್ ಬೇಡಿಯವರದು ಎತ್ತಿದಕೈ. ಅವರ ಕಾರ್ಯವೈಖರಿ ಹಾಗೂ ಶಿಸ್ತಿನ ಸ್ವಭಾವ ಕಿರಣ್ ಬೇಡಿಯನ್ನು ದಿಲ್ಲಿಯ ಜನಾದರಣೀಯ ವ್ಯಕ್ತಿಯಾಗಿ ಮಾಡಿದವು.

ನ್ಯಾಯದ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನ ಎಂಬುದು ಅವರ ನಿಲುವು. ಕಿರಣ್‌ಬೇಡಿ ಉತ್ತರ ದೆಹಲಿಯಲ್ಲಿ ಪೊಲೀಸು ಅಧಿಕಾರಿಯಾಗಿದ್ದಾಗ ನ್ಯಾಯವಾದಿಯೊಬ್ಬ ಪಿಕ್‌ಪಾಕೆಟ್ ಮಾಡಿದರೆಂಬ ಕಾರಣಕ್ಕಾಗಿ ಅವರಿಗೆ ಕೈ ಬೇಡಿ ತೊಡಿಸಿ ರಾಜಧಾನಿಯ ಮುಖ್ಯ ರಸ್ತೆಗಳಲ್ಲಿ ಮೆರವಣಿಗೆ ಮಾಡಿಸಿದರು. ಇದರಿಂದ ದಿಲ್ಲಿಯಲ್ಲಿ ಬಹಳ ಕೋಲಾಹಲವುಂಟಾಯಿತು. ಸುದ್ದಿ ಮಾಧ್ಯಮಗಳು ಇದನ್ನು ಭಾರಿ ಪ್ರಚಾರದೊಡನೆ ಪ್ರಕಟಿಸಿದವು.

ನ್ಯಾಯಾಂಗಕ್ಕೆ ಅವಮಾನವಾಯಿತೆಂದು ತೀಸ್ ಹಜಾರಿ ಕೋರ್ಟಿನ ಲಾಯರುಗಳೆಲ್ಲ ಬೊಬ್ಬೆ ಹಾಕಿ ಪ್ರತಿಭಟನಾ ಪ್ರದರ್ಶನವನ್ನು ಏರ್ಪಾಡಿಸಿದರು. ಆಗ ಕಿರಣ್ ಬೇಡಿ ನಿರ್ದಾಕ್ಷಿಣ್ಯವಾಗಿ ಅವರ ಮೇಲೆ ಲಾಠೀ ಛಾರ್ಜು ಮಾಡಿಸಿದರು. ನ್ಯಾಯವಾದಿಗಳು ಕೋರ್ಟನ್ನು ಬಹಿಷ್ಕರಿಸಿದರು. ಈ ಪ್ರತಿಭಟನೆ ಸತತವಾಗಿ ಎರಡು ತಿಂಗಳು ನಡೆದಾಗ ಕಿರಣ್ ಬೇಡಿ ವರ್ಗಾಯಿಸಲ್ಪಟ್ಟು ನ್ಯಾಯಮೂರ್ತಿ ವಾಧ್ವಾ ಅವರ ಅಧ್ಯಕ್ಷತೆಯಲ್ಲಿ ವಿಚಾರಣೆಯೂ ನಡೆಯಿತು. ವೈಯಕ್ತಿಕ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು,

ಪತ್ರಿಕೆಯಲ್ಲಿ ಪ್ರಚಾರ ಪಡೆಯಲು ಕಿರಣ್ ಬೇಡಿ ಈ ಅನುಚಿತ ಕಾರ್ಯವನ್ನು ಎಸಗಿದರು ಎಂದು ನ್ಯಾಯಮೂರ್ತಿಗಳು ಅಭಿಪ್ರಾಯಪಟ್ಟರು.

ತಿಹಾರ್ ಜೈಲಿನ ವಿದ್ಯಮಾನಗಳು ದೇಶದ ಗಮನವನ್ನು ಸೆಳೆಯುವಷ್ಟು ಹದಗೆಟ್ಟಿದ್ದವು. ಮಂತ್ರಿಗಳಿಗೆ, ರಾಜಕಾರಣಿಗಳಿಗೆ ಅಥವಾ ಸಮಾಜದ ಇತರ ಪ್ರತಿಷ್ಠಿತರಿಗೆ ಬೇಕಾದ ಕೈದಿಗಳು ಜೈಲಿನೊಳಗೆ ಪಂಚತಾರಾ ಹೊಟೇಲಿನ ಐಭೋಗಗಳನ್ನು ಅನುಭವಿಸುತ್ತಿದ್ದರು. ಇದನ್ನು ನೋಡಿ ರೋಸಿಹೋದ ಮತ್ತೊಬ್ಬ ವಿದ್ಯಾವಂತ ಸೆರೆಯಾಳು ಸುನೀಲ್ ಬಾತ್ರಾ, ತಿಹಾರ್ ಜೈಲಿನ ಆಡಳಿತ ಚಾರ್ಲ್ಸ್ ಶೋಭರಾಜ್ ಕೈಯಲ್ಲಿದೆಯೆಂದೂ ಅಲ್ಲಿರುವ ಜೈಲು ಅಧಿಕಾರಿಗಳೆಲ್ಲ ಅವನ ಕೈಗೊಂಬೆಯೆಂದೂ, ಶೋಭರಾಜ್ ಅಲ್ಲಿರುವವರೆಗೂ ಬೇರೆ ಬಂದಿಗಳಿಗೆ ಉಳಿಗಾಲವಿಲ್ಲವೆಂದೂ ಆಪಾದಿಸಿದ. ಶೋಭರಾಜ್ ಮತ್ತು ಅವನೊಟ್ಟಿಗೆ ಬಂದಿಯಾಗಿದ್ದ ಡೇವಿಡ್ ಹಾಲ್ ಅಲ್ಲಿಂದ ತಪ್ಪಿಸಿಕೊಂಡು ಹೋಗಲು ಸಂಚುಮಾಡಿದರು. ಆ ದಿನ ಶೋಭರಾಜ್‌ನ ಹುಟ್ಟುಹಬ್ಬದ ನೆಪದಲ್ಲಿ ತನ್ನ ಮೇಲೆ ಉಸ್ತುವಾರಿ ನೋಡುತ್ತಿದ್ದ ಕಾವಲು ಅಧಿಕಾರಿಗಳಿಗೆ ಸಂತೋಷಾರ್ಥವಾಗಿ ಲಾಡು ಹಂಚಲಾಯಿತು. ಅವುಗಳನ್ನು ತಿಂದ ಕೊಂಚ ಹೊತ್ತಿನಲ್ಲೆ ಅವರೆಲ್ಲ ಪ್ರಜ್ಞಾಶೂನ್ಯರಾದರು. ಶೋಭರಾಜ್ ಮತ್ತು ಡೇವಿಡ್ ಹಾಲ್ ಸಮಯಸಾಧಿಸಿ ಸದ್ದುಗದ್ದಲವಿಲ್ಲದೆ ಜೈಲಿನಿಂದ ಪರಾರಿಯಾದರು.

ತಿಹಾರ್ ಜೈಲು ಎಂಥದೆಂದು ಇಲ್ಲಿ ಹೇಳಲೇಬೇಕು. ಅದು ದೇಶದಲ್ಲೇ ಅತ್ಯಂತ ದೊಡ್ಡ ಜೈಲು. ಅಲ್ಲಿ ಒಂಭತ್ತು ಸಾವಿರ ಸೆರೆಯಾಳುಗಳಿದ್ದಾರೆ. ಅದರ ಆಡಳಿತವನ್ನು ನೋಡಿಕೊಳ್ಳಲು ನಾಲ್ಕು ಸಾವಿರಕ್ಕೂ ಹೆಚ್ಚಾಗಿ ಸಿಬ್ಬಂದಿವರ್ಗವಿದೆ. ಅತ್ಯಂತ ಅಪಾಯಕಾರಿ ಕೈದಿಗಳೂ ಅಂತಾರಾಷ್ಟ್ರೀಯ ದಗಾಖೋರರೂ ನೆಲೆಸಿರುವ ತಾಣವಿದು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಈ ಜೈಲಿನಲ್ಲಿ ನಡೆಯುವಷ್ಟು ಭ್ರಷ್ಟಾಚಾರ ಬೇರೆಲ್ಲಿಯೂ ಇಲ್ಲ.

ಅಪರಾಧಿಗಳನ್ನು ಮೃಗಗಳಂತೆ ಕಾಣಲಾಗುತ್ತಿದ್ದ ಈ ಜೈಲಿಗೆ ಕಿರಣ್ ಬೇಡಿಯವರು ಸೆರೆಮನೆಯ ಡಿ.ಐ.ಜಿ. ಆಗಿ ೧೯೯೦ರಲ್ಲಿ ಬಂದಾಗ ಹೊಸ ಬೆಳಕು ಮೂಡಿತು. ಕೈದಿಗಳಲ್ಲೂ ಆಶಾಕಿರಣವೊಂದು ಉದಯಿಸಿತು. ಇಲ್ಲಿಯ ಸೆರೆಯಾಳುಗಳ ದುಃಸ್ಥಿತಿಯನ್ನು ಕಂಡು ಹೇಗಾದರೂ ಮಾಡಿ ಈ ದುರ್ದೈವಿಗಳ ಬಾಳು ಸಹ್ಯವಾಗುವಂತೆ ಮಾಡಬೇಕೆಂದು ತೀರ್ಮಾನಿಸಿ ಕೈದಿಗಳಿಗೆ ಪ್ರಾರ್ಥನಾ ಸಭೆಗಳು, ಯೋಗಶಿಕ್ಷಣ, ಮನೋವೈಜ್ಞಾನಿಕ ತರಗತಿಗಳು ವೃತ್ತಿ ತರಬೇತಿ ಮತ್ತು ಆಧುನಿಕ ಯುಗಕ್ಕೆ ಸರಿಹೊಂದುವ ಕಂಪ್ಯೂಟರ್ ಶಿಕ್ಷಣದ ಏರ್ಪಾಡು ಮಾಡಿದರು ಕಿರಣ್ ಬೇಡಿ. ಇದೂ ಸಾಲದೆಂಬಂತೆ ಪ್ರತಿಭಾಶಾಲಿಗಳಾದ ಸೆರೆಯಾಳುಗಳಿಗೆ ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡುವ ಅವಕಾಶವನ್ನೂ ಕಲ್ಪಿಸಿದರು. ಅಪರಾಹ್ನ ವಾಲಿಬಾಲ್, ಬ್ಯಾಡ್‌ಮಿಂಟನ್ ಕ್ರೀಡೆಗಳಲ್ಲಿ ಭಾಗವಹಿಸುವ ಅವಕಾಶವನ್ನು ಒದಗಿಸಿದರು. ತಂಟೆಮಾಡಿದರೆ ಟಿ.ವಿ. ನೋಡುವ ಅವಕಾಶವನ್ನು ಕೊಡಲಾಗುವುದಿಲ್ಲವೆಂದು ಹೇಳಿದಾಗ ಬಾಲಾಪರಾಧಿಗಳೆಲ್ಲ ಒಂದೇ ದಿನದಲ್ಲಿ ಗಪ್‌ಚುಪ್!

ಕಿರಣ್ ಬೇಡಿಯವರಲ್ಲಿ ಲೋಪದೋಷಗಳು ಇಲ್ಲವೆಂದಲ್ಲ, ಶೋಭರಾಜ್‌ನ ವಿಷಯದಲ್ಲಿ ಅವರು ಪಕ್ಷಪಾತವನ್ನು ತೋರಿದರೆಂಬ ಆಪಾದನೆಯಿದೆ. ಆ ಅಂತಾರಾಷ್ಟ್ರೀಯ ಕೊಲೆಪಾತಕಿಗೆ ಹವಾನಿಯಂತ್ರಣ ಏರ್ಪಡಿಸಿದ್ದು, ಎಲೆಕ್ಟ್ರಾನಿಕ್ ಟೈಪ್‌ರೈಟರ್ ಹಾಗೂ ಪ್ರತ್ಯೇಕ ಟಿ.ವಿ.ಸೆಟ್ಟನ್ನು ಒದಗಿಸಿದ್ದು ಅಲ್ಲದೆ ಜೀವನಚರಿತ್ರೆಯನ್ನು ಬರೆಯಲು ಅನುಕೂಲ ಮಾಡಿಕೊಟ್ಟು ಪಕ್ಷಪಾತ ತೋರಿದ ಆಪಾದನೆಗಳು ಅವರ ಮೇಲಿವೆ. ಕಿರಣ್ ಅತಿ ಪ್ರಚಾರಪ್ರಿಯೆ. ಪ್ರತಿದಿನ ತನ್ನ ಸುದ್ದಿ, ಫೋಟೋ ಪೇಪರಿನ ಮೊದಲ ಪುಟದಲ್ಲಿ ಬರಬೇಕೆಂಬ ಹಂಬಲ. ಇದಕ್ಕಾಗಿ ದಿನಾಲು ಪತ್ರಕರ್ತರನ್ನು ಕಚೇರಿಗೆ ಕರೆಸಿ ಫೋಟೋಗೆ ಪೋಸ್ ಕೊಡುವ ಅಭ್ಯಾಸ ಇಟ್ಟುಕೊಂಡಿದ್ದರಂತೆ!

ಇಷ್ಟಿದ್ದರೂ ಅವರ ಸಹೋದ್ಯೋಗಿಗಳೂ ಅವರ ದಕ್ಷತೆಯ ಬಗ್ಗೆ ಚಕಾರವೆತ್ತುವುದಿಲ್ಲ, ಬದಲು ಅವರ ಸಾಧನೆಗಳಿಗೆ ತಲೆದೂಗುತ್ತಾರೆ. ಆದರೆ ದಿನೇ ದಿನೇ ಹೆಚ್ಚುತ್ತಿರುವ ಅವರ ಜನಪ್ರಿಯತೆಯನ್ನು ನೋಡಿ ಕರಬುತ್ತಾರೆ. ತನ್ನ ಸ್ವಂತ ತುತ್ತೂರಿಯನ್ನು ಊದುವುದರಲ್ಲಿ ಪ್ರವೀಣೆ

ಯೆಂದು ದೂರುತ್ತಾರೆ. ಜೈಲಿನೊಳಗೆ 'ಹಿಮಾಲಯ ಪುತ್ರ' ತೆಗೆಯಲು ಅನುಮತಿಕೊಟ್ಟದ್ದು ಇವರ ಮೇಲಿರುವ ಮತ್ತೊಂದು ಆರೋಪ. ಕಿರಣ್ ಬೇಡಿ ಇಲಾಖೆಗೆ ಸೇರಿದ ದಿನದಿಂದ ಇವತ್ತಿನ ವರೆಗೆ ವಿವಾದಗ್ರಸ್ತ ವ್ಯಕ್ತಿಯಾಗಿಯೇ ಉಳಿದಿದ್ದಾರೆ.

ನಮ್ಮವರ ಬೆಲೆ ನಮಗೆ ತಿಳಿಯುವುದಿಲ್ಲ. ತಿಳಿದರೂ ಹೊಟ್ಟೆಕಿಚ್ಚು ಅಡ್ಡ ಬರುತ್ತದೆ. ದುಷ್ಟಶಕ್ತಿಗಳೆಲ್ಲಾ ಧ್ರುವೀಕರಿಸಿರುವ ತಾಣದಲ್ಲಿ ಸುಧಾರಣೆಗಳನ್ನು ತರುವುದು ಎಷ್ಟು ಪ್ರಯಾಸಕರವೆನ್ನುವುದು ಎಲ್ಲರಿಗೂ ಗೊತ್ತು. ಅವರು ಮಾಡಿದ ಶಿಖರಪ್ರಾಯವಾದ ಸುಧಾರಣೆಯೆಂದರೆ ಸೆರೆಯಾಳುಗಳಲ್ಲಿ ಮನಃಪರಿವರ್ತನೆಯನ್ನು ಉಂಟುಮಾಡಿ ಅವರಲ್ಲಿ ಆತ್ಮವಿಶ್ವಾಸ ಮೂಡಿಸಿದ್ದು. 'ನಾವು ಪೂರ್ತಿ ಪರಿತ್ಯಕ್ತರಲ್ಲ, ನಮ್ಮ ಹಿತ ಚಿಂತಕರೊಬ್ಬರಿದ್ದಾರೆ. ಇಲ್ಲಿಂದ ನಾವು ಬಿಡುಗಡೆ ಹೊಂದಿ ಹೋದ ಮೇಲೆ, ಇತರರಂತೆ ನಾವೂ ಮರ್ಯಾದೆಯಿಂದ ಬಾಳಬಹುದು' ಎಂಬ ಭಾವನೆಯನ್ನು ಅವರಲ್ಲಿ ಮೂಡಿಸಿದ್ದು.

ನೊಬೆಲ್ ಪ್ರಶಸ್ತಿಗೆ ಎರಡನೆಯದೆಂದು ಪರಿಗಣಿಸಲ್ಪಟ್ಟಿರುವ ಮ್ಯಾಗಾಸೆಸೆ ಪ್ರಶಸ್ತಿ ಪ್ರದಾನ ಮಾಡುವಾಗ ಕಿರಣ್ ಬೇಡಿಯವರ ಬಗ್ಗೆ ಹೇಳಿರುವ ಮಾತುಗಳು ಗಮನಾರ್ಹವಾದುವು: 'ಅಪರಾಧ ನಿಯಂತ್ರಣ, ಕಾನೂನು ಅನುಷ್ಠಾನದ ವರ್ಚಸ್ಸನ್ನು ಹೆಚ್ಚಿಸಿರುವುದು, ಸೆರೆಯಾಳುಗಳ ಸ್ಥಿತಿಗತಿಗಳನ್ನು ಉತ್ತಮಪಡಿಸಿ, ಜೈಲು ಸುಧಾರಣೆಯನ್ನು ತಂದದ್ದು ಮತ್ತು ಸರಕಾರದಲ್ಲಿ ಉತ್ತಮ ಸೇವೆ ಸಲ್ಲಿಸಿದ್ದಕ್ಕಾಗಿ ಈ ಪ್ರಶಸ್ತಿಯನ್ನು ನೀಡಲಾಗಿದೆ.'

ಅಮೆರಿಕದ ರಾಷ್ಟ್ರಾಧ್ಯಕ್ಷ ಬಿಲ್ ಕ್ಲಿಂಟನ್ ಅವರು ಕಿರಣ್ ಬೇಡಿಯವರ ಸಾಧನೆಯನ್ನು ಮೆಚ್ಚಿ, "ಒಂದು ದಿನ ತಾವು ವೈಟ್ ಹೌಸಿಗೆ ದಯಮಾಡಿಸಿ ನನ್ನೊಡನೆ ಭೋಜನ ಸ್ವೀಕರಿಸಬೇಕು," ಎಂದು ಆತ್ಮೀಯವಾಗಿ ಆಮಂತ್ರಣ ನೀಡಿದರು. ಇದು ಬೇಡಿಯವರೊಬ್ಬರಿಗೇ ಅಲ್ಲ, ಭಾರತಕ್ಕೂ ಸಂದ ಗೌರವ.

ಅನಂತರ ಅವರ ದೃಷ್ಟಿ ಸಮಾಜಕ್ಕೆ ಹೊರೆಯಾಗಿ ಪರಾವಲಂಬಿಗಳಾದ ಭಿಕ್ಷುಕರ ಕಡೆ ಹೊರಳಿತು. ಈ ದುರ್ದೈವಿಗಳಿಗೆ ಹೇಗಾದರೂ ಮಾಡಿ ಸ್ವತಂತ್ರ ಜೀವನ ನಡೆಸುವ ಹಾಗೆ ಏರ್ಪಾಡು ಮಾಡಬೇಕೆಂದು ಬಯಸಿದರು. ಆದರೆ ಭಿಕ್ಷಾಟನೆಯ ನಿರ್ಮೂಲನೆ ಅವರು ಅಂದುಕೊಂಡಷ್ಟು ಸರಳವಾಗಿರಲಿಲ್ಲ. ಆದರೂ ಕಿರಣ್ ಬೇಡಿ ಎದೆಗುಂದದೆ ಬ್ಯಾಂಕ್ ಅಧಿಕಾರಿಗಳನ್ನು ಸಂಪರ್ಕಿಸಿ ಭಿಕ್ಷುಕರು ಸ್ವತಂತ್ರ ಜೀವನ ನಡೆಸಲು ಅನುಕೂಲವಾಗುವಂತೆ ಅವರಿಗೆ ಸಾಲಕೊಡಬೇಕೆಂದು ಕೇಳಿಕೊಂಡರು. ತೀರಿಸುವ ಶಕ್ತಿಯಿಲ್ಲದವರಿಗೆ ಬ್ಯಾಂಕಿನವರು ಸಾಲಕೊಡುವುದಿಲ್ಲ. ಆದರೂ ಕಿರಣ್ ಬೇಡಿ ಬ್ಯಾಂಕ್ ಅಧಿಕಾರಿಗಳ ಮನವೊಲಿಸಿ ಅವರಿಗೆ ಸಾಲಕೊಡಿಸಿದ್ದು ಸಣ್ಣ ಸಾಧನೆಯೇನಲ್ಲ.

ಇಷ್ಟೆಲ್ಲ ಆದರೂ ಅವರಲ್ಲಿ ಮಾನವ ಸಹಜವಾದ ಓರೆಕೋರೆಗಳು ಇದ್ದೇ ಇವೆ. ಮಿಜೋ

## ಸಂದಿಗ್ಧ

ಬದುಕಿದು ಗೆಳೆಯಾ ಇಷ್ಟೇ ಉದ್ದ
ಜಗ್ಗಿ ಕಟ್ಟಹೋದರೆ ತಟ್ಟನೆ
ಹರಿಯುತ್ತದೆ.
ಹೊಂದಿಸಿ ಮುಂದಿನದನ್ನು
ಗಂಟಿಸೋಣವೆಂದರೆ
ಹಿಂದಿನದರ ಬಿಗಿ ಸಡಿಲುತ್ತಿದೆ
ಹೀಗಾಗಿ
ಹಳೆ ಸಂಬಂಧಗಳ ಹೊರೆಯಲ್ಲಿ
ಮತ್ತೆ
ಸೇರಿಸಲಾರೆ
ಹೊಸ ಪರಿಚಯಗಳ ಭಾರ
ಏಕೆಂದರೆ
ಬದುಕಿದು ನಶಿಸಿದ ದಾರ
ಜಗ್ಗಿ ಕಟ್ಟಹೋದರೆ ಥಟ್ಟನೆ
ಹರಿಯುತ್ತದೆ.

• ವಿದ್ಯಾ ಕುಂದರಗಿ

ರಾಂನಲ್ಲಿ ಕೆಲಸಮಾಡುತ್ತಿದ್ದಾಗ ತಮ್ಮ ಅಧಿಕಾರದ ಪ್ರಭಾವದಿಂದ ತಮ್ಮ ಮಗಳಿಗೆ ಮೆಡಿಕಲ್ ಸೀಟು ಗಿಟ್ಟಿಸಿಕೊಂಡರು. ಮಿಜೋರಾಂನಂಥ ಸಣ್ಣ ರಾಜ್ಯದಲ್ಲಿ ಮೆಡಿಕಲ್ ಸೀಟುಗಳು ತೀರ ಸೀಮಿತ. ಅಲ್ಲಿಯ ಯುವಜನಾಂಗಕ್ಕೇ ಸಾಲದು. ಅಂಥದ್ದ ರಲ್ಲಿ ಪಂಜಾಬ್ ರಾಜ್ಯದ ಈ ಪೊಲೀಸ್ ಅಧಿಕಾರಿ ಜಬರ್‌ದಸ್ತ್‌ನಿಂದ ತಮಗೆ ಬರಬೇಕಾದ ಒಂದು ಸೀಟನ್ನು ಕಿತ್ತುಕೊಂಡರೆಂದು ಅಲ್ಲಿಯ ಯುವಕರು ಸಿಡಿದೆದ್ದು ಪ್ರತಿಭಟನೆ, ಸತ್ಯಾಗ್ರಹ, ಮೆರವಣಿಗೆ ಎಲ್ಲವನ್ನೂ ನಡೆಸಿದರು. ಆದರೆ ಪ್ರಯೋಜನ ಮಾತ್ರ ಆಗಲಿಲ್ಲ.

ಅವರಿಗೆ ಯೂನಿವರ್ಸಿಟಿ ಡಿಗ್ರಿಗಳ ಮೇಲೆ ವ್ಯಾಮೋಹ ಬಹಳ. ಸ್ನಾತಕೋತ್ತರ ಪದವೀಧರೆ ಯಾದರೂ ಪದವಿಗಳ ಮೇಲೆ ಪದವಿಗಳಿಸುವ ಆಕಾಂಕ್ಷೆ. ವಯಸ್ಸಿಗೆ ಬಂದ ಮಗಳು ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿರುವಾಗಲೂ ಅವರು ಈ ವಯಸ್ಸಿನಲ್ಲಿ (೪೫) ಡಾಕ್ಟರೇಟ್ ಡಿಗ್ರಿ ಗಳಿಸುವ ಸಲುವಾಗಿ ಥೀಸಿಸ್ ಬರೆಯುತ್ತಿದ್ದಾರೆ. ಅವರೇನಾ ದರೂ ಪೊಲೀಸ್ ಇಲಾಖೆಗೆ ಬಾರದೇ ಯೂನಿ ವರ್ಸಿಟಿ ಪ್ರೊಫೆಸರ್ ಆಗಿದ್ದರೆ ಇನ್ನೂ ಹೆಚ್ಚು ಕೀರ್ತಿಗಳಿಸುತ್ತಿದ್ದರೋ ಏನೋ.

ತಮ್ಮ ಜೀವಿತ ಕಾಲದಲ್ಲೇ ತಮ್ಮ ಜೀವನ ಚರಿತ್ರೆ ಪ್ರಕಟವಾಗಬೇಕೆಂದು ಅವರು ಶೋಭರಾ ಜ್‌ನಿಗೆ ಹವಾನಿಯಂತ್ರಿತ ಕೊಠಡಿ, ಎಲೆಕ್ಟ್ರಾನಿಕ್ ಟೈಪ್‌ರೈಟರ್ ಮುಂತಾದುವನ್ನು ಒದಗಿಸಿದ್ದರು. ಜೈಲಿನಲ್ಲಿ ಎಲ್ಲರೂ ಕೆಂಪುಟೋಪಿ ಧರಿಸಬೇಕೆಂಬ ನಿಯಮವಿದ್ದರೂ ಶೋಭ್‌ರಾಜ್‌ನಿಗೆ ಮಾತ್ರ ವಿನಾಯತಿ ತೋರಿಸಿದ್ದರು. ಅವರ ಮತ್ತೊಂದು ಖಯಾಲಿಯೆಂದರೆ ಸುದ್ದಿ ಮಾಧ್ಯಮಗಳು ಪ್ರತಿ ದಿನ ಭಾವಚಿತ್ರ ಸಹಿತವಾಗಿ ತಮ್ಮ ವಿಷಯ ಟಾಂಟಾಂ ಮಾಡಬೇಕೆಂಬುದು. ಅವರನ್ನೊಮ್ಮೆ ಒಬ್ಬ ಪತ್ರಕರ್ತ, "ನೀವು ಇಷ್ಟೆಲ್ಲಾ ನ್ಯಾಯ, ಸತ್ಯ ಎಂದು ಮಾತನಾಡುತ್ತೀರಲ್ಲ; ಮಿಜೋರಾಂ ಪ್ರಾಂತಕ್ಕೆ ಸೇರದ ನಿಮ್ಮ ಮಗಳಿಗೆ ಅನ್ಯಾಯದಿಂದ ಸೀಟು ಗಿಟ್ಟಿಸಿಕೊಂಡರಲ್ಲ, ಅದು ನ್ಯಾಯವೋ?" ಎಂದು ಕೇಳಿದಾಗ ಬಿಟ್ಟ ಬಾಣದಂತೆ ಬಂತು ಪ್ರತ್ಯುತ್ತರ, "ನನ್ನ ಮಗಳು ಸುಕೃತಿ ಮೆರಿಟ್ ಸ್ಟೂಡೆಂಟು. ಶೇ.೮೯ ಮಾರ್ಕ್ಸ್ ತೆಗೆದುಕೊಂಡು ಮೆರಿಟ್ ಲಿಸ್ಟ್‌ನಲ್ಲೇ ಮೊದಲನೆಯವಳಾಗಿದ್ದಾಳೆ. ಸರಕಾರದ ಮಾರ್ಗದರ್ಶನದಂತೆ ಅವಳಿಗೆ ಸೀಟು ದೊರಕಿದೆ" ಎಂದು.

ಯುವತಿಯಾಗಿದ್ದಾಗ ಅವರು ಒಳ್ಳೆಯ ಟೆನ್ನಿಸ್ ಆಟಗಾರ್ತಿಯಾಗಿದ್ದರಂತೆ. ಆಟದಲ್ಲಿ ಏನಾದರೂ ಅನ್ಯಾಯವಾದರೆ ಅಂಪೈರೊಡನೆ ವಾಗ್ವಾದಕ್ಕೆ ಇಳಿ ಯುತ್ತಿದ್ದರಂತೆ. ಹದಿಮೂರು ವರ್ಷದ ತಮ್ಮ ಟೆನಿಸ್ ಜೀವನದಲ್ಲಿ ಇದೇ ನೀತಿಯನ್ನು ಅನುಸ ರಿಸಿಕೊಂಡು ಬಂದರಂತೆ.

ಕಿರಣ್ ಬೇಡಿ ಪರಿಶುದ್ಧ ಹಸ್ತೆ. ಅದು ಅವರ ಇಲಾಖೆಗೆ ಅಪರೂಪವಾದ ಗುಣ. ಕಚ್ಚೆ, ಕೈ ಬಾಯಿ ಪರಿಶುದ್ಧವಾಗಿದ್ದವರನ್ನು ಮುಕ್ಕಣ್ಣ ಸಹ ಏನೂ ಮಾಡಲಾರ ಎಂಬ ಮಾತೊಂದಿದೆ. ಆದ್ದರಿಂದಲೇ ಅವರು ಯಾರ ಮುಲಾಜಿಗೂ ಒಳಗಾಗದೆ ನಿರ್ಭೀತರಾಗಿ ಕರ್ತವ್ಯವನ್ನು ನಿರ್ವಹಿ ಸುತ್ತಾರೆ. "ಪ್ರಭಾವಶಾಲಿ ರಾಜಕಾರಣಿಗಳ ಕೋರಿ ಕೆಯನ್ನು ತಿರಸ್ಕರಿಸಿದ್ದರಿಂದ ಅವರ ಕೋಪಕ್ಕೆ ತುತ್ತಾಗಿದ್ದೇನೆ," ಎಂದವರು ಹೇಳುವುದಿದೆ. ಮಹೇಂದ್ರ ಟಿಕಾಯತ್ ಅವರು ತಿಹಾರ್ ಜೈಲಿ ನಲ್ಲಿ ರಾಜಕೀಯ ಬಂದಿಯಾಗಿದ್ದಾಗ ಜೈಲಿನೊಳಗೆ ಹುಕ್ಕಾ ಸೇದಲು ಅನುಮತಿ ಕೇಳಿದರು. ಕಿರಣ್ ಅವರ ಕೋರಿಕೆಯನ್ನು ತಿರಸ್ಕರಿಸುತ್ತ, "ಒಬ್ಬರಿಗೆ ಅನುಮತಿಕೊಟ್ಟರೆ ಎಲ್ಲರಿಗೂ ಕೊಡಬೇಕಾಗು ತ್ತದೆ," ಎಂದು ಹೇಳಿಬಿಟ್ಟರಂತೆ.

ಅಧಿಕಾರದಲ್ಲಿರುವವರನ್ನು ಇವರು ಎದುರು ಹಾಕಿಕೊಂಡದ್ದು ಆಶ್ಚರ್ಯವಲ್ಲ. ಅದರ ಪರಿಣಾ ಮವನ್ನವರು ಅನುಭವಿಸಿದ್ದೂ ಇದೆ. ಕ್ಲಿಂಟನ್ ಅವರ ಭೋಜನ ಆಮಂತ್ರಣ ಬಂದಾಗ ದೆಹ ಲಿಯ ಆಡಳಿತಗಾರರಿಂದ ಕಿರಣ್ ಅವರು ವಾಶಿಂ ಗ್‌ಟನ್ನಿಗೆ ಹೋಗಲು ಅನುಮತಿಯನ್ನು ನಿರಾಕರಿ ಸಲ್ಪಟ್ಟಿತು. ಕಿರಣ್‌ಗೆ ಬಹಳ ದುಃಖವಾಯಿತು. ಆದರೆ ಏನೂ ಮಾಡುವಹಾಗಿರಲಿಲ್ಲ. ೧೯೯೪ರಲ್ಲಿ ನೀಡಿದ್ದ ಈ ಆಹ್ವಾನ ೧೯೯೫ರಲ್ಲಿ ಮತ್ತೊಮ್ಮೆ ಬಂತು. ಈ ಸಲ ಕಿರಣ್ ಜತೆ ಮದರ್ ಥೆರೆಸಾ ಅವರನ್ನೂ ಆಹ್ವಾನಿಸಲಾಗಿತ್ತು. ಕೇಂದ್ರ ಮಂತ್ರಿ ಎಸ್.ಬಿ.ಚವಾಣ್ ಅನುಮತಿಯನ್ನು ನಿರಾಕರಿಸ ಲಿಲ್ಲ. ಕಿರಣ್ ಬೇಡಿ ವೈಟ್ ಹೌಸಿಗೆ ಹೋಗಿಬಂ ದರು.

ಕಿರಣ್ ಬೇಡಿಯವರ ಜೀವನದಲ್ಲಿ ಒಂದು ಸುವರ್ಣಾವಕಾಶ ಒದಗಿಬಂತು. ಕೋಪನ್‌ಹೇಗನ್‌ದಲ್ಲಿ ಬಂದಿಗಳ ಸ್ಥಿತಿಗತಿಗಳನ್ನು ಸುಧಾರಿಸುವ ಬಗ್ಗೆ ಶೃಂಗಸಭೆ ನಡೆಯುವುದೆಂದೂ ಅದಕ್ಕೆ ಬರಬೇಕೆಂದೂ ವಿಶ್ವಸಂಸ್ಥೆಯಿಂದ ಆಹ್ವಾನ ಬಂತು. ಕಿರಣ್‌ಬೇಡಿಯವರಿಗೆ ಬಹಳ ಖುಷಿಯಾದರೂ ದೆಹಲಿಯ ಆಡಳಿತ ಇದಕ್ಕೆ ಅಡ್ಡಗಾಲು ಹಾಕುತ್ತದೆಂಬ ಶಂಕೆ ಇದ್ದೇಇತ್ತು. ನಿರೀಕ್ಷಿಸಿದಂತೆ ಶೃಂಗಸಭೆಗೆ ಹೋಗಲು ಅಪ್ಪಣೆ ದೊರೆಯಲಿಲ್ಲ. ಆದರೆ ಇದನ್ನು ಮೊದಲೇ ನಿರೀಕ್ಷಿಸಿದ್ದ ಕಿರಣ್ ಬೇಡಿ ಕೈಕಟ್ಟಿ ಕುಳಿತುಕೊಳ್ಳಲಿಲ್ಲ. ಗೃಹಮಂತ್ರಿ ಎಸ್.ಬಿ. ಚವಾಣರನ್ನೂ, ಗೃಹಖಾತೆಯ ರಾಜ್ಯ ಮಂತ್ರಿ ರಾಜೇಶ್ ಪೈಲಟ್‌ರನ್ನೂ ಸಂಧಿಸಿ ಅನುಮತಿ ಕೊಡಬೇಕೆಂದು ಕೋರಿದರು. ರಾಜೇಶ್ ಪೈಲಟ್‌ರೇನೋ ಆ ಬಗ್ಗೆ ಸಹಾನುಭೂತಿಯನ್ನು ತೋರಿಸಿದರು. ಗೃಹಮಂತ್ರಿ ಚವಾಣರು ಮೊದಲು ಹಿಂದೇಟು ಹಾಕಿ ಆಮೇಲೆ ಅನುಮತಿಯನ್ನೇನೋ ಕೊಟ್ಟರು. ಆದರೆ ಅದು ಕಿರಣ್ ಬೇಡಿ ಅವರ ಕೈ ಸೇರಿದಾಗ ವಿಮಾನ ಹೊರಡುವುದಕ್ಕೆ ಕೆಲವು ಗಂಟೆಗಳು ಮಾತ್ರ ಉಳಿದಿತ್ತು. ಅದನ್ನು ರಾಜ್ಯ ಸರಕಾರಕ್ಕೆ ತಲುಪಿಸಿ ಶಂಖದಿಂದ ತೀರ್ಥ ಬೀಳುವ ಹೊತ್ತಿಗೆ ಶೃಂಗಸಭೆಯೇ ಮುಗಿದಿರುತ್ತಿತ್ತು! ಕಿರಣ್ ಬೇಡಿ ರಾಜ್ಯ ಸರಕಾರದ ಗೃಹಮಂತ್ರಿಗೆ ಕಾಗದ ಬರೆದು ತಾನು ಶೃಂಗಸಭೆಗೆ ಹೊರಟಿದ್ದೇನೆಂದು ತಿಳಿಸಿ ವಿಮಾನವನ್ನು ಏರಿಯೇ ಬಿಟ್ಟರು. ಯಾವ ಗಂಡಿಗೂ ಇಲ್ಲದ ಗುಂಡಿಗೆ ಅವರದ್ದು. ಶೃಂಗಸಭೆಯಲ್ಲಿ ಭಾಗವಹಿಸುವ ಅವರ ಅತ್ಯುತ್ಸಾಹವೇ ತಿಹಾರ್ ಜೈಲಿನಿಂದ ಎತ್ತಂಗಡಿಗೊಳ್ಳಲು ಕಾರಣವಾಯಿತು.

ಇದೇ ಸಮಯದಲ್ಲೇ ಬ್ರಿಟಿಶ್ ಸರಕಾರ ಕಿರಣ್ ಬೇಡಿಯವರನ್ನು ಆಹ್ವಾನಿಸಿ, ಅವರ ಮಾಗಿದ ಅನುಭವದ ಆಧಾರದ ಮೇಲೆ ಜೈಲಿನ ಸ್ಥಿತಿಗತಿಗಳನ್ನು ಸುಧಾರಿಸುವ ಕುರಿತು ಸಲಹೆ ನೀಡುವಂತೆ ಕೇಳಿಕೊಂಡಿತು.

ಶೃಂಗಸಭೆಯನ್ನು ಮುಗಿಸಿಕೊಂಡು ಬಂದ ಮೇಲೆ ಅವರ ಗ್ರಹಚಾರ ಕೆಡುತ್ತಾ ಬಂತು. ದೆಹಲಿಯ ಆಡಳಿತಕ್ಕೂ ಅವರಿಗೂ ಒಳ್ಳೆಯ ಸಂಬಂಧ ಯಾವಾಗಲೂ ಇರಲಿಲ್ಲ. ಅಧಿಕಾರದಲ್ಲಿದ್ದವರು ಅವರನ್ನು ಹೇಗಾದರೂ ಮಾಡಿ ವರ್ಗ ಮಾಡಿಸಬೇಕೆಂದು ಪ್ರಯತ್ನಿಸತೊಡಗಿದರು. ಕಿರಣ್ ಬೇಡಿ ಮಾಡಿದ ಸಣ್ಣ ಪುಟ್ಟ ತಪ್ಪುಗಳನ್ನೂ ಭೂತಕನ್ನಡಿಯಲ್ಲಿ ದೊಡ್ಡದಾಗಿಸಿ ತೋರಿಸತೊಡಗಿದರು.

ಕೊನೆಗೂ ದೋಷಾರೋಪಣೆಯ ಪಟ್ಟಿಯನ್ನು ತಯಾರಿಸಿ ಅದನ್ನು ಕೇಂದ್ರ ಸರಕಾರದ ಗೃಹಕಾರ್ಯದರ್ಶಿ ಕೆ.ಪದ್ಮನಾಭಯ್ಯನವರಿಗೆ ಕಳಹಿಸಿಕೊಟ್ಟರು. ದೋಷಾರೋಪಣೆಗಳು ಇಂತಿವೆ.

೧)ತಿಹಾರ್ ಜೈಲಿನ ಭದ್ರತೆ, ಸುರಕ್ಷತೆಯನ್ನು ಕಡೆಗಣಿಸಿ ಅಮೆರಿಕದ ಸಂದರ್ಶಕರನ್ನು ಸರಕಾರದ ಅಪ್ಪಣೆಯಿಲ್ಲದೆ ಜೈಲಿನೊಳಗೆ ಬಿಟ್ಟದ್ದು.

೨)ವಿದೇಶೀ ಟೆಲಿವಿಜನ್ ತಂಡಗಳಿಗೆ ಜೈಲಿನೊಳಗೆ ಚಿತ್ರೀಕರಿಸಲು ಸಹಕರಿಸಿದ್ದು.

೩)ಸೆರೆಮನೆಯ ಸುಧಾರಣೆಗಳು ವಿದೇಶಿಯರ ಮೂಲಕ ಜಗಜ್ಜಾಹೀರಾಗಿ ವಿದೇಶಗಳಿಂದ ಆಹ್ವಾನ ಬರಲೆಂಬ ದುರುದ್ದೇಶದಿಂದ ಸಂಚು ಮಾಡಿದ್ದು.

ಕೊನೆಗೂ ಕಿರಣ್‌ಬೇಡಿಯವರನ್ನು ಎತ್ತಂಗಡಿ ಮಾಡಿಸುವಲ್ಲಿ ದಿಲ್ಲಿ ಆಡಳಿತ ಯಶಸ್ವಿಯಾಯಿತು. ಕೇವಲ ವರ್ಗ ಮಾಡಿಸುವಲ್ಲಿ ತೃಪ್ತಿಪಟ್ಟುಕೊಳ್ಳಲಿಲ್ಲ. ಅವರ ಮೇಲೆ ಇರುವ ಆಪಾದನೆಗಳ ತನಿಖೆಯಾಗಬೇಕೆಂದು ದೆಹಲಿಯ ಲೆಫ್ಟಿನೆಂಟ್ ಗವರ್ನರ್ ಕೇಂದ್ರವನ್ನು ಒತ್ತಾಯಿಸಿದರು.

"ವಿಚಾರಣೆಯಾಗಲಿ; ಅದಕ್ಕೆ ನಾನು ಅಳುಕುವುದಿಲ್ಲ. ಆದರೆ ವಿಚಾರಣೆ ಅಧಿಕಾರಶಾಹಿಯಿಂದ ನಡೆಯಬಾರದು. ಬದಲು ವಿಚಾರಣೆ ಆಯೋಗದ ಅಧ್ಯಕ್ಷರು ಒಬ್ಬ ನಿವೃತ್ತ ಸುಪ್ರೀಂ ಕೋರ್ಟಿನ ನ್ಯಾಯಾಧೀಶರಾಗಬೇಕೆಂದರು ಕಿರಣ್‌ಬೇಡಿ. ವರ್ಗಾವಣೆಯ ಆಜ್ಞೆ ಕೈಸೇರಿದಾಗ ಅವರ ಹೊಟ್ಟೆ ಉರಿದುಹೋಯಿತು. ೧೯೯೩ರಲ್ಲಿ ತಿಹಾರಿಗೆ ತಾವು ಬಂದಾಗ ಅದು ಒಂದು ನರಕ ಕೂಪವಾಗಿತ್ತು. ಯಾರೂ ಆ ಸ್ಥಾನಕ್ಕೆ ಬರಲು ಒಪ್ಪುತ್ತಿರಲಿಲ್ಲವಾಗಿ ತಾವು ಅಧಿಕಾರವಹಿಸಿಕೊಳ್ಳುವುದಕ್ಕೆ ಮುನ್ನ ಸುಮಾರು ಒಂದು ವರ್ಷ ಆ ಸ್ಥಾನ ಖಾಲಿ ಬಿದ್ದಿತ್ತು. ೨೫೦೦ ಜನ ಕೈದಿಗಳಿಗೆ ಸ್ಥಳಾವಕಾಶವಿರುವ ಆ ಜೈಲಿನಲ್ಲಿ ಈಗ ೯೫೦೦ ಜನ ಕೈದಿಗಳಿದ್ದರು. ಸರಕಾರ ಜೈಲಿನ ನಿರ್ವಹಣೆಗೆ

ಒದಗಿಸಿದ್ದ ೧೫ ಕೋಟಿಯಷ್ಟು ಹಣ ಆ ಸೈನ್ಯಕ್ಕೆ ಮೂಲಭೂತ ಅಗತ್ಯಗಳಾದ ಅನ್ನ, ಬಟ್ಟೆ ಒದಗಿಸುವುದಕ್ಕೆ ಮಾತ್ರ ಸಾಕಾಗುತ್ತಿತ್ತು. ಆಗ ತಿಹಾರ್ ಅಕ್ರಮಗಳ ಆಗರವಾಗಿತ್ತು. ಅಲ್ಲಿದ್ದ ೪೫೦ ಜನ ಸೇವಕರೇ ಲಂಚ ತೆಗೆದುಕೊಂಡು ಬಂದಿಗಳಿಗೆ ಬೇಕಾದುದನ್ನು ಒದಗಿಸುತ್ತಿದ್ದರು. ಎಲ್ಲೆಡೆಗೂ ಅಶಿಸ್ತು ತಾಂಡವವಾಡುತ್ತಿತ್ತು. ಇದನ್ನೆಲ್ಲಾ ತಹಬಂದಿಗೆ ತಂದು, ಬಂದಿಗಳ ಮನವೊಲಿಸಿ ಅವರಿಗೆ ಶಿಕ್ಷಣಕೊಟ್ಟು, ಜೀವನೋಪಾಯಕ್ಕೆ ಮಾರ್ಗ ಕಲ್ಪಿಸಿಕೊಟ್ಟು, ಜೈಲಿನೊಳಗೆ ೨೪ ಗ್ರಂಥಾಲಯಗಳನ್ನು ಸ್ಥಾಪಿಸಿ ಅವರ ಮನೋವಿಕಾಸಕ್ಕೆ ಅನುವುಮಾಡಿಕೊಟ್ಟು, ರಚನಾತ್ಮಕ ಕಾರ್ಯವನ್ನು ಮಾಡುತ್ತಿರುವಾಗ ವರ್ಗಮಾಡಿದ್ದು ತಾವು ಮಾಡಿದ್ದೆಲ್ಲಾ ಹೊಳೆಯಲ್ಲಿ ಹುಣಸೇಹಣ್ಣು ತೊಳೆದ ಹಾಗಾಯಿತಲ್ಲಾ ಎಂದು ಅವರ ಮನಸ್ಸಿಗೆ ಬಹಳ ನೋವಾಯಿತು. ಅದಕ್ಕಿಂತ ಹೆಚ್ಚಾಗಿ ತಾವು ಹೋದಮೇಲೆ ಮಾಡಿದ ಕೆಲಸಗಳೆಲ್ಲಾ ಎಲ್ಲಿ ಅರ್ಧಕ್ಕೇ ನಿಂತುಬಿಡುತ್ತವೆಯೋ ಎಂಬ ಕಳವಳ ಅವರನ್ನು ಬಾಧಿಸಿತು. ಅವರು ಸರಕಾರದ ವರ್ಗಾವಣೆಯ ಕ್ರಮಬದ್ಧತೆಯನ್ನು ಪ್ರಶ್ನಿಸಿದರು. ಸರಕಾರದ ಒಬ್ಬ ನೌಕರ ಪರಮಾಧಿಕಾರವುಳ್ಳ ಸರಕಾರವನ್ನು ಪ್ರಶ್ನಿಸುವುದಕ್ಕೆ ಇರಬೇಕಾದ ಎದೆಗಾರಿಕೆ ಕಿರಣ್ ಬೇಡಿಯಂಥವರಿಗೆ ಮಾತ್ರ ಇರಲು ಸಾಧ್ಯ.

ಅವರಿಗೆ ಮನಸ್ಸಿಗೆ ನೋವಾದದ್ದು ತಮ್ಮ ಮೇಲಿನ ಆರೋಪಗಳಿಗೆ ಉತ್ತರ ಕೊಡುವ ಅವಕಾಶ ನೀಡದೆ ಶಿಕ್ಷಾವರ್ಗಾವಣೆಯೆಂದು ದೆಹಲಿ ಪೊಲೀಸ್ ಹೆಡ್‌ಕ್ವಾರ್ಟ್‌ರ್ಸ್‌ಗೆ, ಆಡಿಷನಲ್ ಕಮೀಷನರ್ (ನೀತಿ ಮತ್ತು ಯೋಜನೆ)ಯಾಗಿ ವರ್ಗಾಯಿಸಿದ್ದು. ಇದು ಆಟಕ್ಕುಂಟು, ಲೆಕ್ಕಕ್ಕಿಲ್ಲ ಎಂಬ ತರಹ ಒಂದು ಅಪ್ರಾಮುಖ್ಯವಾದ ಹುದ್ದೆ. ಆದರೆ ಬೇಡಿ ನೋವು ನುಂಗಿಕೊಂಡು ಕೂತುಕೊಳ್ಳುವ ವ್ಯಕ್ತಿಯಲ್ಲ. ವರ್ಗವಾದ ಮೇಲೆ ಕೂಡ ಪೇಪರಿಗೆ ಹೇಳಿಕೆ ಕೊಡುವುದನ್ನು ನಿಲ್ಲಿಸಲಿಲ್ಲ. ತಿಹಾರ್‌ನಲ್ಲಿ ಇವರ ಕಾರ್ಯಶೈಲಿಯನ್ನು ಕಣ್ಣಾರೆ ಕಂಡ ಖುಷವಂತ್‌ಸಿಂಗರು, "ಇದು (ವರ್ಗಾವಣೆ) ಒಂದು ಹಿಡಿಯಷ್ಟು ಜನ ಪಿಸುಣರಿಗೆ ದೊರೆತ ವಿಜಯ. ತನಗೂ ದೇಶಕ್ಕೂ ಕೀರ್ತಿ ತಂದ ವ್ಯಕ್ತಿಗಾದ ಅಪಮಾನ," ಎಂದಿದ್ದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

ಕಿರಣ್ ಬೇಡಿ ಎಲ್ಲಿಯೇ ಇರಲಿ, ಸುದ್ದಿಯಲ್ಲಿ ಇರುತ್ತಾರೆ. ನವಜನಾಂಗದ ಸ್ತ್ರೀಶಕ್ತಿಯ ಪ್ರತೀಕವಾಗಿ ನಿಷ್ಠೆಯಿಂದ ಕಾರ್ಯನಿರ್ವಹಿಸುತ್ತಾರೆ; ಅವರು ಯುವ ಜನಾಂಗಕ್ಕೊಂದು ಆಶಾಕಿರಣ ಎನ್ನುವುದು ಸುಳ್ಳಲ್ಲ. ●

## ಚಿತ್ತಾರಗಳು

ಬಚ್ಚಿಟ್ಟ ನೆನಪಿನ ಸುತ್ತಾ
ಹಾಯ್ದ ಕತೆಗಳು ಹಲವು

ಮೌನ ಕುಡಿಯೊಡೆದಾಗ
ಮಾತು ಬಂದಿತು ಹಾರಿ
ಕೆತ್ತಿದ ಶಿಲ್ಪಕ್ಕೆ
ಜೀವ ತುಂಬಿತು ರಾಗ
ಹಾದಿ ತಪ್ಪಿದ ಬದುಕು
ಮಿಡಿದಾಗ ಬಯಲು ಕವಲು

ಬಿಚ್ಚಿಟ್ಟ ನೆನಪಿನ ಸುತ್ತಾ
ಹಾಯ್ದ ಕತೆಗಳು ಹಲವು

ಹಕ್ಕಿ ಹಾಡಿದೆ ಈಗ
ಕಾನನದ ಒಳಗೆಲ್ಲೊ
ನೆನಪು ಕಾದಿದೆ ಮಾಗಿ
ಗಿಳಿಯ ಪಂಜರದಲ್ಲಿ
ಸತ್ತವನ ಸುತ್ತಲಿದೆ
ಹದ್ದು ಕಾಗೆಯ ಹಿಂಡು
ಮುತ್ತಿಟ್ಟ ಚಿತ್ತಕ್ಕೆ
ತಂಪೆರೆದ ಮಳೆಗಾಲ
ಕಣ್ಣೀರ ಹರಿಸಲಿದೆ
ತರುಣಿಯ ಎದೆಹಾಲು

ಬಿಚ್ಚಿಟ್ಟ ನೆನಪಿನ ಸುತ್ತಾ
ಹಾಯ್ದ ಕತೆಗಳು ಹಲವು.

● ಮಹೇಂದ್ರ ಪ್ರಸಾದ

# ಫಲಕಾರಿಯಾಗದ ಹಾಲ್ ಗ್ರಿಫಿತ್ ಆರ್ಭಟ

ಇಂಗ್ಲೆಂಡ್-ವೆಸ್ಟ್ಇಂಡೀಸ್
ಎರಡನೆ ಟೆಸ್ಟ್
ಸ್ಥಳ: ಲಾರ್ಡ್ಸ್
ದಿನಾಂಕ: ೧೯೬೩ ಜೂನ್ ೨೦, ೨೧,
೨೨, ೨೪, ೨೫




● ಆದಿಕೇಶವ

**ಅಂದಿನ ಆಟ !**
**ಇಂದಿನ ನೋಟ !**

ಈ ಟೆಸ್ಟ್ ಪಂದ್ಯ ಮೊದಲ ಚೆಂಡಿನಿಂದ ಹಿಡಿದು ಕಡೆಯ ಚೆಂಡು ಬೀಳುವವರೆಗೂ ಶ್ರೇಷ್ಠ ಮಟ್ಟದ ಆಟದ ಪ್ರದರ್ಶನ ಕಂಡಿತು. ವೆಸ್ಲಿಹಾಲ್ ಅಂತಿಮ ಓವರನ್ನು ಮಾಡಲು ಸಿದ್ಧಗೊಂಡಿದ್ದರು. ಈ ಓವರ್‌ನಲ್ಲಿ ನಾಲ್ಕರ ಪೈಕಿ ಒಂದು ಪರಿಣಾಮ ಸಾಧ್ಯವಿತ್ತು. ಇಬ್ಬರಲ್ಲಿ ಒಬ್ಬರಿಗೆ ಜಯ ದಕ್ಕಬೇಕು. ಇಲ್ಲವೇ 'ಡ್ರಾ'ದಲ್ಲಿ ಅಥವಾ ರೋಮಾಂಚನಕಾರಿ 'ಟೈ'ದಲ್ಲಿ ಪಂದ್ಯ ಮುಕ್ತಾಯಗೊಳ್ಳಬೇಕಿತ್ತು.

ಆತಿಥೇಯ ಇಂಗ್ಲೆಂಡ್ ಪೂರ್ಣ ಆತ್ಮವಿಶ್ವಾಸ ದಿಂದ ಈ ಪಂದ್ಯಕ್ಕೆ ಇಳಿದಿರಲಿಲ್ಲ, ಕಾರಣ ಪ್ರಥಮ ಟೆಸ್ಟಿನಲ್ಲಿ ಅದು ಹತ್ತು ವಿಕೆಟ್‌ಗಳ ಅನಿರೀಕ್ಷಿತ ಅವಮಾನಕಾರಿ ಸೋಲು ಕಂಡಿತ್ತು. ಮೊದಲು ವೇಗದ ಬೌಲರ್‌ಗಳಾದ ವೆಸ್ಲಿಹಾಲ್ ಮತ್ತು ಚಾರ್ಲಿ ಗ್ರಿಫಿತ್ ಅವರ ಭಯಾನಕ ವೇಗಕ್ಕೆ ತತ್ತರಿಸಿದ್ದ ಇಂಗ್ಲೆಂಡ್ ನಂತರ ಲಾನ್ಸ್‌ಗಿಬ್ಸ್‌ರ ಸ್ಪಿನ್ ಚಮತ್ಕಾರಕ್ಕೆ ಮುಗ್ಗರಿಸಿತ್ತು. ಗಿಬ್ಸ್ ೧೫೭ ಓಟ ನೀಡಿ ಒಟ್ಟು ಹನ್ನೊಂದು ವಿಕೆಟ್‌ಗಳನ್ನು ಬಲಿಹಾಕಿದ್ದ.

ಎರಡನೆ ಟೆಸ್ಟನ್ನು ಗೆಲ್ಲುವ ವಿಚಾರ ಮಾಡಿದ್ದ

ಇಂಗ್ಲೆಂಡಿಗೆ ಆಯ್ಕೆದಾರರು ೩೮ ವರ್ಷದ ಹಳೆ ಹುಲಿ ಹ್ಯಾಂಪ್‌ಶೈರ್‌ದ ಬೌಲರ್ ಡೆರಿಕ್ ಶಾಕ್ಲ್ಟನ್ ಅವರನ್ನು ತಂಡದಲ್ಲಿ ಸೇರಿಸಿ ಎಲ್ಲರಿಗೆ ಅಚ್ಚರಿ ಮೂಡಿಸಿದರು.

## ಮೈದಾನದಲ್ಲಿ

ಪ್ರಥಮ ಟೆಸ್ಟ್‌ಅನ್ನು ನಿರಾಯಾಸವಾಗಿ ಗೆದ್ದಿದ್ದ ವಿಂಡೀಸ್ ಅದೇ ಹುರುಪಿನಲ್ಲಿ ಸರದಿ ಆರಂಭಿಸಿತು. ಆರಂಭ ಆಟಗಾರ ಕೊನ್ರಾಡ್ ಹಂಟೆ (೪೪) ಫ್ರೆಡ್ಡಿ ಟ್ರೂಮನ್ ಬೌಲಿಂಗ್‌ನ ಮೊದಲ ಮೂರು ಚೆಂಡನ್ನು ಬೌಂಡರಿಗಟ್ಟಿ ವಿಂಡೀಸ್‌ಗೆ ಭರ್ಜರಿ ಆರಂಭ ನೀಡಿದ. ಆದರೆ ಮ್ಯಾಕ್ ಮೊರಿಸ್ (೧೬)ನನ್ನು ಎಲ್.ಬಿ.ಡಬ್ಲ್ಯೂ ಜಾಲಕ್ಕೆ ಕೆಡವಿದ ಟ್ರೂಮನ್ ಪ್ರವಾಸಿಗರ ಪತನಕ್ಕೆ ನಾಂದಿ ಹಾಕಿದ.

ಮೊದಲ ವಿಕೆಟ್ ಸ್ಕೋರು ೫೧ ಆದಾಗ ಬಿದ್ದಿತು. ಇದಕ್ಕೇನು ವಿಂಡೀಸ್ ಬಗ್ಗಲಿಲ್ಲ. ಸೋಬರ್ಸ್ (೪೨) ಮತ್ತು ರೋಹನ್ ಕನ್ಹಾಯ್ (೭೩) ಮೂರನೇ ಹುದ್ದರಿ ಜೊತೆಯಾಟದಲ್ಲಿ ೬೩ ಓಟ ಸೇರಿಸಿ ತಂಡದ ಮೊತ್ತ ೩೦೦ರ ಗಡಿ ದಾಟುವಂತೆ ಮಾಡಿದರು. ಇವರಿಗೆ ಜೋ ಸೋಲೋಮನ್ (೫೬) ಅಷ್ಟೆ ಸಮರ್ಥ ಬೆಂಬಲ ನೀಡಿದ. ವಿಂಡೀಸಿನ ಎಲ್ಲರ ಆಟ ಮುಗಿದಾಗ ಸ್ಕೋರು ೩೦೧. ಆರಂಭದಲ್ಲಿ ತೀವ್ರ ಶಿಕ್ಷೆಗೆ ಒಳಗಾಗಿದ್ದ ಟ್ರೂಮನ್ ೧೦೦ ಓಟ ನೀಡಿ ಆರು ಮಂದಿಯನ್ನು ಬಲಿಪಡೆದ. ವಯಸ್ಸು ೩೮ ಆಗಿದ್ದರೂ ಯುವಕನಂತೆ ಬೌಲಿಂಗ್ ಮಾಡಿದ ಶಾಕಲ್ಟನ್ ಮೂವರನ್ನು ಕೆಡವಿ ತನ್ನ ಆಯ್ಕೆಯನ್ನು ಸಮರ್ಥಿಸಿಕೊಂಡ.

ಇಂಗ್ಲೆಂಡ್ ಸರದಿ ತೀರ ಶೋಚನೀಯವಾಗಿ ಆರಂಭಗೊಂಡಿತು. ಪ್ರಪ್ರಥಮ ಚೆಂಡಿನಿಂದಲೇ ಆತಿಥೇಯರಿಗೆ ಮಾರಕವಾಗಿ ಅವತರಿಸಿದ ಚಾರ್ಲಿ ಗ್ರಿಫಿತ್ ಆರಂಭ ಆಟಗಾರರಿಬ್ಬರನ್ನೂ ಕೇವಲ ಎರಡು ಓಟಗಳಾಗುವಷ್ಟರಲ್ಲಿ ಎಗರಿಸಿ ವಿಂಡೀಸಿಗೆ ಭಾರೀ ಮೇಲುಗೈ ನೀಡಿದ. ಆದರೆ ಇದೇ ಹುರುಪು ಬಹಳ ಹೊತ್ತು ಉಳಿಯಲಿಲ್ಲ. ಡೆಕ್ಸ್ಟರ್ (೭೦) ಮತ್ತು ಬ್ಯಾರಿಂಗ್ಟನ್ (೮೦) ವಿಂಡೀಸಿಗೆ ಶನಿಗಳಾಗಿ ಕಾಡಿದರು. ಇವರಿಬ್ಬರ ಜೊತೆಯಾಟದಲ್ಲಿ ೮೨ ಓಟಗಳು ಬಂದವು. ಅದರಲ್ಲಿಯೂ ಟೆಡ್ ಡೆಕ್ಸ್ಟರ್ ಕೇವಲ ೭೩ ಎಸೆತಗಳಲ್ಲಿ ಬಾರಿಸಿದ ೭೦ ಓಟಗಳು ದಿನದ ಆಟಕ್ಕೆ ಕಳೆನೀಡಿದವು. ಮುಂದೆ ಪಾರ್ಕ್ಸ್ (೩೫) ಮತ್ತು ಟಿಟ್‌ಮಸ್ ಔಟಾಗದೆ ಹೊಡೆದ ೫೨ ಓಟಗಳು ಇಂಗ್ಲೆಂಡಿನ ಗಳಿಕೆಯನ್ನು ೨೯೭ಕ್ಕೆ ಮುಟ್ಟಿಸಿ ವಿಂಡೀಜ್‌ಗೆ ಬರೀ ನಾಲ್ಕು ಓಟಗಳ ಲೀಡ್ ಕೊಟ್ಟವು. ಈ ಸರದಿಯಲ್ಲಿ ಗ್ರಿಫಿತ್ ೫ ವಿಕೆಟ್‌ಗಳನ್ನು ಹೆಕ್ಕಿದರೆ, ಎರಡು ವಿಕೆಟ್‌ಗಳು ವಾರೆಲ್‌ಗೆ ದಕ್ಕಿದವು.

ಟ್ರೂಮನ್ (೫-೫೨) ಮತ್ತು ಶಾಕಲ್ಟನ್ (೪-೭೨) ಎರಡನೆ ಇನಿಂಗ್ಸ್‌ನಲ್ಲಿ ನಾಲ್ಕು ವಿಕೆಟ್‌ಗಳನ್ನು ಪಟಪಟನೆ ಎಗುರಿಸಿದಾಗ ಮುಂದೆ ಏನು ಮಾಡಬೇಕೆಂಬ ಚಿಂತೆಯಲ್ಲಿ ವಿಂಡೀಸ್ ಮುಳುಗಿತು. ಇಂತಹ ಪರಿಸ್ಥಿತಿಯಲ್ಲಿ ಭಂಡ ಧೈರ್ಯದಿಂದ ಕಣಕ್ಕಿಳಿದ ಬುಚರ್ ನೆಲಕಚ್ಚಿದ್ದ ತಂಡಕ್ಕೆ ಉಸಿರಾಡುವಂತೆ ಮಾಡಿದರೆ, ಇಂಗ್ಲೆಂಡಿಗೆ ಸಿಂಹಸ್ವಪ್ನವಾಗಿ ಪರಿಣಮಿಸಿದ. ಆರನೇ ವಿಕೆಟ್ ಪಾಲುಗಾರಿಕೆಯಲ್ಲಿ ಫ್ರ್ಯಾಂಕ್ ವಾರೆಲ್ (೩೩)ನೊಂದಿಗೆ ೧೧೦ ಅಮೂಲ್ಯ ಓಟ ಸೇರಿಸಿದ ಬುಚರ್ ತನ್ನ ೧೩೩ರ ಗಳಿಕೆಯಲ್ಲಿ ಎರಡು ಸಿಕ್ಸರ್ ಮತ್ತು ೧೭ ಬೌಂಡರಿ ಬಾರಿಸಿದನಲ್ಲದೆ ಇಂಗ್ಲೆಂಡಿನ ಪೂರ್ಣ ಪ್ರಮಾಣದ ಮೇಲುಗೈಗೆ ಕಡಿವಾಣ ಹಾಕಿದ. ಮರ್ಯಾದೆ ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದ ವಿಂಡೀಸ್ ೨೨೯ಕ್ಕೆ ತನ್ನ ಸರದಿ ಸಮಾಪ್ತಿಗೊಳಿಸಿ ಎದುರಾಳಿಗೆ ಗೆಲ್ಲಲು ೨೩೩ ಓಟಗಳ ಸವಾಲು ಒಡ್ಡಿತು.

ಇಂಗ್ಲೆಂಡಿನ ಆಟವು ಹೇಳಿಕೊಳ್ಳುವಂತಾಗಲಿಲ್ಲ. ಈ ಬಾರಿ ವೆಸ್ಲಿಹಾಲ್ (೪-೯೩) ಭೂತವಾಗಿ ಕಂಡು, ಮೊದಲೆರಡು ವಿಕೆಟ್‌ಗಳನ್ನು ಕಬಳಿಸಿ ವಿಂಡೀಸಿಗೆ ಮತ್ತೊಂದು ಗೆಲುವಿನ ವಾಸನೆ ನೀಡಿದ. ಇದೆಲ್ಲಕ್ಕೂ ಮುಖ್ಯವಾಗಿ ತಂಡದ ನಂಬಿಕಸ್ಥ ಕೌಡ್ರೆ (ಔಟಾಗದೆ ೧೯) ಹಾಲ್ ಓವರ್‌ನಲ್ಲಿ ಎಗರಿ ಬಂದ ಚೆಂಡಿನಿಂದ ಕೈ ಮುರಿದುಕೊಂಡದ್ದು ಇಂಗ್ಲೆಂಡಿಗೆ ದೊಡ್ಡ ಆಘಾತವಾಯಿತು. ಈ ಪರಿಸ್ಥಿತಿಯಲ್ಲಿ ತಂಡದ ಜವಾಬ್ದಾರಿ ಹೊತ್ತ ಬ್ಯಾರಿಂಗ್ಟನ್ (೭೦) ಮತ್ತು ಅನಿರೀಕ್ಷಿತವಾಗಿ ಅಮೋಘ ಆಟ ಪ್ರದರ್ಶಿಸಿದ ಬ್ರಿಯಾನ್ ಕ್ಲೋಸ್ (೬೦) ಇಂಗ್ಲೆಂಡಿಗೆ ತಂಪು

ನೀಡಿದರಲ್ಲದೆ ಗೆಲ್ಲುವ ಅವಕಾಶ ಒದಗಿಸಿದರು.

ಈ ಹಂತದಲ್ಲಿ ವೆಸ್ಲಿಹಾಲ್ ಮತ್ತು ಚಾರ್ಲಿ ಗ್ರಿಫಿತ್ ಇತರ ಆಟಗಾರರೊಂದಿಗೆ ಸುದೀರ್ಘ ಮಾತುಕತೆ ನಡೆಸಿದರು. ಹೇಗಾದರೂ ಮಾಡಿ ತಲೆನೋವಾಗಿರುವ ಇವರಿಬ್ಬರನ್ನು ಕಬಳಿಸಬೇಕು ಎಂಬ ಲೆಕ್ಕಾಚಾರ ಇವರದು. ಹಾಲ್ ಒಂದು ಹಂತದಲ್ಲಿ ಎದೆಯ ಮೇಲೆ ಬೌಲಿಂಗ್ ಮಾಡಿದ್ದಲ್ಲದೆ, ಔಟ್ ಮಾಡುವದರ ಬದಲು ಎದುರಾಳಿಗೆ ಹೊಡೆತ ನೀಡುವ ಬಗ್ಗೆ ಹೆಚ್ಚು ನಿಗಾವಹಿಸಿದ. ಕೊನೆಗೆ ಗ್ರಿಫಿತ್ ಬೌಲಿಂಗ್‌ನಲ್ಲಿ ಡೆವಿಡ್ ಮರ್‍ರೆ ವಿಕೆಟ್ ಹಿಂದೆ ಬ್ಯಾರಿಂಗ್ಟನ್‌ನ ಕ್ಯಾಚ್ ತೆಗೆದುಕೊಂಡಾಗ ವಿಂಡೀಸ್ ಸಮಾಧಾನದ ಉಸಿರುಬಿಟ್ಟಿತು.

ಬ್ಯಾರಿಂಗ್ಟನ್ ನಿರ್ಗಮಿಸಿದಾಗ ಇಂಗ್ಲೆಂಡ್ ವಿಜಯದ ಸಮೀಪ ಬಂದಿತ್ತು. ಆದರೆ ಮುಂದೆ ಇದೇ ರೀತಿಯ ಆಟ ಕಂಡುಬರಲಿಲ್ಲ. ಹೊಸಬರಿಗೆ ಬಿರುಗಾಳಿಯಾದ ಹಾಲ್ ಎರಡು ಆಹುತಿಗಳನ್ನು ಪಡೆದು ಇಂಗ್ಲೆಂಡ್ ವಿಜಯಕ್ಕೆ ಒದ್ದಾಡುವಂತೆ ಮಾಡಿದ.

ಪಂದ್ಯದ ಕಡೆಯ ಓವರ್ ಎದುರಿಸಲು ಇಂಗ್ಲೆಂಡ್ ಸಿದ್ಧವಾಗಿದೆ. ಪ್ರೇಕ್ಷಕ ಸಮೂಹ ಮತ್ತೊಂದು ರೋಚಕ ಫಲಿತಾಂಶಕ್ಕಾಗಿ ತುದಿಗಾಲ ಮೇಲೆ ನಿಂತಿದೆ. ಈ ಓವರ್‌ನಲ್ಲಿ ಇಂಗ್ಲೆಂಡಿಗೆ ನಿಚ್ಚಳ ಜಯ ಸಾಧಿಸಲು ಕೇವಲ ಎಂಟು ಓಟಗಳು ಬೇಕಿತ್ತು. ಕೈಯಲ್ಲಿ ಎರಡು ವಿಕೆಟ್‌ಗಳು ಬಾಕಿ ಇವೆ. ಕೊನೆಯ ಕ್ರಮಾಂಕದ ಡೆರಿಕ್ ಶಾಕ್ಲ್ಟನ್ ಮತ್ತು ಡೆವಿಡ್ ಅಲೆನ್ ವಿಕೆಟ್‌ನಲ್ಲಿದ್ದರೆ ಆಡುವ ಪ್ರಸಂಗ ಬರಬಹುದೆಂಬ ಲೆಕ್ಕಾಚಾರದಿಂದ ಕೌಡ್ರಿ ಎಡಗೈಗೆ ಪ್ಲಾಸ್ಟರ್ ಹಾಕಿಕೊಂಡು ಪೆವಿಲಿಯನ್‌ದಲ್ಲಿ ಕುಳಿತಿದ್ದ. ಇಂಗ್ಲೆಂಡ್ ಎರಡು ಮತ್ತು ಮೂರನೇ ಎಸೆತಗಳಲ್ಲಿ ಎರಡು ಓಟಗಳನ್ನು ಕದಿಯಿತು.

ಕಡೆಯ ಮೂರು ಎಸೆತಗಳು ಬಾಕಿ ಉಳಿದಿವೆ. ಗೆಲ್ಲಲು ಬರೀ ಆರು ಓಟಗಳು ಬೇಕು. ಪ್ರತಿಯೊಬ್ಬರ ಉಸಿರು ನಿಂತಿತ್ತು. ಶಾಕಲ್ಟನ್ ಬ್ಯಾಟಿಂಗಿಗೆ ಸಿದ್ಧವಾಗಿದ್ದ. ಅರೇ! ಇದೇನಿದು ನಾಲ್ಕನೆ ಬಾಲ್ ಅವನ ಬ್ಯಾಟಿಗೆ ಸಿಗಲೇ ಇಲ್ಲ. ಬದಲಾಗಿ ಸ್ವಲ್ಪ ಮುಂದೆ ಹೋಯಿತು. ವಿಕೆಟ್ ಕೀಪರ್ ಮರ್‍ರೆ ಚೆಂಡು ಹಿಡಿದು ಸ್ಟಂಪಿಗೆ ಎಸೆದ. ಆದರೆ ಅದು ಬಡಿಯಲಿಲ್ಲ ಆ ಚೆಂಡನ್ನು ಫ್ರ್ಯಾಂಕ್ ವೊರೆಲ್ ತಡೆಹಿಡಿದು ಮತ್ತೊಂದು ತುದಿಯ ಸ್ಟಂಪಿಗೆ ಎಸೆದ ವ್ಹಾ! ಸ್ಟಂಪ್ ಉರುಳೇಬಿಟ್ಟಿತು. ಓಟ ಕದಿಯಲು ಹವಣಿಸಿದ್ದ ಶಾಕಲ್ಟನ್ (೪) ಔಟಾದ. ವಿಂಡೀಸ್ ಕೇಕೆ ಹಾಕಿತು.

ಎರಡು ಎಸೆತಗಳು ಉಳಿದಿವೆ. ಗೆಲ್ಲಲು ಆರು ಓಟ ಬೇಕು. ಎರಡೂ ತಂಡಗಳು ಆಟದ ಮೇಲೆ ಪೂರ್ಣ ನಿಗಾವಹಿಸಿವೆ. ಸ್ವಲ್ಪ ಎಡವಿದರೂ ಸಾಕು ಪಂದ್ಯ ಕೈ ತಪ್ಪಿಹೋಗುತ್ತದೆ. ಈ ಹಂತದಲ್ಲಿ ಪ್ಲಾಸ್ಟರ್ ಹಾಕಿಕೊಂಡಿದ್ದ ಕೌಡ್ರಿ ಬೌಲರ್ ತುದಿಯತ್ತ ಬಂದು ನಿಂತ. ನೋವು ಎಷ್ಟೇ ಇರಲಿ, ತಂಡದ ಮಾನ ಕಾಪಾಡುವದು ಅವನ ಉದ್ದೇಶವಾಗಿತ್ತು. ಕೈ ಮುರಿದುಕೊಂಡ 'ಇವನೇನು ಬ್ಯಾಟ್ ಮಾಡಿಯಾನು? ಎಂಬುದು ಎಲ್ಲರ ತರ್ಕ. ಆದರೆ ಅಲೆನ್ ಕಡೆಯ ಎರಡೂ ಎಸೆತಗಳನ್ನು ರಕ್ಷಣಾತ್ಮಕವಾಗಿ ಆಡಿ ಮತ್ತೊಂದು ರೋಮಾಂಚಕಾರಿ 'ಡ್ರಾ' ಪಂದ್ಯಕ್ಕೆ ಕಾರಣನಾದ. ಎರಡೂ ತಂಡಗಳು ನಿರಾಶೆಯಲ್ಲೂ ಸಂತಸದ ನಿಟ್ಟುಸಿರು ಬಿಟ್ಟವು. ಕೊಲಿನ್ ಕೌಡ್ರಿ ಹೇಳುತ್ತಾರೆ: "ಡೆವಿಡ್ ಅಲೆನ್ ಮತ್ತು ನಾನು ಆಟದ ಕಡೆಯ ಕ್ಷಣಗಳಲ್ಲಿ ಏನು ಮಾಡಬೇಕು ಎಂಬ ಬಗ್ಗೆ ಚರ್ಚೆ ಮಾಡಿದೆವು. ಅಲೆನ್ ಹೇಳಿದ: "ನಾನು ಗೆಲ್ಲುವ ಆಶೆಯನ್ನು ಕೈಬಿಡುವದಿಲ್ಲ. ಉಳಿದದ್ದು ನಮ್ಮ ಅದೃಷ್ಟ." ಅವನಂದುಕೊಂಡಂತೆ ಮುಂದಿನ ಚೆಂಡನ್ನು ಬೌಂಡರಿಗೆ ಅಟ್ಟಿದ್ದರೆ ನಮಗೆ ಗೆಲುವು ಖಂಡಿತ ದಕ್ಕುತ್ತಿತ್ತು. ಆದರೆ ಹಾಗಾಗಲಿಲ್ಲ. ಆದರೂ ರೋಮಾಂಚಕಾರಿಯಾಗಿಯೇ ಮುಗಿದ ಈ ಪಂದ್ಯವನ್ನು ಎಂದಿಗೂ ಮರೆಯುವಂತಿಲ್ಲ. ನಾನು ಬ್ಯಾಟಿಂಗ್ ಮಾಡಲೇಬೇಕಾದ ಪರಿಸ್ಥಿತಿ ಬಂದರೆ ಎಡಗೈಯಿಂದ ಬ್ಯಾಟ್ ಮಾಡುವ ಬಗ್ಗೆ ಯೋಚಿಸುತ್ತಿದ್ದೆ. ನನ್ನ ಮಟ್ಟಿಗೆ ಇದು ಅವಿಸ್ಮರಣೀಯ ಪಂದ್ಯ. ಹಿಂದೆ ಇಂತಹ ಅನುಭವ ಉಂಟಾಗಿರಲಿಲ್ಲ.

ವೆಸ್ಲಿಹಾಲ್- "ನಾನು ಪಂದ್ಯದ ಅಂತಿಮ ಓವರ್‌ನ ಕಡೆಯ ಎಸೆತ ಎಸೆಯಲು ಓಡಲಾರಂಭಿಸಿದ್ದೆ. ಆಗ ನಾಯಕ ಫ್ರ್ಯಾಂಕ್ ವಾರೆಲ್ ಏನೋ ಹೇಳುವಂತೆ ಕೂಗಿದ. ಆದರೆ ಪ್ರೇಕ್ಷಕ ಸಮೂಹದ

ಚೀತ್ಕಾರದ ನಡುವೆ ಅದು ನನಗೆ ಕೇಳಿಸಲೇ ಇಲ್ಲ.

ವಾರೆಲ್, "ನೋಬಾಲ್ ಮಾಡದಂತೆ ಎಚ್ಚರ ವಹಿಸು" ಎಂದು ಕೂಗಿದ ಎಂಬುದು ನಂತರ ತಿಳಿಯಿತು.

### ದಾಖಲೆಯಲ್ಲಿ ಮೂರನೇ ಟೆಸ್ಟ್

ಫ್ರೆಡ್ಡಿ ಟ್ರೂಮನ್ ೧೧೯ ಓಟಗಳಿಗೆ ೧೨ ವಿಕೆಟ್ ಕಬಳಿಸಿ ಇಂಗ್ಲೆಂಡ್ ೨೧೭ ಓಟಗಳ ಭರ್ಜರಿ ಜಯ ಪಡೆಯುವಂತೆ ಮಾಡಿದ.

### ನಾಲ್ಕನೆಯ ಟೆಸ್ಟ್

ಸೋಬರ್ಸ್ ಗಳಿಸಿದ ಶತಕದಿಂದ ವೆಸ್ಟ್ ಇಂಡೀಸ್ ೨೨೧ ಓಟಗಳ ನಿರಾಯಾಸ ವಿಜಯ ಸಾಧಿಸಿತು. ಟೆಸ್ಟ್ ಇತಿಹಾಸದಲ್ಲಿ ಸೋಬರ್ಸ್ ಈ ಶತಕದಿಂದ ೪೦೦೦ ಓಟ ಪೂರೈಸಿದ್ದು ವಿಶೇಷವೆನಿಸಿತು.

### ಐದನೆ ಟೆಸ್ಟ್

ಓವರ್‌ನಲ್ಲಿ ನಡೆದ ಈ ಅಂತಿಮ ಟೆಸ್ಟ್‌ನಲ್ಲಿ ಕೊನ್ರಾಡ್ ಹಂಟೆ ಪ್ರಮುಖವಾಗಿ ಮಿಂಚಿದ. ಈತ ಪ್ರಥಮ ಇನಿಂಗ್ಸ್‌ನಲ್ಲಿ ೮೦ ಮತ್ತು ಎರಡನೆಯ ಸರದಿಯಲ್ಲಿ ಅಜೇಯ ೧೦೮ ಓಟ ಬಾರಿಸಿ ವೆಸ್ಟ್ ಇಂಡೀಸ್ ಎಂಟು ಹುದ್ದರಿಗಳ ಗೆಲುವು ಪಡೆಯುವಂತೆ ಮಾಡಿದನಲ್ಲದೆ, ಇದೇ ಪ್ರಥಮಬಾರಿಗೆ ಇಡಲಾಗಿದ್ದ 'ವಿಸ್ಡನ್ ಟ್ರೋಫಿ' ವಿಂಡೀಸ್ ಬುಟ್ಟಿಗೆ ಬೀಳುವಲ್ಲಿ ಪ್ರಮುಖ ಪಾತ್ರ ವಹಿಸಿದ. ಫಿಲ್‌ಶಾರ್ಪೆ (೬೩ ಮತ್ತು ೮೩) ಇಂಗ್ಲೆಂಡ್ ಪರವಾಗಿ ಎರಡೂ ಇನಿಂಗ್ಸ್‌ನಲ್ಲಿ ಅತಿ ಹೆಚ್ಚು ಓಟ ಗಳಿಸಿದ. ಟ್ರೂಮನ್ ಮೂರು ವಿಕೆಟ್ ಪಡೆದು ಸರಣಿಯಲ್ಲಿ ಒಟ್ಟು ದಾಖಲೆಯ ೩೪ ವಿಕೆಟ್‌ಗಳನ್ನೂ ಹೆಕ್ಕಿದ ಸಾಧನೆ ಮಾಡಿದ.

---

## ಅಭಿನವ ಭಗೀರಥ

ಇಂದಿಗೆ ಸುಮಾರು ಇಪ್ಪತ್ತು ವರ್ಷಗಳ ಪೂರ್ವದಲ್ಲಿ "ಭಗೀರಥ ಭೋಪಾ" ಎಂಬ ನಿರ್ಗತಿಕನೊಬ್ಬ ಕೋಟಾ ರೈಲು ನಿಲ್ದಾಣದ ಪಕ್ಕದಲ್ಲಿನ ಕೊಳಚೆಪ್ರದೇಶದಲ್ಲಿದ್ದುಕೊಂಡು ಭಿಕ್ಷೆ ಬೇಡಿ ಉದರ ನಿರ್ವಹಣೆ ಪ್ರಾರಂಭಿಸಿದ. ಇದುವರೆಗೂ ಆತ ಅದೇ ವೃತ್ತಿಯಲ್ಲಿದ್ದಾನೆ.

ಇದರಲ್ಲೇನು ವಿಶೇಷ ಅಂತೀರಾ?

ಒಂದು ದಿನ ರೈಲು ಗಾಡಿಯ ಕೆಳಗೆ ಸಿಕ್ಕ ಒಬ್ಬ ವ್ಯಕ್ತಿಯ ಶರೀರ ಛಿನ್ನವಿಚ್ಛಿನ್ನವಾಗಿ ಬಿಟ್ಟಿತ್ತು. ತುಂಡುಗಳನ್ನಾರಿಸಿ ತೆಗೆದು ಹಾಕುವವರಾರು? ಕೊನೆಗೆ ಪೊಲೀಸರು ಭಗೀರಥ ಭೋಪಾನನ್ನು ಒತ್ತಾಯದಿಂದಲೇ ಹಿಡಿದು ತಂದು ಈ ಕೆಲಸಕ್ಕೆ ಹಚ್ಚಿದರು. ಒಲ್ಲದ ಮನಸ್ಸಿನಿಂದ ಒಪ್ಪಿಗೆ ನೀಡಿದ ಭಗೀರಥ. ಇಲ್ಲವಾದರೆ ತಕ್ಷಣದಿಂದಲೇ ಭಿಕ್ಷೆ ಬೇಡುವುದಕ್ಕೂ ಅವಕಾಶ ನೀಡದೆ ಹೊರದಬ್ಬಿ ಬಿಡುತ್ತಿದ್ದರು ಪೊಲೀಸರು.

ಅಂದಿನಿಂದ ಈಂಥ ಅಪಘಾತ ಮರಣಗಳು ಎಲ್ಲೇ ಸಂಭವಿಸಿದರೂ ಈ ಭಗೀರಥನನ್ನು ಹುಡುಕಾಡಿ ತಂದು ಕೆಲಸ ಮಾಡಿಸಿಕೊಳ್ಳತೊಡಗಿದರು. ಇದೂ ಆತನಿಗೆ ನಿತ್ಯ ಕಾರ್ಯವಾಗಿಬಿಟ್ಟಿತು. ಕೈಗಾಡಿಯ ಮೇಲೆ ಮೃತ ಶರೀರದ ತುಂಡುಗಳನ್ನು ಇರಿಸಿಕೊಂಡು ಸ್ಮಶಾನದೆಡೆಗೆ ನಡೆಯುತ್ತಾನೆ. ಅಲ್ಲಲ್ಲಿ ಚಹಾ-ತಿಂಡಿಗಳಿಗಾಗಿ ನಿಲ್ಲಿಸುತ್ತಾನೆ. ಬೀಡಿ ಸೇದುತ್ತಾ ಕುಳಿತುಕೊಳ್ಳುತ್ತಾನೆ. ಮೃತದೇಹ ನೋಡಿದವರು ಕೊಡುವ ನಾಲ್ಕಾಣೆ-ಎಂಟಾಣೆ ಜೇಬಿಗೆ ಸೇರಿಸುತ್ತ ಕೊನೆಗೂ ಸ್ಮಶಾನ ಕಾಣಿಸುತ್ತಾನೆ. ಇಂಥ ಬೇವಾರ್ಸಿ ಹೆಣಗಳ ಅಂತ್ಯ ಸಂಸ್ಕಾರವನ್ನೂ ತಾನೇ ಮಾಡುತ್ತಾನೆ.

ಕೋಟಾ ನಗರ ಪಾಲಿಕೆಯು ಈ ಕೆಲಸಕ್ಕಾಗಿ ಭಗೀರಥನಿಗೆ ಈ ಮೊದಲು ತಿಂಗಳಿಗೆ ಮುನ್ನೂರು ರೂಪಾಯಿ ಕೊಡುತ್ತಿತ್ತು. ಇತ್ತೀಚೆಗೆ ಆರು ನೂರಕ್ಕೇರಿಸಿದೆ.

ಈ ಅಭಿನವ ಭಗೀರಥ ಇದೂವರೆಗೂ ಒಂಭತ್ತು ನೂರಕ್ಕಿಂತಲೂ ಹೆಚ್ಚು ನಿರ್ಗತಿಕ ಹೆಣಗಳಿಗೆ ಮುಕ್ತಿನೀಡಿದ್ದಾನೆ.

ಸಂಗ್ರಹ: **ಪ್ರೊ. ಎನ್. ಆರ್. ಆಡೂರ.**

ಮಂಜು ಸುರಿಯುವ ಪ್ರಭಾತ.

ಅಸಹನೀಯವಾದ ಚಳಿಯನ್ನು ಅಲಕ್ಷಿಸಿ ಆ ರೈಲು ನಿಲ್ದಾಣದ ಪ್ಲಾಟ್‌ಫಾರ್ಮ್‌ನ ಉದ್ದಕ್ಕೆ ಆತ ನಡೆದ. ಅಲ್ಲಿ ಕುಳಿತಿರುವ ಒಬ್ಬೊಬ್ಬರನ್ನೂ ಗಮನವಿಟ್ಟು ನೋಡಿದ. ತಾನು ಹುಡುಕುತ್ತಿದ್ದ ಮುಖ ಎಲ್ಲಿಯಾದರೂ ಕಾಣಸಿಗುತ್ತದೆಯೆ? ಎಂದು ಹುಡುಕಾಡಿದ.

ಆತ ರೈಲು ಹಳಿಗಳನ್ನು ನೋಡಿದ. ಹಿಂದೆ ಓದಿದ್ದನ್ನು ನೆನೆದ. ಹೌದು, ಎರಡು ಸಮಾನಾಂತರ ರೇಖೆಗಳು ಎಂದಿಗೂ ಒಂದಾಗಿ ಬೆರೆಯುವುದಿಲ್ಲ! ಅಂದುಕೊಂಡು ಪೆಟ್ಟಿಗೆಯನ್ನೆತ್ತಿ ಪುನಃ ನಡೆದ. ಚಳಿ ಸಹಿಸಲಸಾಧ್ಯವಾದಾಗ ಮಫ್ಲರನ್ನು ತಲೆ ಮತ್ತು ಕುತ್ತಿಗೆಗೆ ಬಿಗಿಯಾಗಿ ಸುತ್ತಿಕೊಂಡು ಆ ಪ್ಲಾಟ್‌ಫಾರ್ಮ್‌ನಲ್ಲಿ ಪ್ರಯಾಣಿಕರು ಪ್ರವೇಶಿಸುವ ಬಾಗಿಲಿನ ಬಳಿಗೆ ಅವಸರವಾಗಿ ನಡೆದ.

ಇದ್ದಕ್ಕಿದ್ದಂತೆ ಆತ ಏದುಸಿರುಬಿಡತೊಡಗಿದ. ಉಸಿರಾಡಲು ತೊಂದರೆಯಾಗುತ್ತಿದೆ; ಎದೆಯಲ್ಲಿ ನೋವೂ ಇದೆ ಎನಿಸಿದಾಗ ಆತ ಕೈ ಒತ್ತಿ ಎದೆಯನ್ನು ಹಿಡಿದುಕೊಂಡ.

ಕೈಯಾಡಿಸಿದಾಗ ಸ್ವೆಟರ್‌ನೊಳಗೆ ನಿಧಿಯ ಹಾಗೆ ಕಾಪಾಡಿ ಇರಿಸಿದ್ದ, ಉದ್ದನೆಯ ಬ್ರೌನ್ ಎನ್‌ವಲಪ್ ಕೈಗೆ ಒತ್ತಿತು.

ಪ್ಲಾಟ್‌ಫಾರ್ಮ್‌ನ ಪ್ರವೇಶದ್ವಾರದ ಹತ್ತಿರ ಕಾಂಕ್ರೀಟ್ ಬೆಂಚಿನ ಮೇಲೆ ಕುಳಿತ. ಆ ಬಾಗಿಲ ಮೂಲಕ ಬರುವ ಒಬ್ಬೊಬ್ಬರನ್ನೂ ಗಮನವಿಟ್ಟು ನೋಡಿದ.

ಎದೆಯ ನೋವು ಮತ್ತು ಏದುಸಿರು ಆಗಲೂ ಶಮನಗೊಂಡಿರಲಿಲ್ಲ. ಜೇಬಿನಿಂದ ಒಂದು ಮಾತ್ರೆ ತೆಗೆದು ನಾಲಿಗೆಯಡಿಯಲ್ಲಿ ಇರಿಸಿದ. ಡಾಕ್ಟರರು ಹೇಳಿದ್ದು ನೆನಪಾಯಿತು. "ನುಂಗಬಾರದು. ಮಾತ್ರೆ ಅಲ್ಲಿಯೇ ಮೆಲ್ಲನೆ ಕರಗಬೇಕು. ಆಗ ಹಿತವೆನಿಸುತ್ತದೆ." ತಾತ್ಕಾಲಿಕವಾಗಿಯಾದರೂ ಜೀವವನ್ನು ಉಳಿಸುತ್ತದೆ ಎಂದೆನಿಸುತ್ತದೆ.

ಆತ ಕಾದು ಕುಳಿತ.

ಈ ಪ್ರತೀಕ್ಷೆ ಯಾವುದಕ್ಕೆ?

ಇನ್ನೆಂದಿಗೂ ಮರಳಲಾಗದ ಈ ಪಟ್ಟಣದಿಂದ ತನ್ನನ್ನು ಪುನಃ ತನ್ನ ಊರಿಗೆ ತಲುಪಿಸಲು ಬರುವ ರೈಲುಗಾಡಿಗಾಗಿಯೇ?

ಅಷ್ಟಕ್ಕಾಗಿ ಮಾತ್ರವೇ?

ಬೇಲ!

ಬೇಲ ಎಂದು ಆತನೊಬ್ಬನೇ ವಾತ್ಸಲ್ಯದಿಂದ ಕರೆಯುವ ಇಸಬೆಲ್ಲಾ.

ಮಫ್ಲರ್‌ಸುತ್ತಿಕೊಂಡಿರುವುದರಿಂದ ಬೇಲಳಿಗೆ ತನ್ನ ಗುರುತು ಹಿಡಿಯಲು ಕಷ್ಟವಾಗುವುದೇ? ಈ ವಿಚಾರ ಬಂದ ತಕ್ಷಣ ಚಳಿಯನ್ನು ಲೆಕ್ಕಿಸದೆ ಆತ ಮಫ್ಲರ್ ಬಿಚ್ಚಿ ಹೆಗಲಿಗೆ ಹಾಕಿಕೊಂಡ. ಬಂದವರಲ್ಲಿ ಯಾರಾದರೂ ಬೇಲ ಆಗಿರಬಹುದೇ? ಎಂದು ಪ್ಲಾಟ್‌ಫಾರ್ಮ್‌ಗೆ ಬರುವವರನ್ನು ನೋಡುತ್ತಾ ಕುಳಿತ. ಎದೆಯ ನೋವು ಸ್ವಲ್ಪ ಕಡಿಮೆಯಾಯಿತು. ಆಗ ಮನಸ್ಸಿನ ಕಣ್ಣುಗಳು ತೆರೆದುಕೊಂಡವು.

ಮನಸ್ಸು ಹಿಂದಕ್ಕೆ ಓಡಿತು. ಮೊದಲ ಸಲ ಈ ಸುಂದರವಾದ ಪಟ್ಟಣಕ್ಕೆ ಬಂದಾಗ....

ಮೇ ತಿಂಗಳು. ಸುಟ್ಟು ಹೋಗುವಷ್ಟು ಸೆಕೆ. ಅದಕ್ಕಿಂತ ಹೆಚ್ಚು ಸುಡುವ, ಪರಿಹಾರವಿಲ್ಲದ ದುಃಖಗಳು. ಅಂದು ಈ ಪಟ್ಟಣದ ತಂಪಿನಲ್ಲೂ ಮನೋಹರತೆಯಲ್ಲೂ ಆತ ಅಭಯ ಪಡೆದ- ಒಂದು ತೀರ್ಥಯಾತ್ರೆಯ ಹಾಗೆ.

ಬಳಿಕ ಮತ್ತೆ ಮತ್ತೆ ಇಲ್ಲಿಗೆ ಬರುತ್ತಿದ್ದುದು, ಅಭಯ ಕೋರಿಕೆಗೆ ಮಾತ್ರವೆ- ಮನಸ್ಸಿನಲ್ಲಿ ಬೇಲಳ ಕಂಗಳು ಪೋಣಿಸುವ ಕುಣಿಕೆಗಳು ಬಿಗಿಯಾಗಿ ಎಳೆವಾಗಲೂ?

ಅಂದು ಮೊದಲ ಸಲ ಬರುವಾಗ, ಅಹಂಕರಿಸುತ್ತಿತ್ತು ಆರೋಗ್ಯ. ಒಬ್ಬನೇ ಕಾರಿನಲ್ಲಿ, ಹೇರ್‌ಪಿನ್ ತಿರುವುಗಳಲ್ಲಿ ನಜ್ಜುಗುಜ್ಜಾಗುವಂತೆ ಉಜ್ಜುತ್ತಿದ್ದ ಚಕ್ರಗಳ ಚೀತ್ಕಾರಗಳು ಉನ್ಮಾದಕರವಾಗಿದ್ದವು.

ಏರುಗಳನ್ನು ಕಾರಿನ ಅತಿವೇಗ ಹಿಂದೆ ಹಾಕಿದಾಗ ರೇಡಿಯೇಟರ್‌ನ ನೀರು ಕುದಿಯಿತು. ಒಂದು ಗುಡಿಸಲಿನ ಮುಂದೆ ಕಾರು ನಿಲ್ಲಿಸಿದ. ಬಾನೆಟ್ ತೆರೆದು, ಒಂದು ಬಟ್ಟೆಯಿಂದ ಸೇರಿಸಿ ಹಿಡಿದು, ಬಲು ನಿಧಾನವಾಗಿ ರೇಡಿಯೇಟರ್‌ನ ಮುಚ್ಚಳ ತೆರೆದ. ಗುಡಿಸಲಿನ ಮುಂದೆ ನಿಂತಿದ್ದಳು ಒಬ್ಬಳು ಪುಟ್ಟ ಹುಡುಗಿ. ಹತ್ತು ಹದಿನೈದಕ್ಕಿಂತ ಹೆಚ್ಚು ವಯಸ್ಸಾಗಿರಲಿಕ್ಕಿಲ್ಲ. ಅವಳು ತನ್ನೆಡೆಗೆ ಆಸಕ್ತಿಯಿಂದ ನೋಡುತ್ತಿದ್ದಳು. ನೀರು ಕೇಳಿದಾಗ ಸಂತೋಷದಿಂದ ಒಂದೇ ಒಂದು ಗ್ಲಾಸ್ ನೀರು ತಂದುಕೊಟ್ಟಳು. ಆತನಿಗೆ ನಗು ಬಂತು. ಆದರೂ ಅವಳಿಗೆ ಬೇಸರವಾಗಬಾರದಲ್ಲ? ನೀರು ಕುಡಿದ. ತಂಪಾದ ನೀರು. ನಂತರ ಕೊಡಗಟ್ಟಲೆ ನೀರು ಕೇಳಿದ. ಎಲ್ಲವನ್ನೂ ಸುರಿದು ಕಾರಿನ ನೀರನ್ನು ತಣಿಸಿದ. ಹೋಗುವಾಗ ಆತ, ಎರಡು ರೂಪಾಯಿಯ ನೋಟನ್ನು ಅವಳೆಡೆಗೆ ಚಾಚಿದ. ಸ್ವೀಕರಿಸಲು ಆಕೆ ಒಪ್ಪದಿದ್ದಾಗ, ಅವಳ ಕೈಯನ್ನು ಬಲಾತ್ಕಾರವಾಗಿ ಹಿಡಿದು ಕೈಯಲ್ಲಿ ನೋಟನ್ನು ಒತ್ತಿ ಇರಿಸಿದ. ಅವಳು ಬೆದರಿ ಕೊಡವಿದಳು. ಕೊಡ ಕೆಳಗೆ ಬಿದ್ದು ಒಡೆಯಿತು. ಅವಳು ಓಡಿ ಹೋಗಿ ಗುಡಿಸಲೊಳಗೆ ಅಡಗಿಕೊಂಡಳು. ಅವನಿಗೆ ಅದು ಒಂದು ಅಪಶಕುನವೆಂದು ಅನ್ನಿಸಿತು. ಅವಳು ತನ್ನನ್ನು ತಪ್ಪಾಗಿ ಭಾವಿಸಿರಬಹುದು ಅಂದುಕೊಂಡ ಆತ ಗುಡಿಸಲಿನ ಬಾಗಿಲಿಗೆ ಐದು ರೂಪಾಯಿಯ ನೋಟನ್ನು ಸಿಕ್ಕಿಸಿ, ಅತಿ ಬೇಗನೆ ಪ್ರಯಾಣ ಮುಂದುವರೆಸಿದ.

ನಿಧಾನ ನಿಧಾನವಾಗಿ, ಹಾದಿಯ ಪಕ್ಕಗಳಲ್ಲಿ ತನಗಾಗಿ ಕಾದಿತ್ತು ಚಳಿ. ಬದಲಾಗುತ್ತಾ ಬರುತ್ತಿತ್ತು ಪ್ರಕೃತಿಯ ಚೆಲುವು. ಹಾದಿಯ ಇಬ್ಬದಿಗಳಲ್ಲೂ ಹೂಗಳು.

ಚಳಿಯ ಹರಿವಾಣದಲ್ಲಿ ಹೂಗಳು ಮಂಗಳ ಕಲಶದೊಂದಿಗೆ ತನ್ನನ್ನು ಪಟ್ಟಣಕ್ಕೆ ಸ್ವಾಗತಿಸುತ್ತಿವೆ. ಇಕ್ಕೆಲದಲ್ಲೂ ಚಹಾ ತೋಟ

ಗಳ ಅತಿ ಮನೋಹರವಾದ ನಿಮ್ನೋನ್ನತಗಳು. ದಟ್ಟವಾದ ಹಸಿರು ರತ್ನಗಂಬಳಿಯಲ್ಲಿ ಅಲ್ಲಲ್ಲಿ ಮೈಚೆಲ್ಲಿ ಮಲಗಿರುವ ಬೆಳ್ಮೋಡಗಳು. ತಗಡಿನ ಮೇಲ್ಛಾವಣಿಗಳು. ಕೆಂಪು ಗೋಡೆಗಳು. ಪುಟ್ಟ ಮನೆಗಳು ಅಲ್ಲಲ್ಲಿ.

ಮನಸ್ಸಿನಲ್ಲಿ ಆಶೆಯ ಮೊಳಕೆಯೊಡೆಯಿತು.

ಸದಾ ತಂಪು ನೀಡುವ ಇಲ್ಲೆಲ್ಲಾದರೂ ಒಂದು ಚಹಾತೋಟವನ್ನು ಕೊಂಡುಕೊಳ್ಳಬೇಕು. ಅದರಲ್ಲಿ ಒಂದು ಸಣ್ಣ ಬಂಗಲೆ. ಬಿಸಿಬಿಸಿ ಅಡಿಗೆ ತಯಾರಾಗುವ ಅಡಿಗೆಕೋಣೆಯಿಂದ, ನಾಲಿಗೆಯಲ್ಲಿ ನೀರೂರಿಸುವಂಥ ಸುವಾಸನೆ ಮತ್ತು ಕೈ ಬಳೆಗಳ ಝಣತ್ಕಾರ. ಶಯ್ಯಾಗೃಹದಲ್ಲಿ ಅಸ್ಥಿಗಳ ಚಳಿಗೆ ಬಿಸಿಯನ್ನು ನೀಡುವ ಶರೀರ. ಬಾಳಿನ ಉಷ್ಣ ಭೂಮಿಯಿಂದ ವರ್ಷವರ್ಷವೂ ಬಂದು ನೆಲೆಸಲು ಒಂದು ಹುಲ್ಲುಗಾವಲು.

ಪಟ್ಟಣ ಸಮೀಪ ಎಂದೆನಿಸಿತು.

ದಾರಿಯ ಪಕ್ಕದಲ್ಲಿ ನೇರಳೆ ಹೂಗಳು ಅರಳಿ ನಿಂತಿರುವ ಮರದ ಕೆಳಗೆ ಗಾಡಿ ನಿಲ್ಲಿಸಿ ಹೊರಗಿಳಿದ, ಒಂದಷ್ಟು ಹೂಗಳನ್ನು ಕೀಳಲು. ಕೈ ಚಾಚಿದಾಗ ಹೂಗಳು ನಿಲುಕುತ್ತಿಲ್ಲ ಅನ್ನಿಸಿದಾಗ ಮರದ ಕೆಳಗಿನ ಬಂಡೆಯ ಮೇಲೇರಿ, ಕೈಯೆಟುಕಿಸಿ ಒಂದು ಕೊಂಬೆಯನ್ನು ಮುರಿದ. ಆಗಷ್ಟೆ ಆ ಕಡೆಗೆ ನೋಡಿದ. ಅಗಾಧವಾದ ಇಳುಕಲು. ಕಾಲಡಿಯಿಂದ ಆರಂಭವಾದ ನಡುಕ ನೆತ್ತಿಗೆ ಬಂದು ತಲುಪಿತು. ಬಂಡೆಯಿಂದ ಕೆಳಗೆ ಧುಮುಕಿ ಇಳಿದ. ವಾಸನೆಯಿಲ್ಲದ ಹೂಗಳು. ಅವನ್ನು ಡ್ಯಾಷ್‌ಬೋರ್ಡ್‌ನಲ್ಲಿ ಇರಿಸಿದ. ಹೂಗಳಿಗೆ ಪರ್‌ಫ್ಯೂಂ ಸ್ಪ್ರೇ ಮಾಡಿದ. ಕಾರಿನೊಳಗೆ ಪಸರಿಸಿದ ಪರಿಮಳವನ್ನು ದೀರ್ಘವಾಗಿ ಉಸಿರೆಳೆದುಕೊಂಡ. ಆಗಲೂ ಬಾಟಲಿ ಹೊರದೆಗೆಯುವ ಆತ್ಯಾತುರವನ್ನು ಅದುಮಿ ಹಿಡಿದು ಪಯಣವನ್ನು ಮುಂದುವರಿಸಿದ.

ಪಟ್ಟಣದಲ್ಲಿ ಒಂದು ಕವಲುದಾರಿ ಕಾಣಿಸಿದಾಗ ಕಾರನ್ನು ನಿಲ್ಲಿಸಿದ. ಬ್ಯಾಗಿನಿಂದ ಬಾಟಲಿಯನ್ನು ಹೊರದೆಗೆದು ಗ್ಲಾಸ್‌ಗೆ ಸುರಿದ. ಗ್ಲಾಸನ್ನು ಹೊರಕ್ಕೆ ಚಾಚಿ ಹಿಡಿದ, ಅಲ್ಲಿನ ಚಳಿಯನ್ನು ಸ್ವಲ್ಪ ಹೊತ್ತು ಅದರಲ್ಲಿ ಕರಗಿಸಲು; ಬಳಿಕ ಒಂದೇ ಎಳೆತಕ್ಕೆ ಅದನ್ನೆಲ್ಲಾ ಗಟಗಟ ಕುಡಿದ. ಅಲ್ಲಿಯ ತನಕ ತಡೆಹಿಡಿದಿದ್ದ ಆಸೆ ಧುತ್ತೆಂದು ಹೊರಬಂದು ನಿಂತಿತು.

ಚಳಿ; ಮೈಗೂ ಮನಸ್ಸಿಗೂ ಹೃದ್ಯವಾದ ಚಳಿ. ಇಲ್ಲಿಗೆ ಬರುವವರನ್ನೆಲ್ಲ ನಿಷ್ಪಕ್ಷಪಾತವಾಗಿ ಸ್ವಾಗತಿಸುವ ಚಳಿ.

ಸಣ್ಣ ಬೆಂಕಿಯ ಪಂಜುಗಳು, ಹಿತಕರವಾದ ಬಿಸಿಯೊಂದಿಗೆ, ಒಂದೊಂದಾಗಿ ಜಠರದಲ್ಲಿ ಎಚ್ಚೆತ್ತವು. ಕ್ರಮೇಣ ನರಗಳಿಗೂ ಹಬ್ಬಿಕೊಂಡವು.

ಒಂದು ಸಿಗರೇಟ್ ಹೊತ್ತಿಸಿ ದೀರ್ಘವಾಗಿ ದಂ ಎಳೆಯುವಾಗ ಹಿಂದಿನಿಂದ,

"ಸಾರ್, ಗೈಡ್," ಎಂಬ ಧ್ವನಿ ಕೇಳಿ ಬಂತು.

ನಿಧಾನವಾಗಿ ತಿರುಗಿ ನೋಡಿದ. ಕಡು ನೀಲಿ ಬಣ್ಣದ ಉಲ್ಲನ್ ಸೂಟ್. ಕೊರಳಿಗೆ ಬಿಗಿದ ಮಫ್ಲರ್. ಎತ್ತರವಾಗಿದ್ದ ಮಧ್ಯವಯಸ್ಕ. ಮೂಗು ಹದ್ದಿನ ಕೊಕ್ಕನ್ನು ನೆನಪಿಗೆ ತರುವಂತಿತ್ತು. ವಿಶಾಲವಾದ ಹಣೆ. ಪೊದೆಯಂತೆ ಬೆಳೆದ ದಟ್ಟವಾದ ತಲೆಗೂದಲು. ಅದರಲ್ಲಿ ಅಡಗಿದ್ದ ನರೆತ ಕೂದಲೆಳೆಗಳು. ಹರವಾದ ಎದೆ. ದೃಢವಾದ ಶರೀರ.

ಏನನ್ನೂ ನುಡಿಯದೆ ಆತ ಗೈಡನ್ನು ನೋಡುತ್ತ ನಿಂತ.

ಆಗ ಗೈಡ್ ಒಂದು ಯಂತ್ರದಂತೆ ಕೃತಕವಾದ ಹಾವಭಾವದೊಂದಿಗೆ ಇಲ್ಲಿ ನೋಡಬೇಕಾದ ಸ್ಥಳಗಳು, ತಂಗಬೇಕಾದ ಹೋಟೇಲ್‌ಗಳು.... ಎಂದೆಲ್ಲಾ ಕಂಠಪಾಠ ಮಾಡಿದ ಮಾತುಗಳನ್ನು ಉಸುರಿದ.

ಬಳಿಕ ಉತ್ತರಕ್ಕಾಗಿ ಕಾದು ನಿಂತ.

ಆತ ಉತ್ತರವೇನನ್ನೂ ನುಡಿಯದೆ ಬರಿ ಒಂದು ಸಿಗರೇಟ್ ತೆಗೆದು ಅವನತ್ತ ಚಾಚಿದ. ಒಂದು ಕ್ಷಣ ಅನುಮಾನಿಸಿದ ಗೈಡ್ ಅದನ್ನು ತೆಗೆದುಕೊಂಡ. ಕೋಟಿನ ಜೇಬಿನಲ್ಲಿ ಬೆಂಕಿಪೆಟ್ಟಿಗೆ ಹುಡುಕುತ್ತಿದ್ದಾಗ, ಗ್ಲಾಸಿಗೆ ಸ್ವಲ್ಪ ವೈನ್ ಎರೆದು ಗೈಡ್‌ಗೆ ಕೊಟ್ಟ. ಬೆರಗಾಗಿ ಗ್ಲಾಸನ್ನು ಸ್ವೀಕರಿಸಿ, ಗೈಡ್ ಕಾರಿನ ಬ್ಯಾಕ್‌ಸೀಟಿನಲ್ಲಿ ಹತ್ತಿ ಕುಳಿತು ಸ್ವಲ್ಪ ಸ್ವಲ್ಪ ವಾಗಿ ಕುಡಿಯತೊಡಗಿದಾಗ, ಆತ ಕಾರನ್ನು ಹತ್ತಿ ಸ್ಟಾರ್ಟ್ ಮಾಡಿದ. ಕಾರು ನಡೆಸುತ್ತಾ ಗಾಂಭೀರ್ಯ ತೊರೆಯದೆ ಕೇಳಿದ.

"ಒಂದು ಒಳ್ಳೆಯ ಹೋಟೆಲ್. ಅನುಕೂಲಕರ ಕೋಣೆ. ಹೋಗುವ ದಾರಿ?"

ಗೈಡ್ ಹೇಳಿದ ದಾರಿಗಳಲ್ಲಿ ಸಾಗುವಾಗ, ದಾರಿಯ ಬದಿಯಲ್ಲಿರುವ ಹೂಗಳನ್ನು ಆತ ಗಮನಿಸಿದ. ಸ್ವಲ್ಪ ದೂರ ಏನೂ ನುಡಿಯದೆ ಹಾದಿಯನ್ನು ಕ್ರಮಿಸಿದಾಗ, ತೆರೆದು ಹೇಳಲು ಸ್ವಲ್ಪ ಕಷ್ಟವಾದ ವಿಷಯವನ್ನಾತ ಒಂದು ಸ್ವಗತದಂತೆ ಹೇಳಿದ:

"ಎಷ್ಟು ಸುಂದರವಾದ ಜಾಗ! ಬಹಳ ಚಳಿ. ಹೀಗಿರಲು, ಹೋಟೆಲಿನ ಕೋಣೆಯಲ್ಲಿ ನಾನು ಒಂಟಿಯಾಗಿ ಹೇಗೆ ಕಾಲ ಕಳೆಯಬೇಕು?"

ಗೈಡ್ ಒಮ್ಮೆ ಮಿಸುಕಾಡಿ ಕುಳಿತ ಎಂದೆನಿಸಿತು.

"ಸಾರ್, ಕ್ಷಮಿಸಿ, ಈಗ ಇಲ್ಲಿ ಸೀಸನ್ ತಾನೇ? ಬಹಳ ಕಷ್ಟ."

ಗೈಡ್ ವ್ಯವಹಾರ ಕುದುರಿಸಲು ಹೆಚ್ಚು ಬೆಲೆ ಕೇಳುತ್ತಿದ್ದಾನೆಂದು ಗೊತ್ತಾದಾಗ ಸಿಟ್ಟನ್ನಡಗಿಸಿ ಆತ ಕೇಳಿದ:

"ಅಂದರೆ ಬೆಲೆ ಹೆಚ್ಚಾಗುತ್ತೆ ಅಲ್ವೇ?'

"ಸಾರ್, ಸಿಟ್ಟಾಗಬೇಡಿ, ನಾನು ನಿಜವನ್ನೇ ಹೇಳುತ್ತಿದ್ದೇನೆ."

ಸ್ವಲ್ಪ ಸಿಟ್ಟಿನಿಂದಲೇ ಆತ ಹೇಳಿದ:

"ಇಲ್ಲಿನ ದೃಶ್ಯಗಳನ್ನು ನೋಡುವುದಕ್ಕೆ ನನಗೆ ನೀವೇ ಜೊತೆಯಿರಬೇಕೆಂದಿಲ್ಲ, ಬೇಜಾರಾಗಬೇಡಿ. ನಿಮಗೆ ನಷ್ಟವೇನೂ ಆಗೋದಿವಲ್ಲ; ಸಾಲದೇ"

"ಸಾರ್, ನನ್ನನ್ನು ತಪ್ಪಾಗಿ ತಿಳಿಯಬೇಡಿ. ನಾನು ಬೆಲೆ ಕುದುರಿಸುತ್ತಿಲ್ಲ. ಸಾಮಾನ್ಯವಾಗಿ ಇಲ್ಲಿಗೆ ಬರುವ ಟೂರಿಸ್ಟ್‌ಗಳ ಹಾಗಲ್ಲ ತಾವು ನನ್ನೊಡನೆ ವರ್ತಿಸಿದ್ದು. ತಮ್ಮ ಬಗ್ಗೆ ನನಗೆ ಗೌರವವಿದೆ. ಆದರೆ ನಾನು ಖಚಿತವಾಗಿ ಹೇಳಲಾರೆ."

ಆತ ತಕ್ಷಣ ಕಾರನ್ನು ನಿಲ್ಲಿಸಿದ.

"ಒಂದು ಕೆಲಸ ಮಾಡಿ. ನನಗೆ ಒಂದು ಸೌಕರ್ಯವಿರುವ ಕೋಣೆಯ ಏರ್ಪಾಡು ಮಾಡಿಕೊಡಿ ಸಾಕು. ಉಳಿದ ವಿಷಯಗಳನ್ನೆಲ್ಲಾ ನಾನೊಬ್ಬನೇ ವಿಚಾರಿಸಿಕೊಳ್ಳುತ್ತೇನೆ."

"ಸಾರ್, ಸ್ವಲ್ಪ ದೂರ ಹೋಗಿ ಎಡಗಡೆ ಕಾಣುವ ಮೊದಲ ದಾರಿಗೆ ತಿರುಗಿ. ನಾನೊಮ್ಮೆ ಶ್ರಮಿಸಿ ನೋಡ್ತೇನೆ."

ಎಡಕ್ಕೆ ತಿರುಗಿಯೂ ಇನ್ನೂ ಬಹಳಷ್ಟು ದೂರ. ಹೂಗಳು ಮತ್ತು ಮನೆಗಳು ವಿರಳ



## ಬಲಿದಾನ

ಅವಳಾಸೆಗೆ
ನಾನೇಕೆ ಅಡ್ಡಬರಲಿ?
ಆದರೂ ಪರ್ವಾಗಿಲ್ಲ
ಅವಳಾಸೆಗೆನ್ನ ಬಲಿ...

ವಾಗುತ್ತ ಬರುತ್ತಿದ್ದ ಕಿರಿದಾದ ಹಾದಿ.

ತಟ್ಟನೆ ಗೈಡ್ ಹೇಳಿದ:

"ಇಲ್ಲಿ ಸ್ವಲ್ಪ ನಿಲ್ಲಿಸಿ."

ಗಾಡಿಯನ್ನು ನಿಲ್ಲಿಸಿದಾಗಲೇ ಇನ್ನೊಂದು ದಾರಿಯನ್ನು ಆತ ಗಮನಿಸಿದ್ದು.

ಗೈಡ್ ಹೊರಕ್ಕಿಳಿದ, "ಸಾರ್, ಇಲ್ಲಿ ಕಾದಿರಿ. ನಾನು ಸ್ವಲ್ಪ ದೂರ ನಡೆಯ ಬೇಕು..... ಮತ್ತೆ ಅಲ್ಲಿ ಏನಾದರೂ ಕೊಡ ಬೇಕಲ್ಲ?"

ಆತ ಕಾರಿನ ಬಾಗಿಲು ತೆರೆದು ಗೈಡ್‌ಗೆ ಎದುರಾಗಿ ನಿಂತ. ಡೋರ್ ಎಳೆದು ಮುಚ್ಚಿದ. ನಿರ್ಜನವಾದ ದಾರಿ; ಗೈಡ್ ತನಗಿಂತ ಬಲಿಷ್ಠ; ಒಂದು ವೇಳೆ ಆಕ್ರಮಿಸಿ ತನ್ನದೆಲ್ಲವನ್ನೂ ದೋಚಬಹುದು ಎಂಬ ವಿಚಾರ ಬಂದದ್ದೇ ತಡ, ಕೋಟಿನ ಜೇಬಿ ನಲ್ಲಿ ಕೈ ತುರುಕಿ ಕತ್ತಿಯ ಹಿಡಿಕೆಯನ್ನು ಬಿಗಿಯಾಗಿ ಹಿಡಿದ. "ಎಷ್ಟು ರೂಪಾಯಿ?"

"ನೂರು."

"ನೀವು ವಾಪಸು ಬರದಿದ್ದರೆ?"

ತಕ್ಷಣ ಗೈಡ್ ಕೋಟನ್ನು ಬಿಚ್ಚಿದ. ವಾಚನ್ನೂ ಬಿಚ್ಚಿದ.

ಆತ ಒಂದು ದ್ವಂದ್ವ ಯುದ್ಧಕ್ಕೆ ಸಿದ್ಧನಾ ದವನಂತೆ ಒಂದು ಹೆಜ್ಜೆ ಹಿಂದಿಟ್ಟು ದೃಢ ವಾಗಿ ನಿಂತ.

ಗೈಡ್ ಕೋಟು ಮತ್ತು ವಾಚನ್ನು ಕಾರಿನ ಹಿಂದಿನ ಸೀಟ್‌ಗೆ ಹಾಕಿ ಹೇಳಿದ:

"ನನ್ನ ಈ ಕೋಟು ಮತ್ತು ವಾಚು ಹಳೆಯವು. ಆದರೂ ಸುಮಾರು ನೂರು ರೂಪಾಯಿ ಮೌಲ್ಯ ಇದೆ. ನಾನು ಅರ್ಧ ಗಂಟೆಯೊಳಗೆ ವಾಪಸು ಬರುತ್ತೇನೆ. ಆದರೆ ಹಾಗೆಂದು ಭರವಸೆಯೇನೂ ಕೊಡಲಾ ಗದು."

ನೂರು ರೂಪಾಯಿ ಕೊಟ್ಟು ಆತ ಅಪ ರಾಧ ಭಾವದಿಂದ ನುಡಿದ:

"ಆ ಕೋಟು ಮತ್ತು ವಾಚನ್ನು ತೆಗೆದು ಕೊಳ್ಳಿ. ಇಂಥ ಚಳಿಯಲ್ಲಿ ಕೋಟು ಹಾಕಿ ಕೊಳ್ಳದೆ ಹೋಗಬೇಡಿ. ಅಲ್ಲದೆ ಇಲ್ಲಿ ನಾನು ಕಾದು ನಿಂತಿರುವ ವೇಳೆಯನ್ನೂ ತಿಳಿಯಬೇ ಕಲ್ಲ?"

ಕಾಯುವಿಕೆ ಅಸಹನೀಯವಾದಾಗ ಆತ ಆಲೋಚಿಸಿದ. ಎಷ್ಟೋ ದೂರ ಗಾಡಿ ಓಡಿಸಿದ ಆಯಾಸ. ಸೀದಾ ಹೋಟೆಲಿಗೆ ಹೋಗಿ ಮುಸುಕು ಹಾಕಿ ಮಲಗಿ, ಮರುದಿನ ಗೈಡ್‌ನ ಬಳಿ ಇದನ್ನೆಲ್ಲ ಹೇಳಿದ್ದರೆ ಸಾಕಿತ್ತು. ಈಗ ಹೇಳಿದ್ದಕ್ಕೆ ಬಂದೇ ಈ ಕಾರಿರುಳಿನಲ್ಲಿ ಹೀಗೆ ಕಾದು ಕುಳ್ಳಿರಬೇಕಾಯ್ತು.

ಅರ್ಧ ಗಂಟೆಯೂ ಕಳೆದಾಗ ಆತ ಹೆಡ್‌ಲೈಟ್ ಹಾಕಿ ನೋಡಿದ. ಎಲ್ಲಿಯೂ ಯಾರೂ ಕಾಣುತ್ತಿಲ್ಲ, ಹಿಂದಿರುಗಿ ಹೋಗಿ ಬಿಡೋಣ. ನೂರು ರೂಪಾಯಿತಾನೆ? ಊರಿನ ಆಫೀಸರ್ಸ್ ಕ್ಲಬ್. ಅಲ್ಲಿ ಎಷ್ಟೋ ವರ್ಷಗಳಿಂದ ಖರ್ಚುಮಾಡುತ್ತಿರುವ ಮೊತ್ತ? ನೂರು ರೂಪಾಯಿ, ಪರವಾಗಿಲ್ಲ. ಮತ್ತೂ ಬಹಳ ಹೊತ್ತು ಕಾದ. ಸಿಟ್ಟೂ ನಿರಾಶೆಯೂ ಮೂಡಿದವು.

ಆತ ಕಾರು ಸ್ಟಾರ್ಟ್ ಮಾಡಿ ಸ್ವಲ್ಪ ದೂರ ಸಾಗಿದ. ಕಾರನ್ನು ತಿರುಗಿಸಲು ಅನುಕೂಲವಿ ರುವ ಒಂದು ಜಾಗವನ್ನು ಕಂಡುಹಿಡಿದು ಕಾರು ತಿರುಗಿಸಿದ. ಬಂದ ದಾರಿಯಲ್ಲೇ ಆಕ್ಸಿಲರೇಟರನ್ನು ಜೋರಾಗಿ ತುಳಿದ. ಹೋಗಬೇಕಾದ ದಾರಿಗಳನ್ನು ಜ್ಞಾಪಿಸಿ ಕೊಂಡ.

ತಟ್ಟನೆ ಬ್ರೇಕ್ ಪೆಡಲ್ಲನ್ನು ಬಲವಾಗಿ ತುಳಿದ.

ಹೆಡ್‌ಲೈಟ್‌ಗಳ ಪ್ರಕಾಶದಲ್ಲಿ ಗೈಡ್ ನಿಂತಿದ್ದ.

ಒಂದು ಕೋಲ್ಮಿಂಚಿನ ಹಾಗೆ ಗೈಡ್‌ನ ಹಿಂದೆ ಮರೆಯಾದ ಕಾಲುಗಳು! ಗಂಧದ ಬಣ್ಣ, ಕಡುಗೆಂಪು ಸ್ಕರ್ಟ್, ಬಿಳಿ ಬಣ್ಣದ ಸ್ವೆಟರ್. ಎಲ್ಲವೂ ಫಕ್ಕನೆ ಗೈಡ್‌ನ ಹಿಂದೆ ಅಡಗಿಕೊಂಡವು.

ಹೆಡ್‌ಲೈಟ್‌ಗಳನ್ನು ನಂದಿಸುವಂತೆ ಗೈಡ್

ಸನ್ನೆ ಮಾಡಿದ. ಆತ ಹಾಗೆಯೇ ಮಾಡಿದ. ಕಾರ್ಗತ್ತಲು. ಕಾರಿನ ಬಾಗಿಲುಗಳು ತೆರೆದು ಮುಚ್ಚಿದವು. ಮುಂದಿನ ಸೀಟಿನಲ್ಲಿ ತನ್ನ ಬಳಿ ಯಾರು? ಗೈಡೇ? ಆತ ಕಾರಿನೊಳಗಿನ ಟಾಪ್‌ಲೈಟ್ ಹಾಕಲು ಕೈ ಚಾಚಿದಾಗ ಗೈಡ್‌ನ ಧ್ವನಿ ಹಿಂದಿನ ಸೀಟ್‌ನಿಂದ ಬಂತು:

"ಸಾರ್, ಸ್ವಲ್ಪ ತಡವಾಯಿತು. ಕ್ಷಮಿಸಿ, ಬಹಳ ಚಳಿ."

ಆತ ಬಾಟಲಿ ಮತ್ತು ಗ್ಲಾಸ್ ತೆಗೆದು ಕೊಟ್ಟ.

ಗ್ಲಾಸಿಗೆ ಸುರಿಯುವ ಮದ್ಯದಲ್ಲಿ ಕಾಡಿನ ಝರಿಯ ಕಲರವ.

ಅತಿ ಸನಿಹದಲ್ಲಿ, ಬೆದರಿದ ಹೆಣ್ಣು ಜಿಂಕೆಯ ದ್ರುತಗತಿಯ ಶ್ವಾಸೋಚ್ಛ್ವಾಸಗಳು!

ಹರ್ಷೋನ್ಮಾದಗಳ ಒಡ್ಡು ಒಡೆದು ಹರಿಯಿತು. ಮನಸ್ಸಿನ ಕಣಿವೆಗಳಲ್ಲಿ ಮೌಂಟನ್ ಗೋಟ್ಸ್ ಓಡಿ ಹತ್ತಿಳಿದವು.

ಕೈ ಚಾಚಿದ ಮೊಣಕಾಲುಗಳನ್ನೊಮ್ಮೆ ನೇವರಿಸಲು.

ಆಗ ಗೈಡ್ ಬಾಟಲಿ ಮತ್ತು ಗ್ಲಾಸನ್ನು ಮರಳಿಕೊಡುತ್ತ ಹೇಳಿದ:

"ಸಾರ್, ಬೇಗ ಹೋಗಬೇಕು. ಇಲ್ಲದಿದ್ದರೆ ಕೊಠಡಿ ಸಿಗಲು ಕಷ್ಟವಾಗುತ್ತೆ."

ಕಾರನ್ನು ಬಾಣದಂತೆ ದೌಡಾಯಿಸುವಾಗ ಅತಿ ಬೇಗ ಬಂದು ಹತ್ತಿರವಾಗಿ ಮಾಯವಾಗುವ ದಾರಿ ದೀಪಗಳು. ಆ ಬೆಳಕಿನಲ್ಲೆ ಹೊಂಚುಹಾಕಿ ನೋಡಿದ. ಮೋಸದ ಬೆಳಕಿನಲ್ಲಿ ಕಾಣಲು ಸಾಧ್ಯವಾದುದು ಅತಿವೇಗವಾಗಿ ಏರಿಳಿಯುತ್ತಿದ್ದ ಎದೆ. ಅದರ ಮೇಲೆ ಹಾರಾಡುತ್ತಿರುವ ತಲೆಗೂದಲಿನ ಎಳೆಗಳು. ಅದನ್ನೊಮ್ಮೆ ನೇವರಿಸಿ ಸರಿಯಾಗಿರಿಸಲೇ? ಎಂಬ ವಿಚಾರ ಬರುತ್ತಿರುವಾಗಲೆ ಹೊಟೇಲಿನ ಗೇಟ್ ಬಂದಿತು.

ಗೈಡ್ ಇಳಿದುಹೋದ. ಹೊಟೇಲಿನ ಪೋರ್ಚ್‌ನಿಂದ ಲಭಿಸುವ ಮಂದ ಪ್ರಕಾಶ.

ಮೊದಲು ಏನು ಹೇಳುವುದು ಎಂದು ಯೋಚಿಸುತ್ತಿರುವಾಗ ಗೈಡ್ ಮರಳಿ ಬಂದು ಹೇಳಿದ:

"ರೂಂ ನಂಬರ್ ನೂರಹನ್ನೆರಡು....."

ಸ್ಟೇರ್‌ಕೇಸಿನ ಮೆಟ್ಟಿಲುಗಳನ್ನೇರುವಾಗ ಅವಳ ಕೈ ಹಿಡಿದ. ಐದು ದಳಗಳಿರುವ ಒಂದು ಹೂವು ಕೈಗೊತ್ತಿತು....

ಬೆಳಗಾಗುವುದಕ್ಕಿಂತ ಮುಂಚಿನ ಒಂದು ಯಾಮದಲ್ಲಿ ಎಚ್ಚೆತ್ತ. ಎಲ್ಲಿ ಮಲಗಿದ್ದೇನೆ? ಎಂಬುದು ನೆನಪಾಗಲಿಲ್ಲ. ಕಣ್ಣುಗಳನ್ನುಜ್ಜಲು ಕೈಯೆತ್ತಲೆತ್ನಿಸುವಾಗ ಎಡಗೈ ಅಲುಗಲೇ ಇಲ್ಲ. ಗಾಬರಿಯಿಂದ ಮರಗಟ್ಟಿಹೋಗಿದೆಯೆಂದು ಭಾವಿಸಿ ಎಡಗೈಯನ್ನು ಬಲಗೈಯಿಂದ ಸವರಿದ.

ತನ್ನ ಕೈಗೆ ಇಷ್ಟೊಂದು ಮೃದುತ್ವವಿದೆಯೇ? ಎಂದಾತ ಆಶ್ಚರ್ಯದಿಂದ ಪುನಃ ಸವರುವಾಗ..... ತಾವರೆ ಮೊಗ್ಗುಗಳಲ್ಲಿ ಒತ್ತಿ ಮೇಲೆಳುತ್ತ ಸಂಚರಿಸುತ್ತಿರುವ ತನ್ನ ಕೈ! ಏಕೋ ತಿಳಿಯದು ಅಲ್ಲಿ ತುಟಿಗಳನ್ನು ಒತ್ತಿದ. ತುಟಿಗಳಿಗೆ ಏನೋ ಸಿಲುಕಿದಾಗ ಅಲ್ಲಿ ತುಟಿಗಳು ನೆಲೆನಿಂತವು.

ಬಳಿಕ ತಕ್ಷಣ ಮನಸ್ಸು ಎಚ್ಚರಗೊಂಡಿತು. ಸಿಕ್ಕಿದ್ದನ್ನೆಲ್ಲ ಬಾಚಿ ತಬ್ಬಿದ ಬಳಿಕ ಪುನಃ ನಿದ್ರಿಸಿದ.

ಕೆನ್ನೆಯ ಮೇಲೆ ಮೃದುಸ್ಪರ್ಶವಾಯಿತು. ಎಚ್ಚರಗೊಂಡ. ಕಣ್ಣುಗಳನ್ನು ತೆರೆದು ಮುಚ್ಚಿ ಪುನಃ ನೋಡಿದ.

ಎದುರಿನಲ್ಲಿ ಹಬೆಯಾಡುವ ಕಾಫಿ. ಕಪ್ ಹಿಡಿದಿದ್ದ ನವಿರಾದ ಬೆರಳುಗಳು. ಕಣ್ಣುಗಳು ಮೇಲಕ್ಕೆ ಸಂಚರಿಸಿದವು. ಸಮೃದ್ಧವಾದ ತಲೆಗೂದಲು ಹೆಗಲುಗಳನ್ನು ಕೆನ್ನೆಗಳನ್ನೂ ಮರೆಮಾಡುತ್ತಿದೆ. ಕೂದಲೆಳೆಗಳ ಪಂಜರ. ಪಂಜರದೊಳಗೆ ಕಣ್ಣುಗಳು. ಅಂಕೆಯಿಲ್ಲದ ಪಕ್ಷಿಗಳು.

ತುಟಿಗಳ ಮಧ್ಯೆ ಮಲ್ಲಿಗೆ ಮುಗುಳುಗಳು!

ಅದನ್ನೇ ನೋಡುತ್ತ ಮಲಗಿದ್ದಾಗ,

"ಯುವರ್ ಹೈನೆಸ್, ಗುಡ್ ಮಾರ್ನಿಂಗ್," ಎಂದು ಉಲಿಯಿತು 'ಪಕ್ಷಿ'

ಕಾಫಿ ಕುಡಿದು ಕಪ್ಪನ್ನು ಹಿಂತಿರುಗಿಸಿದಾಗ,

"ಯಾಕೆ ನನಗೆ ಗುಡ್ ಮಾರ್ನಿಂಗ್ ಹೇಳುವುದಿಲ್ಲ?" ಅಂದಿತು.

"ಸಣ್ಣ ಮಕ್ಕಳು ಹಾಗೆಲ್ಲ ಕೇಳುತ್ತಾರೆ. ಯಾಕೆ ನಂಗೆ ಮಿಠಾಯಿ ಕೊಡೋದಿಲ್ಲ ಮುಂತಾಗಿ"

"ಉಂ, ನಾನು ಸಣ್ಣ ಮಗುವೇನೂ ಅಲ್ಲ."

"ಅಲ್ಲವಾ? ಹಾಗಾದರೆ, ಮೇಡಂ, ಗುಡ್‌ಮಾರ್ನಿಂಗ್, ಸಾಕೇ?"

"ಥ್ಯಾಂಕ್ಯೂ"

ಆತ ಕಣ್ಣುಚ್ಚಿ ಮಲಗಿ ಅವಳ ಹೆಸರನ್ನು ಜ್ಞಾಪಿಸಿಕೊಳ್ಳಲೆತ್ನಿಸಿದ. ನೆನಪಾಗಲಿಲ್ಲ. ಹಿಂದಿನ ರಾತ್ರಿ ಬಹಳಷ್ಟು ಕುಡಿದಿದ್ದರಿಂದ ಇರಬೇಕು. ನಂತರ ಚಕ್ಕನೆ ನೆನಪಾಯಿತು. ಇಸಬೆಲ್ಲಾ.

"ನನ್ನನ್ನು ಇಸಬೆಲ್ ಎಂದು ಕರೆಯಬಹುದು. ಅಥವಾ ಬೆಲ್ ಎಂದರೂ ಸಾಕು."

"ಬೆಲ್? ಬೆಲ್ ಎಂದು ಬೇಡ. ಬೆಲ್. ಗಂಟೆ ಮೊಳಗು. Death Knoll ಅದು ಸಾವನ್ನು ನೆನಪಿಗೆ ತರುತ್ತದೆ. ಬೇಡ. ನಾನು ಬೇಲ ಎಂದು ಕೂಗಲೆ?"

"ಏನು ಬೇಕಾದರೂ."

ಆತ ಜೋರಾಗಿ ನಕ್ಕ. ಕೂದಲ ರಾಶಿಯನ್ನು ಅವಳ ಮುಖದ ಮೇಲೆ ಹರವಿ ಹಾಕಿದ.

"ಈಗ ಮೋಹಿನಿಯ ಹಾಗಿರುವೆ."

"ಅಲ್ಲಿ, ಊರಿನಲ್ಲಿ ಮೋಹಿನಿ ಇದೆಯೆ?"

"ಇದೆಯಾಂತೀಯ? ಬೇಕಾದಷ್ಟು. ಹಾಲೆ ಹೂ ಬಿಡುವಾಗ: ಪ್ರತಿ ಶುಕ್ರವಾರ ರಾತ್ರಿ ವೇಳೆಗಳಲ್ಲಿ."

"ನೋಡಿದ್ದೀರಾ? ನೋಡಲು ಚೆಲುವಾಗಿದೆಯೆ?"

"ಚೆಲುವಾಗಿದೆಯೇ ಅಂದೆಯಾ? ಎಂಥಾ ಸೌಂದರ್ಯ!"

"ಓ! ಸುಮ್ಮನೆ ಹೇಳುತ್ತಿರುವಿರಿ?"

"ಅಲ್ಲ, ನಿಜವಾಗಿಯೂ."

"ಮೋಹಿನಿಗಳು ಕಾಟ ಕೊಡುವುವೇ?"

"ಗೊತ್ತಿಲ್ಲ."

"ನಾನು ಕಾಟ ಕೊಡುವುದಿಲ್ಲ."

"ಅದೂ ಗೊತ್ತಿಲ್ಲ. ಹೇಗೆ ನಂಬಲಿ?"

"ನಂಬಬಹುದು. ಯಾಕೆ ಅಂತೀರಾ? ನನಗೆ ನೀವು ಇಷ್ಟವಾದಿರಿ."

"ಅದು ಹೇಗೆ?"

"ಹಾಗೆಯೇ, ನಾನು ಹೇಳಲೇ? ಕಾರು ಬಿಡುವುದನ್ನು ಕಂಡಾಗ ಭಯವಾಯಿತು. ಒಂದಿಷ್ಟೂ ದಯೆಯಿಲ್ಲದ ವ್ಯಕ್ತಿ ಎಂದು ಭಾವಿಸಿದೆ."

"ಮತ್ತೆ ಯಾವಾಗ ಆ ಅಭಿಪ್ರಾಯ ಬದಲಾಯಿತು?"

"ನಿನ್ನೆ ರಾತ್ರಿ.... You were not a beast in the bed.

ಆತ ಅವಳನ್ನು ನೋಡಿದ. ದೇಹವನ್ನು ಬ್ಲಾಂಕೆಟ್‌ನಿಂದ ಮರೆಸಿದ್ದಳು. ಆತನ ಕಣ್ಣುಗಳು ಪುನಃ ಅರಸಿದವು. ಅವಳು ಧರಿಸಿದ್ದ ವಸ್ತ್ರಗಳನ್ನು ಕುರ್ಚಿಯಲ್ಲಿ ಪೇರಿಸಿಡಲಾಗಿದೆ! ಆತ ಮೆಲ್ಲಗೆ ನುಡಿದ.

"Okay, now I will behave like a beast."

ತಕ್ಷಣ ಅವಳನ್ನು ಬಿಗಿದು ಆಲಂಗಿಸಿದ. ಪಕ್ಕದಲ್ಲಿ ಮಲಗಿಸಿದ. ಸ್ಥಾನಪಲ್ಲಟಗೊಂಡ ಬ್ಲಾಂಕೆಟ್. ಅತ್ತ ಆಸೆಯಿಂದ ನೋಡಿದ.

ಆಗ ಅವಳು ಆತನ ಕಣ್ಣುಗಳನ್ನು ಅಂಗೈಯಿಂದ ಮುಚ್ಚಿ ಹೇಳಿದಳು.

"ಸಾಕು, ಇನ್ನು ಸೈಟ್ ಸೀಯಿಂಗ್‌ಗೆ ಹೋಗೋಣ."

"ಬೇಡ, ಇದನ್ನೆಲ್ಲ ಕಂಡರೆ ಸಾಕು."

"ಅದೆಲ್ಲ ನಿನ್ನೆ ಮುಗಿಯಿತಲ್ಲ?"

"ನೆನಪಿಲ್ಲ, ನೆನಪನ್ನು ನವೀಕರಿಸಬೇಕು."

"ನಿನ್ನೆ ಬಹಳ ಹೆಚ್ಚೇ ಸೇವಿಸಿದಿರಿ ಅಲ್ಲವೇ?"

"ಸರಿಯಾಗಿ ನೆನಪಿಲ್ಲ."

"ಕುಡಿಯುವುದು ನನಗಿಷ್ಟವಿಲ್ಲ."

"ಬೇಡ, ನೀನು ಕುಡಿಯಬಾರದು."

"ಹಾಗಲ್ಲ, ಯಾರು ಕುಡಿಯುತ್ತಿದ್ದರೂ ನಾನು ನನ್ನ ತಂದೆಯನ್ನು ಜ್ಞಾಪಿಸಿಕೊಳ್ಳುತ್ತೇನೆ. ಪಾಪ, ಎಷ್ಟು ಒಳ್ಳೆಯ ಡ್ಯಾಡಿ! ಯಾವಾಗಲಾದರೂ ಸ್ವಲ್ಪ ಮಾತ್ರ ಕುಡಿಯುತ್ತಿದ್ದರು. ಆದರೂ, ಒಂದು ಕಾರ್ ಆ್ಯಕ್ಸಿಡೆಂಟ್‌ನಲ್ಲಿ.... ಆಗ ನಾನು ಸಣ್ಣವಳಿದ್ದೆ."

"ನೀನು ಈಗಲೂ ಸಣ್ಣವಳೇ ಅಲ್ಲವೆ?" ಆತ ಮೈದಡವುತ್ತಲಿದ್ದ. ಇದ್ದಕ್ಕಿದ್ದಂತೆ ಅವಳ ದೇಹ ಸೆಟೆದುಕೊಂಡಿತು.

"ನಾನು ನನ್ನ ಒಂದು ದುಃಖವನ್ನು ಹೇಳಿದೆ. ನೀವು ಏನು ಬೇಕಾದರೂ ತಮಾಷೆ ಹೇಳಿ. ಕೇಳುತ್ತೇನೆ."

"ಬೇಲಾ, ಪ್ಲೀಜ್ ಎಲ್ಲವನ್ನೂ ಹೇಳು."

"ನಿನ್ನೆ ಜೊತೆಯಲ್ಲಿ ಬರಲು ನನಗೆ ಹೆದರಿಕೆಯಾಗಿತ್ತು. ಹರಿದು ಚಿಂದಿ ಮಾಡುವಿರೆಂದು ಹೆದರಿದ್ದೆ. But you were so affectionate, and then, I had a feeling of protection, something I lost in my life. May be because of your age. ನಾನು ಅಂಕಲ್ ಎಂದು ಕರೆಯಲೇ?"

"ಅಂಕಲ್ ಅಂತಲೋ ಅಜ್ಜಾ ಅಂತಲೋ ಕರೆ."

"ಸಿಟ್ಟಾಗಬೇಡಿ, ಇಷ್ಟು ಸಲಿಗೆಯಿಂದ ಬೇರೆ ಯಾರಲ್ಲೂ ಹೇಳಲು ನನ್ನಿಂದ ಸಾಧ್ಯವಾಗಿಲ್ಲ."

ತಕ್ಷಣ ಆತನಿಗೆ ಅಸೂಯೆ ಉಂಟಾಯಿತು.

"ಬೇರೆ ಯಾರಲ್ಲೂ?"

ಹೊದ್ದಿದ್ದ ಬ್ಲಾಂಕೆಟನ್ನು ಕಿತ್ತೆಸೆದು ಅವಳು ಜಿಗಿದೆದ್ದಳು. ಎದುರಿಗೆ ನಿಂತು ಕೋಪದಿಂದ ಕಂಪಿಸಿದಳು- ತಾನು ಯಾವ ಪರಿಸ್ಥಿತಿಯಲ್ಲಿದ್ದೇನೆ ಎನ್ನುವುದರ ಪರಿವೆಯಿಲ್ಲದೆ. ನಂತರ ಅವಿಶ್ವಸನೀಯವೆನಿಸುವಷ್ಟು ವೇಗವಾಗಿ ವಸ್ತ್ರ ಧರಿಸಿ ಬಾಗಿಲಿಗೆ ಓಡಿದಳು.

"ಬೇಲಾ, ನಿಲ್ಲು."

"ನಾನು ಯಾರ ಬೇಲಾಳೂ ಅಲ್ಲ.



ನನಗೋಸ್ಕರ ಖರ್ಚು ಮಾಡಿದ ಹಣವನ್ನು ವಾಪಸು ಕಳಿಸುತ್ತೇನೆ. ಗುಡ್‌ಬೈ."

ಬಾಗಿಲನ್ನು ಧಡಕ್ಕೆಂದು ಮುಚ್ಚಿದಳು.

ಏನು ಮಾಡುವುದೆಂದು ತಿಳಿಯದೆ ಆತ ಕಣ್ಮುಚ್ಚಿ ಮಲಗಿದ....

ಹಸಿವೆಯು ಎಚ್ಚರಿಸಿತು. ವಾಚನ್ನು ನೋಡಿದ. ಬೆಳಗಿನ ಉಪಾಹಾರದ ಸಮಯ ಯಾವಾಗಲೋ ಕಳೆದಿತ್ತು. ಸ್ನಾನ ಮಾಡಿ ಬಟ್ಟೆ ಬದಲಾಯಿಸಿದಾಗ ಹಿತವೆನಿಸಿತು. ಕೊರೆದು ತಿನ್ನುವ ಹಸಿವು. ಫೋನ್‌ನಲ್ಲಿ ಊಟಕ್ಕೆ ಆರ್ಡರ್ ಕೊಟ್ಟ. ಬಾಟಲಿ ತೆಗೆದು ಸಾಕಷ್ಟು ಹೆಚ್ಚೇ ಸುರಿದುಕೊಂಡ. ಊಟಕ್ಕಾಗಿ ಕಾದು ಕುಳಿತ.

ಬಾಗಿಲನ್ನು ತಟ್ಟುವ ಶಬ್ದ ಕೇಳಿಸಿದಾಗ 'ಲಂಚ್' ಸೇವಿಸುವ ಆತುರ ಹೆಚ್ಚಿತು. ತಿರುಗಿ ನೋಡಿದ.

"ಗೈಡ್ ?"

ಆತನಿಗೆ ಸಿಟ್ಟು ಬಂತು. ಸಿಟ್ಟಿನಿಂದ ಕೇಳಿದ:

"ಎಲ್ಲಿ ಇಸಬೆಲ್ಲಾ?"

"ಸಾರ್, ಅವಳು ಬಡಪಾಯಿ. ಆ ಹುಡುಗಿಯನ್ನು ನೋಯಿಸಬೇಡಿ."

"ನಿಮ್ಮಿಬ್ಬರಿಗೂ ಇರೋ ಸಂಬಂಧ ವೇನು?"

ಅದಕ್ಕೆ ಉತ್ತರವನ್ನೂ ಹೇಳದೆ ಗೈಡ್ ನಿಧಾನವಾಗಿ ನಡೆದು, ಕಿಟಕಿಯ ಪರದೆ ಯನ್ನು ಸರಿಸಿ ಹೊರಕ್ಕೆ ನೋಡುತ್ತ ಹೇಳಿದ:

"ಸಾರ್, ಒಳ್ಳೇ ವೇಳೆ. ಎಷ್ಟು ಸುಂದರ ಸೂರ್ಯಪ್ರಕಾಶ! ಹೊರಗೆ ಹೋಗಿ ಎಲ್ಲ ವನ್ನೂ ಸುತ್ತಾಡಿ ನೋಡಲು ತಕ್ಕುದಾದ ಒಳ್ಳೆ ದಿವಸ."

"ಉಪದೇಶ ಬೇಕಿಲ್ಲ, ನನಗೆ ಗೊತ್ತಿದೆ ಎಲ್ಲಿ, ಹೇಗೆ ಹೋಗಬೇಕು ಎನ್ನುವುದು."

"ಸಾರ್, ಕ್ಷಮಿಸಿ."

ಗೈಡ್ ನಿಧಾನವಾಗಿ ನಡೆದು ಬಾಗಿಲನ್ನು ಶಬ್ದಮಾಡದೆ ಮುಚ್ಚಿ ಹೊರಗೆ ಹೋದ.

ಕುಪಿತನಾಗಿ ಆತ ಹೇಳಿದ:

A stupid guide, an idiotic girl and what a notorious room service! ಇಷ್ಟು ಹೊತ್ತಾದರೂ ಊಟ ಬರಲಿಲ್ಲ."

ಆಗ ಬಾಗಿಲು ತೆರೆಯುವ ಸದ್ದಾಯಿತು.

ಸದ್ಯ ಊಟವಾದರೂ ಬಂತಲ್ಲ? ಆತ ತಿರುಗಿ ನೋಡಿದ.

ಬೇಲಾ!

ಕಡುನೀಲಿ ಬಣ್ಣದ ಸೀರೆಯನ್ನು ಹೇಗೋ ಎಳೆದು ಸುಕ್ಕುಸುಕ್ಕಾಗಿರುವಂತೆ ಉಟ್ಟಿದ್ದಾಳೆ! ಬ್ಲೌಸ್ ಎಂದು ಉದಾರವಾಗಿ ಹೇಳಬೇಕಿದ್ದಂಥ ಒಂದು ಉಡುಗೆ, ಶರೀರಕ್ಕೆ ಏನೊಂದೂ ಬಂಧವಿಲ್ಲದಂತಿತ್ತು. ಬಲಗೈಯಲ್ಲಿ ಟಿಫಿನ್ ಕ್ಯಾರಿಯರ್.

"Your highness, I am at your service!"

"ಬಹಳ ವಂದನೆಗಳು."

"ಏನು ಹೀಗೆ ನೋಡುತ್ತಿದ್ದೀರಿ?"

"ಹೇಗೆ ನೋಡದೆ ಇರುವುದು? ಭವ್ಯ ವಾಗಿದೆ. Marvellous ಹೀಗೇನು ಸೀರೆಯುಡುವುದು? ನೀನು ಮಾನವಜಾತಿಗೆ ಸೇರಿದ ವಳೇ ತಾನೇ? ಮಂಗ ಅಲ್ಲವಲ್ಲ? ಹಾ! ಇಂಥಾ ಒಂದು ಬ್ಲೌಸನ್ನು ಜೀನಿಯಸ್‌ಗಳಿಂದಷ್ಟೇ ಹೊಲಿಯಲು ಸಾಧ್ಯ."

"ಬ್ಲೌಸ್ ಹೊಲಿದಿದ್ದು ಜೀನಿಯಸ್ಸೇನೂ ಅಲ್ಲ, ಇಷ್ಟಕ್ಕೂ ಈ ಬ್ಲೌಸ್ ಸಾಲ ಪಡೆದಿದ್ದು. ಮತ್ತೆ ನನ್ನ ಸ್ನೇಹಿತೆ ಹೇಳಿದಳು, ಸೀರೆ ಉಟ್ಟರೇನೇ ನನ್ನನ್ನು ಇಷ್ಟಪಡ್ತೀರಿ ಅಂತ."

"What a ridiculous dress to cover your precious body!"

"ಅಯ್ಯೋ, ಈ ಸೀರೆ ಮತ್ತು ಬ್ಲೌಸ್ ಸಾಲ ಪಡೆಯಲು ಎಷ್ಟೊಂದು ಕಷ್ಟಪಟ್ಟೆ! ಉಡೋದಕ್ಕೆ ಅದಕ್ಕಿಂತಲೂ ಕಷ್ಟಪಟ್ಟೆ. ಆದರೂ?"

ಅವಳು ತಕ್ಷಣ ಅಳುತ್ತಾಳೆಂದು ಅನ್ನಿಸಿದಾಗ, ಆತ ಜೋರಾಗಿ ನಕ್ಕು ಹೇಳಿದ.

"ಜೋರು ಹಸಿವಾಗ್ತಿದೆ. ಬಡಿಸು."

ಅವಳು ಸಂತೋಷದಿಂದ ಹೇಳಿದಳು:

"ಕ್ಷಮಿಸಿ, ನೀವು ಆರ್ಡರ್ ಮಾಡಿದ ಊಟವನ್ನು ನಾನು ಕ್ಯಾನ್ಸಲ್ ಮಾಡಿದೆ."

ಟಿಫಿನ್ ಕ್ಯಾರಿಯರ್ ತೆರೆದು ಎದುರಿಗಿಟ್ಟಳು.

"ಎಲ್ಲ ನಾನೇ ತಯಾರಿಸಿದ್ದು."

"ಬೇಗ ಕೊಡು."

ಎಗ್‌ಫ್ರೈಡ್ ರೈಸ್. ರೋಸ್ಟೆಡ್ ಚಿಕನ್. ಹುರಿದ ಈರುಳ್ಳಿ. ಆಲೂಗಡ್ಡೆ. ಬೇಯಿಸಿದ ಕ್ಯಾಬೇಜ್ ಮತ್ತು ಕಾಲಿಫ್ಲವರ್. ಸೋಯಾ ಬೀನ್ ಸಾಸ್ ಸುರಿದುಕೊಂಡ. ಎಲ್ಲವನ್ನೂ ಆತುರಾತುರವಾಗಿ ತಿನ್ನುತ್ತಿದ್ದಾಗ, ಅವಳು ಟಿಫಿನ್ ಕ್ಯಾರಿಯರ್‌ನ ಕೆಳಗಿನ ಪಾತ್ರೆಯನ್ನು ಮುಂದಿರಿಸಿದಳು. ಗಾಢ ಹಳದಿ ಬಣ್ಣದ ಕಲಸಿದ ಅನ್ನ!

"ಇದೆಂಥ ವಿಷ?"

"ಅಯ್ಯೋ, ವಿಷವಲ್ಲ, ಅನ್ನ-ಸಾಂಬಾರು. ಅದು ಬಡಿಸಿದರೇ...."

"ಹೌದು, ಹೌದು. ಸಾಕು ಹೇಳಿದ್ದು. ಅದನ್ನೂ ತಿನ್ನಿಸಬೇಕು ಎಂದು ಸ್ನೇಹಿತೆ ಹೇಳಿದಳು ಅಲ್ವಾ?"

"ಅಯ್ಯೋ, ನಾನು ಎಷ್ಟು ಕಷ್ಟಪಟ್ಟು ಇದನ್ನು ತಯಾರಿಸಿದೆ ಅಂತೀರಿ...."

"ದೇವರೇ, ನೀನು ತಯಾರಿಸಿದ ಅನ್ನ ಮತ್ತು ಸಾಂಬಾರ್? ನಾನು ಸತ್ತು ನರಕಕ್ಕೆ ಹೋಗುವಾಗ ಕೊಡು ಸಾಕು."

"ಸಾಯುವುದಿಲ್ಲ; ನರಕಕ್ಕೆ ಹೋಗುವುದೂ ಇಲ್ಲ."

"ಏನು ಗ್ಯಾರಂಟಿ?"

"ಒಳ್ಳೆ ಮನುಷ್ಯರಲ್ಲವೇ?"

"ಮತ್ತೇಕೆ ಈ ಒಳ್ಳೆ ಮನುಷ್ಯನಿಂದ ದೂರಕ್ಕೆ ಓಡಿಹೋದೆ?"

"ವಾಪಸು ಬರಲು."

"ಓಹ್! ಅದನ್ನು ನಾನು ನಿರೀಕ್ಷಿಸಿರಲಿಲ್ಲ, ಮರಳಿ ಬರುವುದಿಲ್ಲ ಎಂದು ಭಾವಿಸಿದೆ. ನಾನು ರಿಸೆಪ್ಷನಿಸ್ಟ್‌ಗೆ ಹೇಳಿದೆ ಒಬ್ಬಳು ಗೈಡ್ ಬೇಕು ಅಂತ. ಬಹಳ ಸುಂದರಿಯಾದ ಒಬ್ಬಳು ಹುಡುಗಿಯನ್ನು ಪರಿಚಯ ಮಾಡಿಕೊಟ್ಟಳು. ಇವತ್ತು ನಾವು ಜೊತೆಯಾಗಿ ಸೈಟ್‌ಸೀಯಿಂಗ್‌ಗೆ ಹೋಗಲಿದ್ದೇವೆ."

ಅವಳು ಮುಖ ಊದಿಸಿಕೊಂಡು ಕುಳಿತಳು.

ಆತ ಊಟ ಮುಗಿಸಿ, ಒಂದು ಸಿಗರೇಟನ್ನು ಸೇದಿ ಕಿಟಕಿಯಿಂದ ಹೊರಗೆ ನೋಡುತ್ತಾ ನಿಂತ ತಿರುಗಿ ನೋಡದೆಯೆ.

ತಕ್ಷಣ ಅವಳು ಸಿಡಿದೆದ್ದಳು.

"No, you cannot do it"

ಅವಳು ಹಿಂದೆ ಬಂದು ಒತ್ತಿಕೊಂಡು ನಿಂತಳು. ಆತನ ಕೊರಳನ್ನು ಬಳಸಿಹಿಡಿದು ಕೇಳಿದಳು.

"ಸುಳ್ಳು ಹೇಳುತ್ತಿರುವಿರಿ ಅಲ್ಲವೇ?"

"ಅಲ್ಲ, ಕನಸು ಕಂಡೆ."

ಆಗ ಮೆಲ್ಲಗೆ ಅವಳು ಹಾಡಿದಳು.

" I have a dream, a song to sing..

If you see the wonder of a fairy tale,

You can take the future, even if you fail,

I belive in angles... When I know the time is right for me,

I will cross the stream.... I have a Dream..."

ಒಂದು ವ್ಯೂಪಾಯಿಂಟ್‌ನಲ್ಲಿ ಕಾರನ್ನು ನಿಲ್ಲಿಸಲು ಹೇಳಿದಳು. ಆತ ಕೆಳಕ್ಕೆ ನೋಡಿದ. ಅತ್ಯಗಾಧವಾದ ಕೊರಕಲುಗಳು. ಎಲ್ಲಿ ನೋಡಿದರೂ ಹಲವು ಜಾತಿಯ ಬೃಹತ್ ಮರಗಳು. ಎಲೆಗಳೆಲ್ಲ ಹಸಿರು ಬಣ್ಣದವೇ ಆದರೂ ಹಲವು ತರಹದ ಹಸಿರು ಬಣ್ಣ

ಗಳು. ಎಷ್ಟೋ ಅಡಿಗಳಷ್ಟು ಕೆಳಗೆ ಮರಗಳ ಕೊಂಬೆಗಳ ನಡುವೆ ಹರಿಯುವ ತೊರೆ, ಬೆಳ್ಳಿ ರೇಖೆಯಂತೆ.

ಅವಳು ವಿವರಿಸತೊಡಗಿದಳು:

"ಇನ್ನು ಸೀದಾ ಮುಂದೆ ನೋಡಿ. ನೆಟ್ಟಗೆ ನಿಂತಿರುವ ಭಾರೀ ಬೆಟ್ಟಗಳು. ಆ ಬೆಟ್ಟಗ ಳಿಂದ ಕೆಳಕ್ಕೆ ಬೆಳ್ಳಗೆ ನೀರು ಹರಿದುಬರುವು ದನ್ನು ಕಾಣಬಹುದು. ಅದು ಯಾರೋ ಸುಣ್ಣದಿಂದ ಎಳೆದ ರೇಖೆಯೆಂಬ ಭ್ರಮೆ ಹುಟ್ಟಿಸುತ್ತದೆ. ಅದನ್ನು ತಿಳಿಯುವಷ್ಟು ಬುದ್ಧಿ ಯಿಲ್ಲದವರಿಗೆ ಬೈನಾಕ್ಯುಲರ್ಸ್‌ನ ಸಹಾಯ ಬೇಕಾಗಬಹುದು."

"ಹೌದೇ ಗೈಡ್, ಬುದ್ಧಿ ಹೇಳಿದ್ದಕ್ಕೆ ಧನ್ಯ ವಾದಗಳು."

ಆತ ಕಾರಿನ ಬಳಿ ಹೋದ. ಕ್ಯಾಮರಾ ತೆಗೆದುಕೊಂಡು ಬಂದು ಅವಳಿಗೆದುರಾಗಿ ಫೋಕಸ್ ಮಾಡಿದ.

"ಇಷ್ಟು ಸಮರ್ಥಳಾದ ಗೈಡ್‌ನ ಒಂದು ಫೋಟೋ ತೆಗೆಯುತ್ತೇನೆ."

"ಬೇಡ."

ಅವಳು ನಾಚಿ ಮುಖ ಮುಚ್ಚಿಕೊಂ ಡಳು.

"ಹಾಗಾದರೆ ಬೆಟ್ಟದ ಸಾಲಿನ ಫೋಟೋ?"

ಆತ ಫೋಕಸಿಂಗ್ ಬದಲಾಯಿಸದೆ ಬೆಟ್ಟದ ಸಾಲುಗಳ ಕಡೆಗೆ ತಿರುಗಿದ. ತಕ್ಷಣ ಬೇಲಳ ಕಡೆಗೆ ತಿರುಗಿ ಕ್ಲಿಕ್ ಮಾಡಿದ.

ಅವಳು ನಾಚಿ ಮುಖ ಮುಚ್ಚಿಕೊಂ ಡಳು.

"ಬೇಲಾ, ನೀನು ಒಂದು ನಿಮಿಷ ತಡಮಾಡಿದೆ."

ಬೇಲಾ ಸಿಟ್ಟು, ನಾಚಿಕೆಗಳಿಂದ ಮುಖ ಕೆಂಪಾಗಿ ಹೇಳಿದಳು:

"ನನ್ನ ಫೋಟೋ ತೆಗೆಯಬಾರದು."

ಆಗ ಆತ ಇನ್ನೊಮ್ಮೆ ಕ್ಯಾಮೆರಾ ಕ್ಲಿಕ್ ಮಾಡಿದ.

"ಈಗ ತೆಗೆದ ಫೋಟೋನೆ ಬಹಳ ಚೆನ್ನಾಗಿರೋದು."

ಆಕೆ ಹುಲಿಯಂತೆ ಹಾರಿ ಕ್ಯಾಮೆರಾ ಕಿತ್ತುಕೊಳ್ಳಲು ಯತ್ನಿಸಿದಳು. ಆತ ಕ್ಯಾಮೆರಾ ವನ್ನು ಹಿಂದಕ್ಕೆಳೆದು ಹಿಡಿದುಕೊಂಡ. ಅಸಾಧ್ಯ ಕೋಪದಿಂದ ಅವಳು ಹಲ್ಲುಕಡಿ ದಳು.

"you are a devil"

"It is a compliment, Bela"

"Go to hell."

ಅವಳು ಓಡಿ ಹೋಗಿ ಕಾರಿನೊಳಗೆ ಕುಳಿತು ತಲೆತಗ್ಗಿಸಿದಳು. ಬಳಿಕ ಎಡೆಬಿಡದೆ ಹಾರ್ನ್ ಮಾಡಿದಳು. ಆತ ಜೋರಾಗಿ ನಕ್ಕ. ಅವಳು ಡ್ರೈವಿಂಗ್ ಸೀಟ್‌ನಲ್ಲಿ ಕುಳಿತು ಕಾರನ್ನು ಸ್ಟಾರ್ಟ್ ಮಾಡಿದಳು.

"ಬರ್ತೀರಾ? ಇಲ್ಲಾಂದ್ರೆ ಬೇಡ, Here I go."

ಕಾರು ಮೆಲ್ಲನೆ ಚಲಿಸಿತು.

"Oh that is a real threat, no doubt. ನಾನು ಬರ್ತೇನೆ."

ಅವಳು ಸರಿದು ಕುಳಿತಳು. ಆತ ಕ್ಯಾಮೆ ರಾವನ್ನು ಅವಳ ಕೈಗೆ ನಿಲುಕದಷ್ಟು ದೂರದಲ್ಲಿ ಇರಿಸಿದ.

"ಹಾ! ಎಷ್ಟೊಂದು ಸಾಹಸ? ಅದೂ ಓರ್ವ ಬಡಪಾಯಿ ಹೆಣ್ಣಿನೊಂದಿಗೆ!"

"ಅಷ್ಟು ಬಡಪಾಯಿ ಎಂದೇನೂ ಅನ್ನಿ ಸುತ್ತಿಲ್ಲ."

"ಆ ಗುಡ್ಡದ ಮೇಲೆ ಒಂದು ದೊಡ್ಡ ಟೆಲಿಸ್ಕೋಪ್ ಇದೆ. ನೋಡೋಣ."

ಟಿಕೆಟ್ ಕೊಳ್ಳಲು ಆತ ಪರ್ಸ್ ತೆಗೆದಾಗ, ಅವಳು ಎರಡೂ ಕೈಗಳನ್ನು ಸೇರಿಸಿ ಹಿಡಿದು ತಡೆದಳು.

"ನಾನು ತೆಗೆಸುತ್ತೇನೆ. ಒಪ್ಪಿಗೆ ಕೊಡಿ."

"ಓರ್ವ ಗೈಡ್ ನನಗಾಗಿ ಏಕೆ ಹಣ ಖರ್ಚು ಮಾಡಬೇಕು?"

"ಈ ಗೈಡನ್ನು ನೆನಪಿಡಲು, ಮರಳಿ ಮನೆ ತಲುಪಿದಾಗ ನನ್ನನ್ನು ಮರೆಯುವಿರಲ್ಲ? ಆಗ ಈ ನೆನಪು ಬರುವುದು. ನೆನಪು ಒಂದು ಟೆಲಿಸ್ಕೋಪಾಗುವುದು. ಅದರೊಳಗಿಂದ ನನ್ನನ್ನು ಕಾಣುವಿರಿ."

"ನಾನೇಕೆ ಓರ್ವ ಗೈಡನ್ನು ನೆನಪಿಡ ಬೇಕು?"

"ಯಾರು ಗೈಡ್ ಎಂಬುದನ್ನು ಈಗ ನಿಶ್ಚಯಿಸಲಾಗುವುದಿಲ್ಲ."

"You are a riddle."

"Yes. As you said, it is a compliment."

ಅವಳು ಟಿಕೆಟ್ ಕೊಂಡುಕೊಂಡಳು. ಆತ ಟೆಲಿಸ್ಕೋಪ್‌ನೊಳಗಿಂದ ನೋಡಿದ.

ದೂರದಲ್ಲಿ ಒಂದು ಗ್ರಾಮ. ಅಲ್ಲಿ ಕ್ರೈಸ್ತ ದೇವಾಲಯ. ದೇವಾಲಯದ ಮುಂದೆ ಸಾಕಷ್ಟು ಜನರು.

"ಬೇಲಾ , ನೋಡು, ಮದುವೆಯೇ? ಆದರೆ, ಇಂದು ಭಾನುವಾರವಲ್ಲವಲ್ಲ?"

"ನೋಡುತ್ತೇನೆ."

ಅವಳು ಬಹಳ ಹೊತ್ತು ನೋಡುತ್ತಾ ನಿಂತಳು ಏನನ್ನೂ ಹೇಳದೆ. ಆಗ ಆತ ಹೇಳಿದ:

"ಇನ್ನೊಮ್ಮೆ ಇಲ್ಲಿಗೆ ಬಂದಾಗ ನಾನು ಇದರ ಮೂಲಕ ನೋಡುತ್ತೇನೆ. ಅಲ್ಲಿನ ಜನಜಂಗುಳಿಯಲ್ಲಿ ನಿನ್ನನ್ನು ಪತ್ತೆಹಚ್ಚುತ್ತೇನೆ. ಎಷ್ಟು ಮಜಾ!"

ಆಗಲೂ ಬೇಲ ಟೆಲಿಸ್ಕೋಪ್‌ನಿಂದ ಕಣ್ಣು ತೆಗೆಯಲಿಲ್ಲ.

"What nonsense is going on there?"

ಬೇಲ ತಟ್ಟನೆ ತಿರುಗಿ ನೋಡಿದಳು. ಕಂಗಳಲ್ಲಿ ತೇವವೆ? ಆತ ಕೇಳಿದ:

"ಅಲ್ಲಿ ಮದುವೆಯೇ?"

"Yes, somebody is married to Heaven!

ಮರಳಿ ಮೆಟ್ಟಿಲುಗಳಿಂದ ಇಳಿಯುವಾಗ ಅವಳು ಮೂಕಳಾಗಿದ್ದಳು. ಕಾರನ್ನೇರಿ



ಪಯಣ ಮುಂದುವರಿಸುವಾಗ ಸಹ ಮೌನ ಒಡೆದಿರಲಿಲ್ಲ.

ಗಾಳಿಗೆ ಹಾರುತ್ತಿದ್ದ ತಲೆಗೂದಲನ್ನು ನೇವರಿಸಿ ಆತ ಕೇಳಿದ.

"ಯಾವುದು ದಾರಿ? Tell me with a pleasant face."

ತಕ್ಷಣ ನಕ್ಕು ಆತನ ಕೈ ಬಿಗಿ ಹಿಡಿದು ಹೇಳಿದಳು:

"ತಕ್ಷಣ ತಿರುಗಿಸಿ, ಬಲಕ್ಕೆ. ತೊಂಬತ್ತು ಡಿಗ್ರಿಗೆ, I mean in a right angle."

ಆತ ಗಾಡಿ ನಿಲ್ಲಿಸಿ ಬಲಗಡೆ ನೋಡಿದ. ಕಡಿದಾದ ಪ್ರಪಾತ!

"ಸರಿ, ಅಲ್ಲಿಗೆ ತಲುಪಿದ ಮೇಲೆ?"

"ಆಮೇಲೆ ದಾರಿ ಕೇಳುವ ಅಗತ್ಯ ಬಾರದು. ಏನು, ಸಾಯಲು ಭಯವೇ?"

"ಹೌದು ಭಯವಿರದೆ ಏನು ಮಾಡೀತು? ಆದರೂ ಬೇಕಾದರೆ ಸಾಯುವೆ. ನರಕಕ್ಕೂ ಹೋಗುತ್ತೇನೆ. ಆದರೆ, ನರಕದಲ್ಲಿ, ನೀನು ತಯಾರಿಸಿ ಕಲಸಿಟ್ಟ ಅನ್ನ, ಸಾಂಬಾರು ತಾನೇ ಊಟ? ಅದನ್ನು ನೆನೆಯುವಾಗ ಮಾತ್ರ ಸಂಕಟವಾಗುತ್ತದೆ."

ಬೇಲ ಫಕ್ಕನೆ ನಕ್ಕದ್ದೂ, ಆತನ ಕೆನ್ನೆಗೆ ಬಲವಾಗಿ ಹೊಡೆದದ್ದೂ, ಕೆನ್ನೆ ಚುರುಗುಟ್ಟಿದ್ದೂ ಎಲ್ಲ ಒಂದೇ ಕ್ಷಣದಲ್ಲಿ. ಕೆನ್ನೆ ಸವರಲು ಮೇಲೆತ್ತಿದ್ದ ಕೈಯನ್ನು ಬಿಗಿಯಾಗಿ ಹಿಡಿದು ಬೇಲ ಹೇಳಿದಳು,

"Wait, let it burn"

ತಟ್ಟನೆ ಆತನನ್ನು ಬಿಗಿದಪ್ಪಿ ಚುಂಬನದ ಮಳೆಗರೆದಳು, ಉರಿಯುವ ಕೆನ್ನೆಗಳಿಗೂ ತುಟಿಗಳಿಗೂ. ಆತನಿಗೆ ಉಸಿರುಗಟ್ಟಿತು.

"Please, Bela, ಇಷ್ಟೇ ಸಾಕು. Leave me alone.)"

"ಇವತ್ತು ರಾತ್ರಿ ನಿನಗೆ ನಾನೊಂದು ಪಾಠ ಕಲಿಸುತ್ತೇನೆ."

"ಗುರುವಿಗೆ ತಿರುಮಂತ್ರ?"

"You are incorrigible!"

"Yes, Something I learned from you."

"ಇರಲಿ, ನಾನು ಈ ಗಾಡಿಯನ್ನು ಸ್ವಲ್ಪ ಚಲಾಯಿಸಿ ನೋಡಲೇ?"

"ಹೂಂ. ಸಾವು ಬೇಕಾಗಿದ್ದರೆ ಹಾಗೇ ಮಾಡು."

ಒತ್ತಿ ಕುಳಿತು ಬೇಲ ಕಾರು ಚಲಾಯಿಸ ತೊಡಗಿದಳು. ಸ್ವಲ್ಪ ಹೊತ್ತಿನ ಬಳಿಕ ಅವಳು ಬ್ರೇಕ್ ಹಾಕಿದಳು.

"ಈ ಕಡೆ ಬಂದು ಕುಳಿತುಕೊಳ್ಳಿ." ಅವಳು ಅನಾಯಾಸವಾಗಿ ಗಾಡಿಯನ್ನೋಡಿಸಿದಳು.

"ಏನೂ ಹೆದರಬೇಡಿ, ಕಣ್ಣು ಮುಚ್ಚಿಕೊಳ್ಳಿ."

ಕಣ್ಣುಗಳು ನಿಧಾನವಾಗಿ ಮುಚ್ಚಿಕೊಂಡವು. ಕಾರು ನಿಂತಾಗಲಷ್ಟೇ ಎಚ್ಚರವಾದದ್ದು.

"ಈ ಕಾರಿಗೆ ಹಾರ್ನ್ ಬೇಡ. ಗೊರಕೆ ಹೊಡೆಯುವ ಶಬ್ದವೇ ಸಾಕಲ್ಲ? ಬನ್ನಿ. ಭೂಮಿಯ ತುದಿಯನ್ನು ನೋಡುವುದು ಬೇಡವೇ?"

ಕಾರ್ ಲಾಕ್ ಮಾಡಿ ನಡೆದರು, ಭೂಮಿಯ ತುದಿಗೆ.

ಕೆಳಕ್ಕೆ ನೋಡಿದರು. ಕಡಿದಾದ ಪ್ರಪಾತ. ಯಾರೋ ಈ ಭೂಮಿಯನ್ನು ಸೀಳಿದ್ದಾರೆ. ಪುನಃ ಪುನಃ ನೋಡಿದರು. ಆಗ ತೇಲಾಡುವ ಮಂಜಿನ ಮೇಘಗಳು ಕೆಳಗಡೆಗೆ ಆತನನ್ನು ಕೈ ಬೀಸಿ ಕರೆದವು. ಮೇಘಗಳ ಕೆಳಗೆ? ಅದನ್ನು ಕಾಣುವ, ಅನುಭವಿಸುವ ವ್ಯಗ್ರತೆ. ಮಂಜು ಮೇಘಗಳ ಜೇಡರಬಲೆ ನೇಯ್ದ ತೊಟ್ಟಿಲು. ಜೋಗುಳ ಹಾಡುತ್ತ ಕೆಳಗಡೆಗೆ ಕರೆದಿದೆ.

ತಲೆಯನ್ನು ಮಾತ್ರ ಹೊರಚಾಚಿ, ಆತ ಅಲ್ಲಿ ಬೋರಲಾಗಿ ಮಲಗಿ ಆ ಅಗಾಧತೆಗಳ ಕಡೆಗೆ ನೋಡಿದ.

ತಕ್ಷಣ ಬೇಲ ಹೆದರಿ ಆತನ ಸೊಂಟವನ್ನು ಬಿಗಿಯಾಗಿ ಹಿಡಿದು ಮಲಗಿದಳು, ಆತ

ಕೆಳಗಡೆಗೆ ಬೀಳದಿರಲು ಒಂದು ಭಾರವೆಂಬಂತೆ.

"Get up, or I will shout for help. Please don't create a scene here."

ಮೆಲ್ಲನೆ ಮೇಲೆದ್ದು ಹಿಂದಿರುಗಿ ನಡೆಯುವಾಗ ಆತ ಯೋಚಿಸಿದ:

"What a blissfull place to say Good bye to this earth!"

ದಿಗ್ಭ್ರಾಂತಳಾಗಿ ಬೇಲ ಕೇಳಿದಳು:

"ಏನು ಚಿಂತೆ? ಏನನ್ನೂ ಯೋಚಿಸಬೇಡಿ. ನನಗೆ ಗೊತ್ತು, ಇಲ್ಲಿ ಬಂದರೆ ಏನೇನೋ ತೋಚುತ್ತೆ ಅಂತ. ಕೆಳಗಡೆಗೆ ನೋಡುವಾಗಲೆಲ್ಲ ನನಗೂ ತೋಚಿದೆ. An invitation to Eternity something one cannot resist."

"ಪುನಃ ನಾನು ಇಲ್ಲಿಗೆ ಬರುತ್ತೇನೆ. ಬೇಲಾ, ನಿನಗೆ ಇಷ್ಟವಿದ್ದರೆ ನೀನೂ ಜೊತೆಗೆ ಬರಬಹುದು."

"ಆಮೇಲೆ?"

"ಅದನ್ನು ಆಗ ತೀರ್ಮಾನಿಸೋಣ. ಇನ್ನು ಗಾಡಿಯನ್ನು ನಾನು ಓಡಿಸುತ್ತೇನೆ."

ಸರೋವರ, ಹಲವು ಬಣ್ಣಗಳ ಬೋಟ್‌ಗಳು. ಜೋಡಿಗಳು ನಿಶ್ಶಬ್ದವಾಗಿ ಪರಸ್ಪರ ಮುಖ ನೋಡುತ್ತಾ ಕುಳಿತಿವೆ. ಇನ್ನು ಕೆಲವು ಜೋಡಿ ತಂದೆತಾಯಿಗಳೊಂದಿಗೆ ಕಿಲಕಿಲ ನಗುವ ಮಕ್ಕಳು. ತನಗೂ ಮುಂದೆಂದಾದರೂ ಅಂತಹ ಒಂದು ಅನುಭವವಾಗುವುದೇ?

"ಏನಿಷ್ಟು ಚಿಂತೆ? ಬನ್ನಿ."

"ಸುಟ್ಟ ಮೆಕ್ಕೆಜೋಳವನ್ನು ತಿನ್ನುತ್ತಾ ಸರೋವರದ ನಡುವೆ ಎಂಥ ಮಜಾ! ನಾನು ಏನೂ ಮಾತಾಡುವುದಿಲ್ಲ, ಎಷ್ಟು ಹೊತ್ತು ಬೇಕಾದರೂ ಯೋಚಿಸುತ್ತಾ ಕುಳಿತಿರಬಹುದು."

"ಬೇಡ, ನನಗೆ ಹುಟ್ಟು ಹಾಕಲು ಬಾರದು."

"ನನಗೆ ಬರುತ್ತೆ."

"ಬೇಡ, ನನಗೆ ಈಜಲು ಬಾರದು."

"ಪರವಾಗಿಲ್ಲ."

"ಬೇಡ, ಇನ್ನು ನೀರಿನಲ್ಲಿ ಮುಳಗಿ ಸಾಯುವುದೇ ನನ್ನ ವಿಧಿಯೆಂದಾದರೆ, ಅದು ಇಷ್ಟು ತಣ್ಣನೆ ನೀರಿನಲ್ಲಿ ಬೇಡ."

"You are a moron."

"ಆಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು? ಏನನ್ನೂ ಚಿಂತಿಸಲು ಆಗದು. ಬಹಳ ಹಿತ. ನನಗೆ ಹಸಿವಾಗುತ್ತಿದೆ. ಕೊಣೆಗೆ ಹೋಗೋಣ. ಬೇಗನೆ ಡಿನ್ನರ್?"

"ಊಂ. ಗೊತ್ತಾಯಿತು. ಚೆನ್ನಾಗಿ ಕುಡಿಯೋಕೆ ತಾನೇ?"

"ಹಾಗೂ ಆಗಬಹುದು. ಬಳಿಕ ಚೈನೀಸ್ ಫುಡ್. ಮಶ್ರೂಂ ಸೂಪ್. ಎಗ್ ಫ್ರೈಡ್ ರೈಸ್. ಚಿಕನ್ ವಿತ್ ವೆಜಿಟೆಬಲ್ಸ್. ಆಮೇಲೆ ಸ್ಮೋಕ್ಡ್ ಫಿಷ್ ಸಿಗುವುದಾದರೆ ಅದೂ ಆಗಲಿ."

"ಆಮೇಲೆ?"

"ಆಮೇಲೆ ನಾವಿಬ್ಬರೂ ನಿದ್ರೆ ಮಾಡುತ್ತೇವೆ."

"ನಿದ್ರಿಸುವಾಗ?"

"ನಿದ್ರೆಯಲ್ಲಿ ನಾವಿಬ್ಬರೂ ಎದ್ದು ನಡೆಯುತ್ತೇವೆ."

"Somnambulism?"

"ಹೌದು."

"ಆಮೇಲೆ?"

"ನಿದ್ರೆಯಿಂದ ಎಚ್ಚರಾಗದೆ ನಡೆದು ನಡೆದು ಅಲ್ಲಿಗೆ ತಲುಪುತ್ತೇವೆ. ನಂತರ ಇನ್ನೊಂದು ಹೆಜ್ಜೆ ಮುಂದಕ್ಕೆ. ಆಗ ಎಷ್ಟು ಸುಖ? ಕೆಳಕ್ಕೆ, ಕೆಳಕ್ಕೆ ಮಂಜಿನ ಮೇಘಗಳನ್ನು ಒತ್ತಿಕೊಂಡು. ಆಗ ದೇವಕನ್ಯೆಯರ ಮತ್ತು ಫೈರಿಗಳ ಕಥೆಗಳನ್ನು ಹೇಳಿ ನೀನು ನಿದ್ರೆಹೋಗುವ ಹಾಗೆ ಮಾಡ್ತೇನೆ."

"ನಿಜವೇ?"

"ಸುಳ್ಳು ಹೇಳಲು ಇಷ್ಟು ದೂರ ಬರ

ಬೇಕೇ?"

"ನನಗೆ ಒಂದೂ ಅರ್ಥವಾಗುತ್ತಿಲ್ಲ."

"ಅದೂ ಒಂದು ವರವೇ ತಾನೇ?"

"ಹುಚ್ಚು ಹಿಡಿಯಿತೇ?"

"ಹುಚ್ಚು ಹಿಡಿದವರು ಇದಕ್ಕೆ ಹೇಗೆ ಉತ್ತರ ಹೇಳುತ್ತಾರೆ?"

"ಸ್ವಲ್ಪ ಸುಮ್ಮನಿರುತ್ತೀರಾ? You frighten me."

"Yes madame, I shall obey."

ಹೊಟೇಲ್‌ನ ಪೋರ್ಚ್‌ನ ಮೂಲಕ, ಪಾರ್ಕಿಂಗ್ ಏರಿಯಾವನ್ನು ತಲುಪಿ, ಅನಾಯಾಸವಾಗಿ ಗಾಡಿಯನ್ನು ರಿವರ್ಸ್ ಮಾಡಿ ನಿಲ್ಲಿಸಿದಳು.

"ಒಳ್ಳೆ ಡ್ರೈವಿಂಗ್."

"Your Highness I don't want your certificate. ಇನ್ನು ಏನು ಬೇಕೂಂತ ಹೇಳಿ ಸಾಕು."

"ಇನ್ನೂ ಸ್ವಲ್ಪ ಗೌರವದಿಂದ ಮಾತನಾಡುವ, ನೋಡಲು ಸುಂದರವಾದ ಓರ್ವ ಗೈಡ್ ಸಿಕ್ಕಿದರೆ ಸಾಕು."

"ಸರಿ, ಆದರೂ ಈ ಗೈಡ್‌ಗೆ ನಿಮ್ಮನ್ನು ಕೋಣೆಗೆ ಕರೆದೊಯ್ದು ಬಿಡುವ ಜವಾಬ್ದಾರಿ ಇದೆಯಲ್ಲ? ಅಲ್ಲಿಗೆ ಹೋಗಿ ನನ್ನ ಲೆಕ್ಕ ತೀರಿಸಿದ ಮೇಲೆ ಉಳಿದ ವಿಚಾರ ಮಾತಾಡೋಣ."

ಕೋಣೆಯನ್ನು ತಲುಪಿದೊಡನೆ ಅವಳು ಬಾಗಿಲು ಮುಚ್ಚಿ ಚಿಲಕ ಹಾಕಿದಳು. ಚುಂಬನದ ಮಳೆಗರೆದ ಬಳಿಕ ಕೇಳಿದಳು:

"Now, do you really want another guide? Then, goodbye."

ಓಡುತ್ತಿದ್ದವಳನ್ನಾತ ಬಿಗಿಯಾಗಿ ಹಿಡಿದ.

"ನನ್ನನ್ನು ಬಿಡಿ"

ಏನನ್ನೂ ಮಾತನಾಡಲು ಬಿಡದೆ ತುಟಿಗಳನ್ನೊತ್ತಿದ. ಕೊಸರಿ ದೂರಾಗಿ ಅವಳು ಪುನಃ "ನನ್ನನ್ನು ಬಿಡಿ," ಎಂದಳು.

"ಬಿಡುತ್ತೇನೆ. ರಿಸೆಪ್ಷನಿಸ್ಟ್ ಕಳಿಸುತ್ತೇನೆಂದು ಹೇಳಿದ ಸುಂದರವಾದ ಆ ಗೈಡ್ ಬರಲಿ, ಆಮೇಲೆ ಹೋಗು."

ಅವಳು ದಣಿದೊರಗಿದಳು.

"ಬೇಲಾ, ಮುನಿದೆಯಾ?"

"ಇಲ್ಲ, ಒಲಿದೆ. Shut up."

"ನಾನು ತಮಾಷೆ ಮಾಡಿದ್ದಲ್ಲವೇ? ನೋಡು. ನನ್ನ ಕಡೆ ನೋಡು."

"ಅದಕ್ಕಿಂತ ಒಂದು ಘೇಂಡಾಮೃಗದ ಮುಖವನ್ನು ನೋಡುವುದೇ ಲೇಸು."

"ಹಾಗಾದರೆ, ಇನ್ನೊಂದು ಘೇಂಡಾಮೃಗವನ್ನು ನೋಡಲು ಈ ಚಳಿಯಲ್ಲಿ ಎಷ್ಟು ದೂರ ಹೋಗಬೇಕು?"

"ಹೆಚ್ಚು ದೂರವೇನೂ ಹೋಗುವುದು ಬೇಡ. ನನ್ನ ಹತ್ತಿರವೇ ಇದೆ."

"ಅಯ್ಯೋ, ಇಲ್ಲಿಗೆ ಬರುವಾಗ ಓರ್ವ ಬಡಪಾಯಿ ಮನುಷ್ಯನಾಗಿದ್ದೆ. ಇಲ್ಲಿ ಬಂದ ಮೇಲೆ ಮೃಗವಾಗುತ್ತೇನೆಂದು ಬಲ್ಲೆ, ಆದರೂ ಇಷ್ಟು ಬೇಗ?"

ಊಟ ಬಂದಾಗ, ಆತ ವಿಸ್ಕಿ ತೆಗೆದು ಎರಡು ಗ್ಲಾಸ್‌ಗಳಿಗೆ ಹಾಕಿದ. ಒಂದನ್ನು ಅವಳ ಕಡೆಗೆ ಚಾಚಿದ.

"ಬೇಡ."

"ಸಂತೋಷವಾದ ಒಂದು ರಾತ್ರಿ. ಸ್ವಲ್ಪ ಮಾತ್ರ ಕುಡಿ. ಇದು ವಿಷವೇನಲ್ಲ."

"ಹೌದು, ವಿಷವೇ."

"ಒಂದು ಸಲ ಮಾತ್ರ."

"ನನ್ನನ್ನು ಒತ್ತಾಯಿಸಬೇಡಿ."

"Please, for once, drink to my health."

ಅವಳು ಗ್ಲಾಸ್ ಎತ್ತಿ ತಟ್ಟನೆ ಕುಡಿದಳು. ಎರಡುಮೂರು ಸಲ ಕೆಮ್ಮಿದಳು.

"ಸಂತೋಷವಾಯಿತೇ? ಮೊದಲ ಸಲ ನಾನು ಈ ಪಾಪವನ್ನು ಮಾಡುತ್ತಿದ್ದೇನೆ. For your health"

ಆತ ಯೋಚಿಸಿದ, ಈ ಪಾಪ ಬೇಕಿರಲಿಲ್ಲ.

"ಬನ್ನಿ, ಊಟ ಮಾಡೋಣ."

"ಇಷ್ಟು ಹಿತಕರವಾಗಿ ಈ ತನಕ ಊಟ ಮಾಡಿರಲಿಲ್ಲ."

"ಹಾಗಾದರೆ ದಿನವೂ ಇಲ್ಲೇ ಇದ್ದು ಬಿಡಿ. ಜೊತೆಯಾಗಿ ಯಾವುದಾದರೂ ಗೈಡ್ ಸಹ ಸಿಗುತ್ತಾಳೆ."

"ಊಂ-ನಿದ್ರೆ ಮಾಡೋಣ."

ಆತ ಮಲಗಿದ.

"ಬೇಲಾ..."

"ಊಂ...."

"ಚಳಿಯಾಗುತ್ತಿದೆ."

ಕೈಗಳನ್ನು ಕೊರಳ ಸುತ್ತ ಬಳಸಿದಳು.

"ಮೊದಲು ನಿದ್ರಿಸೋಣ ಅಲ್ಲವೇ ಬೇಲಾ?"

"ಮೊದಲು ಅಲ್ಲ, ಬೆಳಗಾಗುವ ತನಕ."

"ಓ, ಸಂದೇಹವೇಕೆ?...."

ಕೆಳಗೆ ಕುಳಿತು ಬೇಲ ಆತನ ಪೆಟ್ಟಿಗೆಯನ್ನು ಸಿದ್ಧಪಡಿಸುವುದನ್ನು ಕಂಡಾಗ ಮರಳಿ ಹೋಗಲು ಮನಸ್ಸು ಒಪ್ಪಲಿಲ್ಲ.

"ಬೇಲಾ, ನಿನಗೆ ಹಾಡೆಂದರೆ ಇಷ್ಟ ತಾನೇ?"

"ಊಂ"

"ಹಾಗಾದರೆ ಹಾಡು."

"ಇನ್ನು ಬರುವಾಗ ಈಗ ಮನಸ್ಸು ಬಿಡುತ್ತಿಲ್ಲ."

"ನಾನು ಈಗ ಹೋಗುತ್ತಿರುವುದರಿಂದಲೇನು?"

"ಗೊತ್ತಿಲ್ಲ."

"ಮುಂದಿನ ಸಲ ನಾನು ಬರುವಾಗ ನಿನಗೆ ಒಂದು ಟೇಪ್ ರೆಕಾರ್ಡರ್ ತಂದು ಕೊಡುತ್ತೇನೆ. ಅದರೊಟ್ಟಿಗೆ ಬಹಳ ಕ್ಯಾಸೆಟ್‌ಗಳನ್ನೂ. ಒಂದು ಕ್ಯಾಸೆಟ್‌ನಲ್ಲಿ ನೀ ಹೇಳುವುದನ್ನೆಲ್ಲ ರೆಕಾರ್ಡ್ ಮಾಡುತ್ತೇನೆ ನಿನಗೆ ಗೊತ್ತಾಗದ ಹಾಗೆ..."

ಅವಳು ಏನನ್ನೂ ಹೇಳದೇ ಪೆಟ್ಟಿಗೆಯನ್ನು ಸಿದ್ಧಪಡಿಸಿದಳು.

"ಏನು ಮಾತೇ ಆಡುತ್ತಿಲ್ಲ? ಅಲ್ಲದಿದ್ದರೆ ಹೇಳು ಏನು ಇಷ್ಟ ಅಂತ?"

ಏನೂ ಹೇಳದೆ ಪೆಟ್ಟಿಗೆಯನ್ನು ಮುಚ್ಚಿ ಎದ್ದು ನಿಂತಳು. ಕಣ್ಣುಗಳು ಕದಡಿದ್ದವೇ? ಕಿಟಕಿಯ ಪತ್ತಿರ ಹೋಗಿ ನಿಂತು ಹೊರಕ್ಕೆ ನೋಡಿದಳು.

ಆತ ಸನಿಹಕ್ಕೆ ಬಂದು ಹೆಗಲ ಮೇಲೆ ಕೈಯಿರಿಸಿದ.

"ಬೇಲಾ, ಹೇಳು."

ಬಿಕ್ಕುವಿಕೆಯನ್ನು ಹೇಗುಹೇಗೋ ತಡೆಹಿಡಿದು, ದನಿಯುಡುಗಿ ಹೇಳಿದಳು:

"ಯಾರಿಂದಲೂ ಅದನ್ನು ಕೊಡಲಾಗದು.... Home, a sweet home."

ಶ್ಯಾಮಲ ಮೇಘಗಳು ಮನದಲ್ಲಿ ಮೇಳೈಸಿದವು. ಮನೆ, ಮಡದಿ, ಮಕ್ಕಳು. ಸಂತೃಪ್ತಿ ನೀಡುವ ಸಂಸಾರ. ಯಾರಿಗೆ ಅದರ ಯೋಗವಿದೆ?

ಸಂಕಷ್ಟಗಳ ಸುಳಿಯ ಸೆರೆಗಳಿಂದ ತನ್ನ ಮನಸ್ಸನ್ನು ಬಿಡುಗಡೆಗೊಳಿಸಲು ಒಂದು ವ್ಯರ್ಥ ಪ್ರಯತ್ನ ನಡೆಸಿದ. ಒಂದು ತಮಾಷೆಯ ಹಾಗೆ ಕೇಳಿದ.

"Home, sweet home? Nonsense... ನಾನು ಇಲ್ಲಿಗೆ ಧಾವಿಸಿ ಬಂದುದೇ ಅವುಗಳಿಂದ ಪಾರಾಗುವುದಕ್ಕಲ್ಲವೇ?"

ಅವಳು ಆತನನ್ನು ನೋಡಿ ನಿಧಾನವಾಗಿ ಹೇಳಿದಳು:

"ಹಾಗೆ ಹೇಳಬೇಡಿ. ಪಾರಾಗಿಲ್ಲ ಎಂದು ನಾ ಊಹಿಸಬಲ್ಲೆ. ಇದು ಒಂದು ಪಾರಾಗುವಿಕೆಯೇ ಅಲ್ಲ. ಮರಳಿ ಹೋಗಿ, ಎಲ್ಲವನ್ನೂ ಮರೆತು...."

"ಏಕೆ?"

"ಏಕೆಂದು ವಿವರಿಸಲು ನನಗೆ ತಿಳಿಯದು. ಆದರೂ, ನನಗೆ ಅಲ್ಲಿನ ಆ ಮನೆಯ ಬಗ್ಗೆ ಯೋಚಿಸುವಾಗ ವ್ಯಥೆ ಉಂಟಾಗುತ್ತದೆ."

"ಆ ಬಗ್ಗೆ ಚಿಂತಿಸಬೇಕಾದವನು ನಾನಲ್ಲವೇ? ನೀನು ಏಕೆ ವ್ಯಥೆ ಪಡಬೇಕು? ನಾನ್‌ಸೆನ್ಸ್."

"ನಾನ್‌ಸೆನ್ಸ್ ಏನೂ ಅಲ್ಲ. ನನಗೂ ಒಂದು ಮನೆಯಿಲ್ಲವೆ? ನಾನು ಅದನ್ನು ನೆನೆಯುತ್ತೇನೆ."

"ನಿನ್ನ ಮನೆಯನ್ನಲ್ಲ, ನಿನ್ನನ್ನು..."

"ಗೊತ್ತು. ನನ್ನನ್ನೇ ಪ್ರೀತಿಸುತ್ತಿರುವುದು. ಅದನ್ನು ಅರಿತುಕೊಳ್ಳಲು ಅಷ್ಟು ಬುದ್ಧಿಯೇನೂ ಬೇಕಿಲ್ಲ. ಅದನ್ನೆಲ್ಲ ಸ್ವೀಕರಿಸುವ ಶಕ್ತಿ ನನಗಿದೆ. ಆದರೆ ಒಮ್ಮೆ ಅದು ನಷ್ಟವಾಗುವಾಗ? ಸಹಿಸಲು ಸಾಧ್ಯವಾಗುವುದಿಲ್ಲ. ನಾನು ಬರಿ ಗೈಡ್ ಅಷ್ಟೆ. ಏನನ್ನೂ ಆಸೆಪಡಬಾರದು. ಆಕೆಗೆ ಏನನ್ನೂ ಪಡೆಯುವ ಅರ್ಹತೆಯೂ ಇಲ್ಲ. ಇಷ್ಟಕ್ಕೂ ಪಾರಾಗಲು ತಾನೇ ನೀವು ಇಲ್ಲಿಗೆ ಬಂದದ್ದು? ಈ ವಯಸ್ಸಿನಲ್ಲಿ ಓರ್ವ ಗೈಡ್ ಜೊತೆಗೆ ಹೊಂದಬಹುದಾದಷ್ಟು ಸಾಮೀಪ್ಯ ಮಾತ್ರ ಸಾಕಾಗಿತ್ತು. You remind me of my Daddy. He was so affectionate... ಎಲ್ಲವನ್ನೂ ಮರೆತು ಪುನಃ ಓರ್ವ ಗೈಡ್ ಮಾತ್ರ ಆಗಲು....? ಅದಕ್ಕೆ ಇನ್ನೂ ಎಷ್ಟು ಕಾಲ ನಾನು ಕಷ್ಟಪಡಬೇಕು?" ನಾನು ಯಾರ ಮೇಲೂ ತಪ್ಪು ಹೊರಿಸುತ್ತಿಲ್ಲ."

ಅವನಿಗೆ ಯಾವುದೇ ಉತ್ತರ ಹೇಳಲಾಗಲಿಲ್ಲ.

ಪ್ರಯಾಣ ಆರಂಭಿಸುವ ಹೊತ್ತಿನಲ್ಲಿ ಒಂದು ನೆರಳಿನಂತೆ ಆಕೆ ಹಿಂಬಾಲಿಸಿದಳು.

ಕಾರಿನಲ್ಲಿ ಹತ್ತಿ ಕುಳಿತು ಅವಳನ್ನು ನೋಡಿದ.

ಆಗ ತಲೆ ತಗ್ಗಿಸಿ ಅವಳು ಹೇಳಿದಳು:

"ಪ್ಲೀಸ್, ನನಗೆ ವಿದಾಯ ಹೇಳಬೇಡಿ"

ಅತಿವೇಗವಾಗಿ ಕಾರನ್ನೋಡಿಸುವಾಗ ರಿಯರ್ ವ್ಯೂ ಮಿರರ್‌ನಲ್ಲಾತ ನೋಡಿದ.

ನಿಶ್ಚಲವಾಗಿ ಕೆಳಗೆ ನೋಡುತ್ತ ನಿಂತ ಬೇಲಳ ರೂಪ ಕಿರಿದಾಗುತ್ತ ಬಂದು ಹಾದಿಯ ಒಂದು ತಿರುವಿನಲ್ಲಿ ಕಾಣೆಯಾಯಿತು.

ಬಲು ದೂರ ಹೋದಾಗ ನೇರಳೆ ಹೂಗಳು ಅರಳಿ ನಿಂತ ಆ ಮರದಡಿಯಲ್ಲಿ ಕಾರನ್ನು ನಿಲ್ಲಿಸಿ ಹೊರಗಿಳಿದ. ಒಂದು ತಪಸ್ಸಿನ ನಿಷ್ಠೆಗೋ ಎಂಬಂತೆ ಆ ಬಂಡೆಯ ಮೇಲೆ ಹತ್ತಿ ಸ್ವಲ್ಪ ಹೂಗಳನ್ನು ಕಿತ್ತು ಡ್ಯಾಷ್‌ಬೋರ್ಡ್ ಮೇಲೆ ಇರಿಸಿದ. ಅದನ್ನು ನೋಡುತ್ತ ಪಯಣ ಮುಂದುವರಿಸಿದಾಗ ಮಿದುಳಿನ ಸೂಕ್ಷ್ಮ ಧಮನಿಗಳ, ಸಾವಿರಸಾವಿರ ವೀಥಿಗಳಲ್ಲಿ, ಮೃತ್ಯುವನ್ನು ತಲುಪಲು ನಿರ್ವಿಘ್ನವಾಗಿ ಸಂಚರಿಸುವ ಜೀವರಸದಲ್ಲಿ

ಮಂಜಿನ ಮೇಘಗಳು ಹಬ್ಬಿದವು.

ಆಗಲೂ ಬೇಲಳ ದನಿ:

"ನನಗೆ ಪತ್ರ ಬರೆಯಬೇಡಿ. ನಾನೂ ಬರೆಯುವುದಿಲ್ಲ. ಮತ್ತೆ-ಎಂದಾದರೊಮ್ಮೆ ಭೇಟಿಯಾದರೆ ಸಾಕು."

ಅನಾರೋಗ್ಯ. ಮತ್ತೆ ಅಲ್ಲಿಗೆ ಹೋಗಬೇಕಾಗಿದ್ದ ಕಾರ್ಯಕ್ರಮವನ್ನು ಮುಂದೂಡಬೇಕಾಯಿತು.

ನಂತರ ಬಸ್‌ನಲ್ಲಿ ಪ್ರಯಾಣ ಹೊರಟಾಗ ಆತ ಯೋಚಿಸಿದ. ಇನ್ನು ಭೇಟಿಯಾಗುವಾಗ ಬೇಲಳಿಗೆ ಎಷ್ಟು ಮುನಿಸಿರಬಹುದು? ಆದರೆ, ಭೇಟಿಯಾಗಲು ಸಾಧ್ಯವೇ? ಹುಡುಕಿ ಪತ್ತೆಮಾಡಬೇಕು.

ಆತ ದಾರಿಯ ಪಕ್ಕವನ್ನು ನೋಡುತ್ತಾ ಕುಳಿತ.

ಒಂದು ಸೇತುವೆ. ಅದಾದ ತಕ್ಷಣವೇ ಒಂದು ತಿರುವು. ಅದರಾಚೆಗೆ ನೇರಳೆ ಹೂಗಳು ಅರಳುವ ವೃದ್ಧ ವೃಕ್ಷ.

ದಿಢೀರನೆ ಸೇತುವೆ, ತಿರುವು ಮತ್ತು ಆ ಮರ ಎದುರಿಗೆ ಬಂದವು. ಒಂದು ನಿಮಿಷದೊಳಗೆ ಎಲ್ಲವೂ ಕಣ್ಣೆದುರಿನಿಂದ ಮರೆಯಾದವು. ಈಗ ನೇರಳೆ ಹೂಗಳ ಒಂದು ದಳವೂ ಅಪ್ರಾಪ್ಯ.

ಹಳೆಯ ಹೋಟೆಲ್‌ನಲ್ಲಿ ಅದೇ ಕೋಣೆ ಸಿಕ್ಕಿತು. ರಿಸೆಪ್ಷನ್‌ಗೆ ಹೋಗಿ ಗೈಡನ್ನು ತನ್ನ ಕೋಣೆಗೆ ಕಳಿಸುವಂತೆ ಹೇಳಿದ.

ಕೋಣೆ ತಲುಪಿದೊಡನೆ ಬಿಸಿನೀರಲ್ಲಿ ಸ್ನಾನ ಮಾಡಿದ. ಆಗಲೂ ಹಿತಕರವಾದ ನೆನಪುಗಳನ್ನು ತರುವ ಚಳಿಯಿತ್ತು. ಆತ ಟೇಪ್ ರೆಕಾರ್ಡರನ್ನು ಮೇಜಿನ ಮೇಲಿಟ್ಟ. ಅವಳು ಬಂದರೆ ತಕ್ಷಣ ಆನ್ ಮಾಡಬೇಕು. ಆಗ ಅಂದು ಅವಳು ಹಾಡಿದ ಹಾಡು....

ಕಾಯುವಿಕೆ ಸಹನಾತೀತವಾದಾಗ, ಆತ ಹಾಸಿಗೆಯಲ್ಲಿ ಕಣ್ಣುಮುಚ್ಚಿ ಮಲಗಿ ಯೋಚಿಸಿದ.

ಮುಂದಿನ ವರ್ಷ ಬರುತ್ತೇನೆಂದು ಹೇಳಿ ಹೋಗಿದ್ದ. ಅವಳು ತನಗೋಸ್ಕರ ಏಕೆ ಕಾದಿರಬೇಕು?

ಬಾಗಿಲು ತೆರೆಯುವ ಶಬ್ದ ಕೇಳಿ ಆತ ಎದ್ದ.

ಗೈಡ್.

"ಸಾರ್, ಮತ್ತೆ ಬಂದಿರಲ್ಲ? ಸಂತೋಷ."

"ಇಸಬೆಲ್ಲಾ?"

"ನಾನು ಹೋಗಿ ವಿಚಾರಿಸುತ್ತೇನೆ."

"ಇಸಬೆಲ್ಲಾ ಬರುವುದಿಲ್ಲವೇ?"

"ಆ ಹುಡುಗಿಗೆ ತಮ್ಮ ಮೇಲೆ ಪ್ರೀತಿಯಿದೆಯಲ್ಲ?"

"ಬೇಗ ಬರುವಂತೆ ಹೇಳಿ."

ಗೈಡ್ ಹೋದ ಮೇಲೆ ಪುನಃ ಮಲಗಿದ, ಬಹಳ ಹೊತ್ತು.

ಸುವರ್ಣಾಂಬರಗಳು ಸಂಜೆಯ ಶ್ಯಾಮಲ ವಸ್ತ್ರಗಳನ್ನು ಸ್ವೀಕರಿಸುವಾಗ ಕಾದು ಕಾದು ಕಣ್ಣುಗಳು ಮುಚ್ಚಿಕೊಂಡವು....

ತಕ್ಷಣ, ಆ ಕೋಣೆ, ಗೋಡೆಗಳು, ಕಿಟಕಿಗಳು, ಆ ಪಟ್ಟಣ, ಅಲ್ಲಿನ ಚಳಿ ಎಲ್ಲವೂ ಆತನ ಸ್ವಂತದ್ದಾದವು. ಆತ ಹಾಸಿಗೆಯಿಂದ ಜಿಗಿದೆದ್ದ. ಆಗಲೂ, ಆತನನ್ನು ಎಚ್ಚರಿಸಿದ ಧ್ವನಿ ಆ ಕೋಣೆಯಲ್ಲಿ ತುಂಬಿಕೊಂಡಿತ್ತು.

"Your Highness, here I am at your service!"

ಆತ ಬಿಗಿದಪ್ಪಿ ತಲೆಗೂದಲನ್ನು ನೇವರಿಸುತ್ತಾ ಹೇಳಿದ:

"ನೀನು ಬರುವುದಿಲ್ಲ ಎಂದೇ ಭಾವಿಸಿದ್ದೆ."

"ನಾನೂ ಹಾಗಂದುಕೊಂಡಿದ್ದೆ."

"ನಾನು ಬರುವುದು ತಡವಾಯಿತು ಅಲ್ಲವೆ?"

"ಪರವಾಗಿಲ್ಲ. ಇಷ್ಟಕ್ಕೂ ನಾನೊಬ್ಬಳು ಗೈಡ್ ಅಲ್ಲವೇ?"

"ಅಲ್ಲ, ನನ್ನ ಮಟ್ಟಿಗೆ ಅಲ್ಲ. ಅದೋ ನಿನಗೋಸ್ಕರವೇ ಈ ಟೇಪ್ ರೆಕಾರ್ಡರ್.

ಅದನ್ನು ಆನ್ ಮಾಡು."

ಅವಳು ಆಶ್ಚರ್ಯದಿಂದ ಆತನನ್ನು ನೋಡಿದಳು.

"ಮರೆಯಲಿಲ್ಲ ಅಲ್ಲವೇ?"

ಅವಳು ಟೇಪ್ ರೆಕಾರ್ಡ್‌ರ್‌ನ ಪ್ಲೇ ಬಟನ್ ಒತ್ತಿದಳು.

ತಕ್ಷಣ ಕೋಣೆಯ ಗೋಡೆಗಳಲ್ಲೂ ಭಾವಣೆಯಲ್ಲೂ ಆ ಗೀತೆ ತುಂಬಿಕೊಂಡಿತು.

"I have a dream, a song to sing....

If you see the wonder, of a fairy tale...

I believe in angels,

I will cross the stream.... I have a dream"

ಟೇಪ್ ರೆಕಾರ್ಡರನ್ನು ಆಫ್ ಮಾಡಿದ ವಳೇ ಆತನ ಹೆಗಲಲ್ಲಿ ಮುಖವೊತ್ತಿ ಬಿಕ್ಕಿ ಬಿಕ್ಕಿ ಅತ್ತಳು. ಬಿಕ್ಕಳಿಕೆ ನಿಲ್ಲುವವರೆಗೂ ಆತ ಕಾಯ್ದ. ನಂತರ ಕೇಳಿದ:

"ಏಕೆ ಅತ್ತೆ?"

"ಬರುವುದಿಲ್ಲ ಎಂದು ಭಾವಿಸಿದೆ. ಬರುತ್ತೀರಿ ಎಂದು ನಂಬಿದೆ."

"ಬಂದೆನಲ್ಲ? ಆದರೂ ಅಳುತ್ತಿದ್ದೀಯ?"

"To weep on your shoulders. ನಿಮ್ಮನ್ನು ಕಾಣದಿದ್ದಾಗ ಹಲವು ಸಲ ಹಾಗೆ ಹಂಬಲಿಸಿದೆ. ಅದು ನೆರವೇರಿತು. ಇನ್ನು.... ಇನ್ನು ನನಗೆ ಸ್ವಲ್ಪ ವಿಸ್ಕಿ ಕೊಡುತ್ತೀರಾ?"

ನಂಬಲಾಗದೆ, ಅವಳನ್ನು ತಳ್ಳಿ ನಿಲ್ಲಿಸಿ, ಸಿಟ್ಟಿನಿಂದ ಆತ ನೋಡಿದ.

"ಸಿಟ್ಟಾಗಬೇಡಿ, ಸ್ವಲ್ಪವೇ ಸಾಕು."

"ಊಹುಂ, ಬೇಡ."

"ಹಾಗೆ ಹೇಳಬೇಡಿ, ಇಂದು ನನಗೆ ಎಷ್ಟು ಸಂತೋಷದ ದಿನ!"

"ಹಾಗಾದರೆ! ಇಲ್ಲಿಗೆ ಬರುವುದಕ್ಕೆ ಮುಂಚೆ? ಇಂದು?"

"ಇಂದು ಮಾತ್ರವಲ್ಲ, ಹೇಳುತ್ತೇನೆ ಈ ಭೂಮಿಯ ಕಡಿದಾದ ಕೊರಕಲಾಗಿ ಕೊನೆಗೊಳ್ಳುವ ಆ ಜಾಗ ನೆನಪಿಲ್ಲವೇ. ಅಲ್ಲಿ ಹೋಗಿ ಕುಳಿತುಕೊಳ್ಳುತ್ತಿದ್ದೆ. ಅಲ್ಲಿಗೊಮ್ಮೆ ಧುಮುಕಿದರೆ? ಪುನಃ ಭೇಟಿಯಾಗುವೆವು ಎಂಬ ಆಸೆ ತಡೆದು ನಿಲ್ಲಿಸಿತು. ಯಾವಾಗಲಾದರೂ ಬರುವ ಒಬ್ಬ ವ್ಯಕ್ತಿಗೆ ಇದನ್ನೆಲ್ಲ ಹೇಳಿ ಏನು ಪ್ರಯೋಜನ? ಪುನಃ ಅಲ್ಲಿಗೆ ಹೋಗದಿರಲು...."

ಅವಳು ಟೇಪ್‌ರೆಕಾರ್ಡರನ್ನು ಮತ್ತೆ ಆನ್ ಮಾಡಿದಳು.

"ಈ ಹಾಡನ್ನು ಮರೆಯಲಿಲ್ಲ ಅಲ್ಲವೇ? ಒಂದು ದಿನ ನದಿಯ ಆಚೆಯ ದಡದಲ್ಲಿ.... ಅಲ್ಲಿ ತಲುಪುವ ಮೊದಲು....."

ಅವಳು ಬಾಟಲಿ ತೆಗೆದು ಗ್ಲಾಸ್‌ಗೆ ಸುರಿದಳು.

"For anybody's health.... ಇನ್ನು ನಾನು ನಿದ್ರಿಸಬೇಕು."

ನಿದ್ರೆಯಲ್ಲಿ ಅಸ್ಪಷ್ಟವಾಗಿ ಅವಳು ಏನೇನೋ ಮಾತಾಡುತ್ತಿದ್ದಳು. ಯಾವಾಗಲೋ ಆತನೂ ನಿದ್ರಿಸಿದ....

ಅವಳು ಅಲುಗಾಡಿಸಿ ಎಚ್ಚರಿಸಿದಳು. ಸಹಿಸಲಾಗದಷ್ಟು ಚಳಿ.

ಸ್ನಾನ ಮಾಡುವಾಗ ಬಿಸಿನೀರ ಹಬೆ ದೇಹಗಳನ್ನು ಮರೆಸಿತು. ಅದರ ಎಡೆಯಿಂದ ಆತ ನೋಡಿದ. ಆ ವರೆಗೂ ಮೂಡದಂಥ ಒಂದು ದಾಹ ನರಗಳಲ್ಲಿ, ಆತ ಬಾಚಿ ತಬ್ಬಿದ.

ಅವಳು ಕೊಸರಿಕೊಂಡು ದೂರಾದಳು.

"ಸಾರ್, ಸ್ನಾನ ಮುಗಿಯಿತು. ಇನ್ನು ಕಣ್ಣು ಮುಚ್ಚಿ."

"ಕಣ್ಣು ಮುಚ್ಚುಲಾಗುತ್ತಿಲ್ಲ."

"ಬೇಡ."

ಅವಳು ಆತನ ತಲೆಯನ್ನು ಟರ್ಕಿಷ್ ಟವೆಲ್‌ನಿಂದ ಮುಚ್ಚಿ, ತಲೆ ಒರೆಸಿದಳು.

"ಇನ್ನು ಹೊರಕ್ಕೆ ಹೋಗಿ, ನಾನು ಬರು

ವಷ್ಟರಲ್ಲಿ ಬ್ರೇಕ್‌ಫಾಸ್ಟ್‌ಗೆ ಆರ್ಡರ್ ಮಾಡಿ."

"Yes, madame..."

ಅವಳು ಟರ್ಕಿಷ್ ಟವೆಲ್ಲನ್ನು ಸುತ್ತಿಕೊಂಡು ಹೊರಬಂದಾಗ ಆತ ಹತ್ತಿರ ಹೋಗಿ, ತಲೆಗೂದಲನ್ನು ಮುಟ್ಟಿ ನೋಡಿ ಹೇಳಿದ:

"ತಲೆಗೂದಲು ಒರೆಸಿದ್ದು ಸರಿಯಾಗಲಿಲ್ಲ."

ತಟ್ಟನೆ ಆತ ಟವೆಲ್ಲನ್ನು ಎಳೆದುಕೊಂಡು, ಅವಳನ್ನು ಬಳಿಗೆಳೆದು ನಿಲ್ಲಿಸಿ ತಲೆ ಒರೆಸಿಕೊಟ್ಟ. ಟವೆಲ್ಲನ್ನು ಹೆಗಲಿಗೆ ಹಾಕಿಕೊಂಡು ಆತ ಹಾಸಿಗೆಯಲ್ಲಿ ಹೋಗಿ ಕುಳಿತ.

"ಇನ್ನು ಬಟ್ಟೆ ಹಾಕಿಕೊಳ್ಳಬಹುದು. ನಿಧಾನವಾಗೇ ಆಗಲಿ."

"ಉಪದೇಶವೇನೂ ಬೇಕಿಲ್ಲ."

ಅವಳು ಉಡುಪುಗಳನ್ನು ತೆಗೆದುಕೊಂಡು ಸ್ನಾನದ ಕೋಣೆಗೆ ಓಡಿದಳು...

ಬಹಳ ಹಸಿವಿನಿಂದ ಉಪಾಹಾರ ಸೇವಿಸಿದರು.

"ಇನ್ನು ಹೊರಗೆ ಹೋಗೋಣ. ನಾನು ಜಾಗವನ್ನು ಪುನಃ ನೋಡಬೇಕು. ಕೆಳಗಡೆಗೆ ನೋಡುತ್ತಾ ಬಹಳ ಹೊತ್ತು ಅಲ್ಲಿ ಕುಳಿತಿರೋಣ."

"ಬೇಡ, ನಾನು ಅಲ್ಲಿಗೆ ಬರುವುದಿಲ್ಲ."

"ಸರಿ, ಹಾಗಾದರೆ ತುಂಬ ಹೊತ್ತು ತಿರುಗಾಡೋಣ."

"ನಾನು ಗಾಡಿ ಓಡಿಸುತ್ತೇನೆ."

"ಬೇಲಾ, ನಾನು ಹೇಳುವುದನ್ನು ಮರೆತೆ.



"ಸಾರ್, ನೀವು ಮಂತ್ರಿಯಾಗಲಾರದ್ದೇ ಒಳ್ಳೇದಾಯ್ತು. ಆರಿಸಿ ಬಂದ ಕ್ಷೇತ್ರಕ್ಕೆ ಭೇಟಿ ನೀಡದ ನೀವು, ಇಡೀ ರಾಜ್ಯವನ್ನೇ ಸುತ್ತುವ ಕಿರಿಕಿರಿ ತಪ್ಪಿತು."

ನಾನು ಕಾರಲ್ಲಲ್ಲ ಬಂದದ್ದು. ಹಿಂದಿನ ಹಾಗೆ ಕಾರು ಬಿಡಲು ಸಾಧ್ಯವಿಲ್ಲ, ಮತ್ತೆ ಒಬ್ಬ ಡ್ರೈವರ್, ಅದು ಬೇಡ ಅನ್ನಿಸಿತು. ನಾವು ಒಂದು ಟ್ಯಾಕ್ಸಿ ತೆಗೆದುಕೊಳ್ಳೋಣ."

ಬಲು ದೂರ ಟ್ಯಾಕ್ಸಿಯಲ್ಲಿ ಪಟ್ಟಣವನ್ನೆಲ್ಲ ಸುತ್ತಿದರು. ಹಸಿವಾದಾಗ ಅವಳು ಹೇಳಿದ ಹೊಟೇಲ್‌ಗೆ ಹೋಗಿ ಸಾಕಷ್ಟು ತಿಂದರು. ಡಾಕ್ಟರ್ ನಿಷೇಧಿಸಿದ್ದ ತಿನಿಸುಗಳನ್ನೆಲ್ಲ ಆತ ತೃಪ್ತಿಯಾಗುವ ಹಾಗೆ ತಿಂದ.

"ಇನ್ನು ನಾನು ಊರಿಗೆ ಹಿಂದಿರುಗುವ ದಾರಿಯಲ್ಲಿ ಸ್ವಲ್ಪ ದೂರ ಹೋಗೋಣ."

ನೇರಳೆ ಹೂಗಳು ತುಂಬಿದ್ದ ಆ ಮರದ ಹತ್ತಿರ ತಲುಪಿದಾಗ ಗಾಡಿಯನ್ನು ನಿಲ್ಲಿಸಲು ಆತ ಹೇಳಿದ.

"ಬಾ, ಈ ಮರದ ಹೆಸರೇನು?"

"ಗೊತ್ತಿಲ್ಲ. ಯಾವುದೋ Wildgrowthಇರಬಹುದು. ಮುದಿ ಮರ."

"ವಯಸ್ಸಾದವರಿಗೆ ಮನದಲ್ಲಿ ಏನಾದರೂ Wildgrowth ಉಂಟಾಗುವುದೇ?"

"ಸ್ವಲ್ಪ ಹೊತ್ತು ಸುಮ್ಮನಿರುತ್ತೀರಾ?"

ಆತ ಆ ಬಂಡೆಯನ್ನೇರಿ ಒಂದು ಕೊಂಬೆಯನ್ನು ಮುರಿದ.

"ಯಾಕೆ ಈ ವಾಸನೆಯಿಲ್ಲದ ಹೂಗಳು?"

"ನಮ್ಮ ಹೊಟೇಲಿನ ರಿಸೆಪ್ಷನಿಸ್ಟ್‌ಗೆ ಕೊಡುವುದಕ್ಕೆ, ನಾನು ಪ್ರಾಮಿಸ್ ಮಾಡಿದ್ದೆ."

ಅವಳು ಹೂಗಳನ್ನು ಕಿತ್ತುಕೊಂಡು ದೂರಕ್ಕೆ ಎಸೆದಳು.

"ರಿಸೆಪ್ಶನಿಸ್ಟ್‌ಗೆ ಒಂದು ರೀತ್ ಕೊಡಬಹುದು."

ಮರುದಿನ ವಿದಾಯ ಹೇಳಲಿಲ್ಲ,

"ನಾನು ಮತ್ತೆ ಬರುತ್ತೇನೆ, ಕಾದಿರುತ್ತೇನೆ."

ಕಾಯಿಲೆಯ ವಿವರಗಳು, ಔಷಧಿಗಳು, ಪಾಲಿಸಬೇಕಾದ ಜೀವನರೀತಿ; ಡಾಕ್ಟರ್ ಹೇಳುವುದನ್ನೆಲ್ಲ ನಿಶ್ಶಬ್ದನಾಗಿ ಆತ ಕೇಳುತ್ತ ಕುಳಿತ.

ಡಾಕ್ಟರರು ಹೇಳಿದ್ದನ್ನೆಲ್ಲ ಕೇಳಿಕೊಂಡ ನಂತರ,

"ಯಾವುದಾದರೂ ಒಂದು ಹಿಲ್‌ಸ್ಟೇಷನ್ನಿನಲ್ಲಿ ಎರಡು ಮೂರು ದಿನ ವಾಸಿಸುವುದರಿಂದ ತೊಂದರೆಯಿದೆಯೇ?" ಎಂದು ಕೇಳಿದ.

"ಮನಸ್ಸಿಗೆ ಹಿತ ಎನಿಸುವುದಾದರೆ ಹೋಗಿ, ಅಸ್ವಸ್ಥತೆಯುಂಟಾದರೆ ಸೇವಿಸಲು ಔಷಧಿ ಮಾತ್ರ ಸದಾ ಜೇಬಿನಲ್ಲಿರಬೇಕು...."

ಪುನಃ ಚಳಿಯು ಆತನನ್ನು ಆಲಂಗಿಸಿತು. ಎಷ್ಟೋ ಇಷ್ಟಪಡುತ್ತಿದ್ದ ಚಳಿ ದುಸ್ಸಹನೀಯವೆನಿಸಿತು.

ಹೊಟೇಲಿನ ಬಾಹ್ಯರೂಪ ಬದಲಾಗಿದೆ. ಅದೇ ಕೋಣೆ. ಅದನ್ನು ಸಿಂಗರಿಸಲಾಗಿದೆ. ಆತನಿಗೆ ಸಂಕಟವೆನಿಸಿತು. ಬ್ಯಾಗ್ ತೆರೆದ. ಡಾಕ್ಟರ್ ಅನುಮತಿಸಿದ ಅಳತೆಯನ್ನು ತಪ್ಪದಂತೆ ಶ್ರದ್ಧೆಯಿಂದ ಗ್ಲಾಸ್‌ಗೆ ಸುರಿದ. ಕುಡಿಯುವಾಗ ನೆನೆದ. ಹಿಂದೆ ಚಳಿಯನ್ನು ತಡೆಯಲೋಸುಗ ಸಂತಸದಿಂದ ಕುಡಿಯುತ್ತಿದ್ದ. ಇಂದು? ತನ್ನ ಕಾಯಿಲೆಗೆ ಎದುರಾಗಿ ಒಂದು ಧೂಮಪಟಲಕ್ಕಾಗಿ....

ಕೆಳಗೆ ಸತ್ಕಾರ ವಿಭಾಗದಲ್ಲಿ ಹೋಗಿ ಕುಳಿತ. ಗೈಡನ್ನು ನೋಡಲು ಸಾಧ್ಯವಾದರೆ?

ಬೇಲಳಿಗಾಗಿ ಸುದೀರ್ಘವಾಗಿ ಕಾಯಬೇಕಾಗಬಹುದು. ಮದುವೆಯಾಯಿತೆ? ಒಂದು ವೇಳೆ ತಾಯಿಯಾಗಿರಬಹುದೇ? ಆದರೂ ಕೊನೆಯದಾಗಿ ಒಮ್ಮೆ ಅವಳನ್ನು ನೋಡಬೇಕು. ಅವಳನ್ನು ಮಾತ್ರವಲ್ಲ, ಅವಳ Home, sweet home ಅನ್ನು ಕೂಡ. ನಂತರ ಅಗಲುವಾಗ ಅವಳಿಗೆ, ಎಂದೆಂದೂ ತನ್ನನ್ನು ಜ್ಞಾಪಕಕ್ಕೆ ತರುವ ಒಂದು ಕಾಣಿಕೆಯನ್ನು ಕೊಡಬೇಕು. ನಂತರ ಚಿರಂತನವಾಗಿ ವಿದಾಯ ಹೇಳುವುದು.

ರಿಸೆಪ್ಷನ್ ಹಾಲ್‌ಗೆ ಒಬ್ಬ ಯುವಕ

ಮತ್ತು ಯುವತಿ ಬಂದರು. ಅವಳ ಕಣ್ಣುಗಳಲ್ಲಿ ಗಾಬರಿಯೂ ಭಯವೂ ಅಡಗಿತ್ತು. ಆಗ ಅವರ ಹಿಂದೆ ಬಂದ ವ್ಯಕ್ತಿಯನ್ನಾತ ಗಮನಿಸಿದ. ಗೈಡ್! ಗೈಡ್ ರಿಸೆಪ್ಷನಿಸ್ಟ್‌ಅನ್ನು ಮಾತನಾಡಿಸಿದ.. ಕೋಣೆ ಸಿಕ್ಕ ಆಹ್ಲಾದದೊಂದಿಗೆ ಅವರು ಅತಿವೇಗದಲ್ಲಿ ಮೇಲಕ್ಕೆ ಹೋದರು. ಕೋಣೆಯ ಬಾಗಿಲನ್ನು ಮುಚ್ಚಿದ ಮೇಲೆ ಯಾವುದೋ. ಸ್ವರ್ಗವನ್ನು ತಲುಪಿದ ಹಾಗೆ ಅವರು ಆಹ್ಲಾದ ಹೊಂದುವರು ಎಂದಾತ ಯೋಚಿಸಿದ.

ಆತ ಎದ್ದು ಗೈಡ್‌ನ ಬಳಿಗೆ ಹೋದ.

ಯಾವ ಪರಿಚಯವೂ ಇಲ್ಲದೆ, ಮೊದಲ ಬಾರಿ ಕಂಡವನ ಹಾಗೆ ಗೈಡ್ ಹೇಳತೊಡಗಿದ:

"ಸಾರ್, ಗೈಡ್."

"ನನ್ನ ಜ್ಞಾಪಕವಿಲ್ಲವೇ?"

ಗೈಡ್ ಕೆಲವು ನಿಮಿಷಕಾಲ ಆತನನ್ನು ಗಮನವಿರಿಸಿ ನೋಡಿದ. ನಂತರ ಹೇಳಿದ:

"Forgive me sir, you have changed a lot. ಆದರೆ ಧ್ವನಿ ಈಗಲೂ ನೆನಪಿದೆ."

"ಪರವಾಗಿಲ್ಲ."

"ಕೋಣೆ ಸಿಗಲಿಲ್ಲವೇ?"

"ಸಿಕ್ಕಿತು. ಬನ್ನಿ."

ಮೇಲೆ ಸಾಗುವ ಮೆಟ್ಟಿಲುಗಳನ್ನು ಆಯಾಸದಿಂದ ಹತ್ತುವುದನ್ನು ಕಂಡು ಕೇಳಿದ ಗೈಡ್,

"ಸಾರ್, ಹುಷಾರಿಲ್ಲವೇ?"

"ಉಂ..."

ಕೋಣೆಯಲ್ಲಿ ಬಸವಳಿದು ಕುಳಿತು ಆತ ಕೇಳಿದ:

"ಇಸಬೆಲ್ಲಾ?"

ತಕ್ಷಣ ಗೈಡ್‌ನ ಮುಖ ಮ್ಲಾನವಾಯಿತು.

"ಹುಷಾರಿಲ್ಲ ಎಂದು ಕೇಳಿದೆ."

"ಏನು ಕಾಯಿಲೆ?"

ಅದಕ್ಕೆ ಉತ್ತರ ಹೇಳದೇ ಗೈಡ್ ಕೇಳಿದ:

"ಸಾರ್, ಯಾವತ್ತು ಹಿಂದಿರುಗುವಿರಿ?"

"ಇಸಬೆಲ್ಲಾಳನ್ನು ನೋಡಿದ ಬಳಿಕ. ಹುಷಾರಿಲ್ಲದಿದ್ದರೂ ನಾನೊಮ್ಮೆ ಕಾಣಬೇಕು. ಅಲ್ಲಿ ಮನೆಗೆ ಹೋಗಿ ಕಂಡರೂ ಸಾಕು."

"ನಾನು ಹೋಗಿ ಹೇಳುತ್ತೇನೆ, ಇಲ್ಲಿಗೆ ಬರಲು."

ಆತ ಬ್ಯಾಗ್‌ನಿಂದ ಒಂದು ಲೀಟರ್‌ನ ಬಾಟಲಿ ತೆಗೆದು ಕೊಟ್ಟ.

"ಇದನ್ನು ತೆಗೆದುಕೊಂಡು ಹೋಗಿ. ಅನುಕೂಲದಂತೆ ಕುಡಿಯಿರಿ. Drink to my health."

"Thank you, sir."

ದಣಿವು ತಾಳಲಾಗದೆ ಆತ ಮಲಗಿದ.

"ನಿದ್ರೆಯೇ?"

ಅವಳು ಕೇಳಿದಳು. ಆತ ಕಣ್ಣು ತೆರೆದು ನೋಡಿದ. ಬೇಲ ಪಕ್ಕದಲ್ಲಿ ಕುಳಿತಿದ್ದಾಳೆ!

"ನನ್ನನ್ನೇ ಹುಡುಕಿದಿರಿ ಅಲ್ಲವೇ? ಈಗಲಾದರೂ ಬಂದಿರಲ್ಲ?"

ಮುನಿಸು ತುಂಬಿದ ದನಿ.

"ಬರದಿರಲು ಸಾಧ್ಯವಾಗಲಿಲ್ಲ. ನಿನಗೆ ಹುಷಾರಿಲ್ಲವೇ? ನೀನು ಬಹಳ ಇಳಿದು ಹೋಗಿರುವೆಯಲ್ಲ?"

"ಹೀಗೇನು? ನಾನು ಸ್ವಲ್ಪ ಹೊತ್ತು ಮಲಗಲೇ?"

"ಅಷ್ಟೂ ಬೇಕೇ?"

ಬಾಡಿದ ಹೂವಿನ ಹಾಗೆ ಹತ್ತಿರ ಮಲಗಿ, ಆತನ ಕೆನ್ನೆಗಳನ್ನು ನೇವರಿಸಿದಳು. ನೇವರಿಸುವಾಗ ಕೈ ನಡುಗುವುದನ್ನಾತ ಗಮನಿಸಿದ. ಆತ ಕೈಯನ್ನು ಕೆನ್ನೆಗೆ ಒತ್ತಿ ಹಿಡಿದ.

"ಬೇಲಾ, ಏನಾಗಿದೆ ನಿನಗೆ?"

ತಕ್ಷಣ ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು..

ಕಣ್ಣೀರನ್ನೊರೆಸುತ್ತ ಅವಳು ಎದ್ದು ಕುಳಿತಳು.

"ನನಗೆ ಸ್ವಲ್ಪ ಕುಡಿಯಲು ಕೊಡು

ತ್ತೀರಾ?"

"ಬೇಲಾ, ಇದನ್ನು ನಾನು ಕೇಳಬೇಕಾಯಿತಲ್ಲ?"

"Please"

"ಇಲ್ಲ, ಇನ್ನು ಯಾವಾಗಲಾದರೂ, ನನಗೆ ಹಸಿವಾಗುತ್ತಿದೆ."

"ನಾನು ಕೆಳಗೆ ಹೋಗಿ ಊಟ ಹೇಳುತ್ತೇನೆ."

"ಬೇಡ. ನನ್ನ ಹತ್ತಿರ ಮಲಗು. ನಾನು ಕರೆದು ಹೇಳುತ್ತೇನೆ."

"ಊಟ ಬರುವುದು ತಡವಾಗುತ್ತದೆ. ನಾನು ಕೆಳಗೆ ಹೋಗಿ ಹೇಳುತ್ತೇನೆ."

ಅವಳು ಓಡಿ ಹೋದಳು. ಮರಳಿ ಬರುವಾಗ ಹೆಚ್ಚು ಲವಲವಿಕೆಯಿಂದಿದ್ದಳು.

"ಕುಡಿಯುವುದಕ್ಕೆ ತಾನೇ ಹೋಗಿದ್ದು? ನಾನು ಇನ್ನೂ ಕೆಲವು ದಿನ ಇಲ್ಲಿರುತ್ತೇನೆ. ನೀನು ಕುಡಿಯದೆ ಇರುವುದಾದರೆ.... I can save you."

"Why should you? I am only a guide. Why bother about my life?"

"ಇಲ್ಲ, ನಾನೇ ತಪ್ಪು ಮಾಡಿದವನು. ನಾನೇ ಮೊದಲು ಕುಡಿಯಲು ಒತ್ತಾಯಿಸಿದವನು."

"ಹೌದು. ಇಲ್ಲದಿದ್ದರೆ ಬೇರೆ ಯಾರಾದರೂ. ಅದೂ ಅಲ್ಲದಿದ್ದರೆ ನನ್ನ ಸ್ವಂತ ಇಷ್ಟದಂತೆ. Does it make any difference?"

ಉತ್ತರ ಹೇಳಲಾಗದೆ ಆತ ಕೆಳಗೆ ಕಾರ್ಪೆಟ್ಟನ್ನು ನೋಡುತ್ತ ಯೋಚಿಸಿದ.

ಮೊದಲ ಸಲ ಬಂದಾಗ, ಈ ಕಾರ್ಪೆಟ್‌ನ ಚಿತ್ರಗಳು ಮತ್ತು ಬಣ್ಣಗಳು ಎಷ್ಟು ಮನೋಹರವಾಗಿ ಕಂಡಿದ್ದವು! ಅವೆಲ್ಲ ಕ್ರಮೇಣ ಸಂಕೀರ್ಣವಾದವು. ನಂತರ ಭೀಕರತೆ ಹುಟ್ಟಿಸುವ ಬಣ್ಣಗಳಾಗಿ, ಗೆರೆಗಳಾಗಿ ಬದಲಾದವು.

ಇಲ್ಲಿ ದೇಗುಲಗಳನ್ನರಸಿ ಬಂದ. ಮುಕ್ತಿ ಲಭಿಸುವುದು ಎಂದುಕೊಂಡ. ಈಗ ಅದೇ ದೇಗುಲಗಳ ಬಳಸುದಾರಿಗಳಲ್ಲಿ ಸಿಲುಕಿ ದಾರಿಗಾಣದೆ ತೊಳಲುತ್ತಿದ್ದಾನೆ. ನಂತರ? ಮುಕ್ತಿ ಲಭಿಸೀತೆ? ಮೋಕ್ಷ ಎಷ್ಟು ದೂರ? ಓರ್ವ ಬಡಪಾಯಿ ಹುಡುಗಿ. ಅವಳ ಬಾಳು ಹಾಳಾಗುತ್ತಲೇ ಇದೆ. ಅಲ್ಲದೆ ಬೇರೇನೂ ಸಾಧಿಸಲಿಲ್ಲ.

ಅವಳು ಕೇಳಿದಳು:

"ಏನು ಯೋಚಿಸುತ್ತಿದ್ದೀರಿ?"

"ಏನು ಯೋಚಿಸಬೇಕೆಂದು ಹೇಳಿಕೊಡು ಬೇಲಾ."

"ಹೇಳುತ್ತೇನೆ. ನನ್ನನ್ನು ಯಾರೂ ರಕ್ಷಿಸಲಾರರು. ಆದುದರಿಂದ ನನ್ನನ್ನು ಮರೆತುಬಿಡಿ. ಅಂದು ನನ್ನನ್ನು ಕುಡಿಯಲು ಒತ್ತಾಯಿಸಿದಿರಿ. ಅಂದು ನಾನು ಹೇಳಿದ್ದನ್ನು ತಾನೇ ಈಗ ಯೋಚಿಸುತ್ತಿರುವಿರಿ?

"ಬಾಳಿನಲ್ಲಿ, ಮೊದಲ ಸಲ ನಾನು ಈ ಪಾಪವನ್ನು ಮಾಡುತ್ತಿದ್ದೇನೆ.... For your health. ಆದರೆ ಅದೇನೂ ಪಾಪವಲ್ಲ."

"ಮತ್ತೆ ಯಾವುದು ಪಾಪ?"

"ಸೃಷ್ಟಿಕರ್ತನಿಗೇ ಗೊತ್ತು. ನನಗೊಂದು ಸಿಗರೇಟ್ ಕೊಡುತ್ತೀರಾ?"

"ನಾನೀಗ ಸಿಗರೇಟ್ ಸೇದುವುದಿಲ್ಲ. ಡಾಕ್ಟರ್ ನಿಷೇಧಿಸಿದ್ದಾರೆ. ನೀನು ಸಿಗರೇಟ್ ಅನ್ನೂ ಸೇದುತ್ತೀಯಾ?"

"ಯಾಕೆ ನಾನು ಕುಡಿಯುತ್ತೇನೆ ಎಂದು ಕೇಳಬಾರದೇ?"

"ಬೇಲಾ, ನಾಳೆ ನಿನ್ನ ಮನೆಗೆ ಹೋಗೋಣ."

"ನನ್ನ ಮನೆಗೆ?"

ಅವಳು ಗಹಗಹಿಸಿ ನಕ್ಕಳು.

"ಸಾಕು ನಿಲ್ಲಿಸು."

ನಗುವುದನ್ನು ನಿಲ್ಲಿಸಿ, ಹಾಸಿಗೆಯಲ್ಲಿ ಬೋರಲಾಗಿ ಮಲಗಿದಳು. ಮೊಣಕೈಗಳನ್ನೂರಿ ತಲೆಯೆತ್ತಿ ನೋಡಿದಳು ನಿಶ್ಶಬ್ದಳಾಗಿ, ಸ್ಫಿಂಕ್ಸ್ ತರಹ.

"ನಿನ್ನ ಮನೆಗೆ ನಾನು ಬರಕೂಡದೇ?"

ಆಗಲೂ ಅದೇ ನೋಟ.

"ನಿನ್ನ ಅನುಮತಿ ಬೇಕಿಲ್ಲ. ಮೊದಲ ಬಾರಿ ನಿನ್ನನ್ನು ಕಂಡ ಜಾಗ ಈಗಲೂ ನೆನಪಿದೆ. ದಾರಿ ನನಗೆ ಗೊತ್ತು. ನಾನೊಬ್ಬನೇ ಹೋಗುತ್ತೇನೆ. ಏನು ಹೇಳುತ್ತೀಯ?"

ಯಾವ ಉತ್ತರವನ್ನೂ ಹೇಳದೆ ಆತನನ್ನು ನೋಡಿದಳು. ಆಗ ಸಿಟ್ಟು ಆತನನ್ನು ಕಬಳಿಸಿತು. ಅವಳ ತಲೆಗೂದಲನ್ನು ಬಿಗಿಯಾಗಿ ಹಿಡಿದು ಆತ ಕೇಳಿದ:

"ಉತ್ತರ ಹೇಳುವುದಿಲ್ಲವೇ?"

ಆಗಲೂ ಅವಳು ನಿಶ್ಶಬ್ದಳಾಗಿ ಆತನನ್ನು ನೋಡಿದಳು.

ಆತ ಹಿಡಿತವನ್ನು ಬಿಗಿಗೊಳಿಸಿದ.

"Answer my question or I will squeeze the brain from your skull."

ತಲೆಗೂದಲುಗಳನ್ನು ಸುತ್ತಿ ಬಿಗಿದು ಒತ್ತಿಕೊಂಡ ಬೆರಳುಗಳಲ್ಲಿ ಜಿನುಗಿದ ರಕ್ತವು ಮಾತ್ರ ಉತ್ತರವಾಯಿತು. ಹಿಡಿತ ಸಡಿಲಿಸಿ ಆತ ಹೇಳಿದ:

"Bela, forgive me."

ಅವಳ ಕಣ್ಣುಗಳಲ್ಲಿ ನೀರು ತುಂಬಿ ಹರಿಯಿತು. ಅವಳು ಎದ್ದು ಆತನೆದುರು ನಿಂತಳು.

"ನನ್ನ ಮನೆಗೆ ಬರಬೇಡಿ. ಎಂದಿಗೂ ಬರಕೂಡದು. Why don't you go to hell, rather?"

"ತಮಾಷೆ ಮಾಡುತ್ತಿರುವೆಯಾ?"

"ಇಲ್ಲ."

"ಮತ್ತೆ?"

"ನನ್ನ ಏಕ ಮಾತ್ರ ಸಹೋದರ. A monstrous creation. He is so huge. Mentally retarded... ಬುದ್ಧಿ ಬೆಳೆದಿಲ್ಲ. ಹದಿನೇಳು ವಯಸ್ಸು. ಇನ್ನು ಎಂದಿಗೆ ಬುದ್ಧಿ ಬರುತ್ತದೆ? ಸರಿಯಾಗಿ ಬಟ್ಟೆ ಉಡಲೂ ಗೊತ್ತಿಲ್ಲ! ಅದೆಲ್ಲ ನಾನೇ ಮಾಡಿಕೊಡಬೇಕು. ತಾಯಿಯಿಲ್ಲವೆ? ಎಂದು ಕೇಳಿ ಪ್ರಯೋಜನವಿಲ್ಲ, ಇದ್ದಾಳೆ. ತಾಯಿಯಿದ್ದಾಳೆ..... ಡ್ಯಾಡಿ ಸತ್ತ ನಂತರ, ಕುಡಿದೂ ಕುಡಿದೂ ಆಲ್ಕೋಹಾಲಿಕ್ ಆದ ತಾಯಿಯಿದ್ದಾಳೆ..... ಕುಡಿ



ಯಲು ನಾನು ಹಣ ಕೊಡುತ್ತೇನೆ. ತಪ್ಪು ಎಂದು ಗೊತ್ತು. ಮತ್ತೇನು ಮಾಡುವುದು? ಸದಾ ಜೋಪಾನವಾಗಿರಿಸಲು ನಾನು ಬಯಸಿದ ಆ ಟೇಪ್‌ರೆಕಾರ್ಡರ್; ಸಾಧ್ಯವಾಗಲಿಲ್ಲ. ಅದನ್ನು ಮಾರಬೇಕಾಯಿತು. ಕ್ಷಮಿಸಿ.... ಕೆಲವು ಸಲ ರಾತ್ರಿ ನನ್ನ ಹಾಸಿಗೆಯ ಬಳಿ ಅವನು ಬರುತ್ತಾನೆ. ನಾನು ಸಹೋದರಿ ಎಂಬುದನ್ನೂ ತಿಳಿಯದೆ. ನಾನು ಏನು ಮಾಡಬೇಕು ಹೇಳಿ?

Those horrible nights. I run for my life. Out in to the cold nights.... to save my self.... you can never imagine cold nights....rain or snow.... How much more I should suffer from this bloody world.... And they say, a God created this blessed world. Nuts, nuts and not even nuts...."

ಆತ ನಿಶ್ಶಬ್ದನಾಗಿದ್ದ. ಇನ್ನು ಅವಳು ಏನೂ ಹೇಳದಿರಲಿ ಎಂದು ಮಾತ್ರ ಬಯಸಿದ.... ಬೆಳಿಗ್ಗೆ ಕಾಫಿ ಕೊಡುವಾಗ ಆಕೆಯ ಕೈ ನಡುಗುತ್ತಿತ್ತು. ಕೈಗಳನ್ನು ಹಿಡಿದು ಬಿಗಿಯಾಗಿ, ಎದೆಗೊತ್ತಿಕೊಂಡು ಆತ ಹೇಳಿದ:

"ನನಗಾಗಿ, ಈ ಕುಡಿತವನ್ನು ನಿಲ್ಲಿಸು. Bela, You are burning your last candle."

" True, it burns, It realy burns."

ಗದ್ದಲ ಕಡಿಮೆಯಿರುವ ಹಾದಿಗಳ ಮೂಲಕ ನಡೆಯುವಾಗ ಆತ ಹೇಳಿದ:

"ಇಲ್ಲಿ ಎಲ್ಲಿಯಾದರೂ ಒಂದು ಸಣ್ಣ ಮನೆ..'

"ಖರೀದಿಸುವುದಕ್ಕೇನು?"

"ಹೌದು. ಸೀಜನ್‌ನಲ್ಲಿ ಮನೆಯವರೊಂದಿಗೆ ಬಂದು ಸ್ವಲ್ಪ ದಿವಸ ಇರಬಹುದು. ಇನ್ನು ಒಂಟಿಯಾಗಿ ಬರಲಾಗದು."

"ಇನ್ನು ಬರುವುದು ಮನೆಯವರ ಜೊತೆಗೇನು?"

"ಹೌದು. ಸೀಸನ್‌ನಲ್ಲಿ ಮಾತ್ರ."

"ಉಳಿದ ಕಾಲಗಳಲ್ಲಿ?"

"ಮನೆಯನ್ನು ನೀನು ನೋಡಿಕೊಳ್ಳಬೇಕು. ಅಂಗಳದ ತುಂಬ ಹೂಗಳನ್ನು ಬೆಳೆಸಬೇಕು."

"ಮನೆ ಖರೀದಿಸಬೇಕೆಂದರೆ ಅಂಕಲ್ ಹತ್ತಿರ ಹೇಳಿ."

"ಯಾರು ನಿನ್ನ ಅಂಕಲ್?"

"ಮೊದಲು ಪರಿಚಯವಾದ ಗೈಡ್."

"ಆತ ನಿನ್ನ ಬಂಧುವೇ?"

"ಬಂಧುವೇನೂ ಅಲ್ಲ, ಡ್ಯಾಡಿ ತೀರಿಕೊಂಡ ಹಲವು ದಿನಗಳ ನಂತರ ಒಂದು ದಿನ ಮನೆಗೆ ಬಂದರು. ನನ್ನ ತಾಯಿಯನ್ನು ಮದುವೆಯಾಗುವೆನೆಂದರು. ಒಂದು ವೇಳೆ ಚಿಕ್ಕಂದಿನಲ್ಲಿ ಪ್ರೀತಿಸಿರಬಹುದು. ನನಗೆ ಗೊತ್ತಿಲ್ಲ. ಯಾಕೋ ಮಮ್ಮಿ ಒಪ್ಪಲಿಲ್ಲ. ಅದು ತಪ್ಪೆಂದು ಹೇಳಲೂ ಆಗದು.... May be a devoted wife. ಆದರೂ, ಮನೆಯಲ್ಲಿ ತೊಂದರೆಯುಂಟಾಗುವಾಗ ಸಹಾಯ ಮಾಡುತ್ತಾರೆ, ಯಾವಾಗಲಾದರೂ."

"ನೀನು ಸಂಪಾದಿಸುತ್ತಿಲ್ಲವೇ?"

"ಸೀಜನ್‌ನಲ್ಲಿ. ಅದು ಮುಗಿದರೆ ಮಂಜು ಮತ್ತು ಮಳೆ. ಆಗ ಯಾರೂ ನೆನೆಯುವುದಿಲ್ಲ, ಯಾರೂ ಬರುವುದಿಲ್ಲ, ನಾನು ಯಾರಿಗೂ ಬರುವಂತೆ ಹೇಳಿಯೂ ಇಲ್ಲ, ಮತ್ತೆ ಸೀಜನ್ ಬರಲು ಕಾದಿರುತ್ತೇನೆ...."

ಗೈಡ್ ತೋರಿಸಿದ ಮನೆ ಸಣ್ಣದಾದರೂ ಮೆಚ್ಚುಗೆಯಾಯಿತು. ಮನೆಯಂಗಳದಲ್ಲಿ ಯಾವ ಯಾವ ಗಿಡಗಳನ್ನು ಬೆಳೆಸಬೇಕೆಂದು ಆಲೋಚಿಸುತ್ತ ನಿಂತಿದ್ದಾಗ, ಸ್ವಲ್ಪ ದೂರಕ್ಕೆ ಗೈಡ್ ಬೆರಳು ತೋರಿದ.

"ಅಲ್ಲಿ, ಇಸಬೆಲ್ಲಾಳ ಮನೆ."

ತಕ್ಷಣ ಆತ ಅತ್ತ ನೋಡಿದ.

ಕೆಂಪು ಇಟ್ಟಿಗೆಗಳಿಂದ ನಿರ್ಮಿಸಲಾದ ಗೋಡೆಗಳು. ತಗಡಿನ ಮೇಲ್ಛಾವಣಿ. ಅದರ

ಕೆಳಗೆ? ಏನನ್ನೂ ನೆನೆಯದಿರಲು ಆತ ಕಷ್ಟಪಟ್ಟ....

ಆತ ಖರೀದಿಸಿದ ಮನೆಯ ಬೀಗದ ಕೈಯನ್ನು ಬೆರಳಿಗೆ ಹಾಕಿ ತಿರುಗಿಸುತ್ತಾ, ಮನೆಯ ಅಂಗಳದಲ್ಲಿ ನಿಂತು ಬೇಲ ಹೇಳಿದಳು:

"ಓಹ್, ನನ್ನ ಮನೆ ಎಷ್ಟು ಹತ್ತಿರ! Walkabledistance.ನಾನು ಯಾವಾಗಲೂ ಇಲ್ಲಿಗೆ ಬರುತ್ತೇನೆ. ಈ ಅಂಗಳದ ತುಂಬ ಹೂಗಳನ್ನು ಬೆಳೆಸುತ್ತೇನೆ. ನಿಮಗೆ ಆರ್ಕಿಡ್ಸ್ ಇಷ್ಟ ತಾನೇ?"

"ಹೌದು."

"ಇನ್ನು ಮನೆಯವರೊಂದಿಗೆ ಯಾವ ಹೊತ್ತಿನಲ್ಲಿ ಇಲ್ಲಿ ತಲುಪುವಿರೆಂದು ಮೊದಲೇ ತಿಳಿಸಬೇಕು."

"ಯಾಕೆ?"

"ಒಳ್ಳೇ ಅಡಿಗೆ ಸಿದ್ಧಪಡಿಸುವುದಕ್ಕೆ."

ರೈಲು ಗಾಡಿಯ ಚಕ್ರಗಳು ಹಳಿಗಳನ್ನು ಜ್ಜುತ್ತಾ ನಿಂತಾಗ ಆತ ಎದ್ದು ನಿಂತ. ಗದ್ದಲದುಂಬಿದ ಪ್ಲಾಟ್‌ಫಾರ್ಮ್ ಆತನ ಪಾಲಿಗೆ ಮಾತ್ರ ನಿರ್ಜನವಾಗಿತ್ತು. ತನ್ನ ರೈಲಿನ ಡಬ್ಬಿಗೆ ಹೋಗಿ ಕುಳಿತ. ರೈಲುಗಾಡಿ ಚಲಿಸಿದ ನಂತರ ಓಡಿ ಬರುವ ಅವಳ ಏದುವ ಕೈಗಳಲ್ಲಿ ಕೊಡಲೆಂದು ಸ್ವೆಟರಿನೊಳಗಿಂದ ಉದ್ದನೆಯ ಎನ್‌ವಲಪ್ ತೆಗೆದು ಕೈಯಲ್ಲಿ ಹಿಡಿದುಕೊಂಡ. ನಂತರ ರೈಲು ಗಾಡಿ ದೂರವಾಗುವಾಗ ಎನ್‌ವಲಪ್ ತೆರೆದು ಅವಳು ನೋಡುವಳು. ಆಗ ಅವಳಿಗೆ ಎಷ್ಟು ಸಂತೋಷವಾಗಬಹುದು!

ಅವಳಿಗೆ ಸ್ವಂತವಾದ ಒಂದು ಮನೆಯ ಕಾಗದ ಪತ್ರಗಳು! Home, sweet home.

ಆಗಲೂ ಆತ ಯೋಚಿಸಿದ.

ಅವಳು ಆಸೆಪಟ್ಟ Sweet home? ಅದನ್ನು ಮಾತ್ರ ಕೊಡಲಾಗಲಿಲ್ಲ....

ಹಳಿಗಳ ಮೇಲೆ ಏದುತ್ತಾ ಹೋಗುವ ಚಕ್ರಗಳ ಜೊತೆಯಲ್ಲೇ ಏದುಸಿರು ಹೆಚ್ಚುತ್ತಾ ಹೋಯಿತು.

ಗಾಡಿ ಸ್ವಲ್ಪ ದೂರ ಕ್ರಮಿಸಿತು. ಆಗ, ಹಿಂದೆ ಟೆಲಿಸ್ಕೋಪ್ ಮೂಲಕ ನೋಡಿದ್ದ ಕ್ರೈಸ್ತ ದೇವಾಲಯ. ದೇವಾಲಯದ ಮುಂದೆ ಕೆಲವು ವ್ಯಕ್ತಿಗಳು.

ಅವರ ನಡುವೆ ನೋಡಿದ. ಅವಳಿಗಾಗಿ ಕಣ್ಣು ಹಿಗ್ಗಿಸಿ ನೋಡಿದ. ಅಲ್ಲಿ ಮತ್ತೆ ಜನಕೂಡಿದ್ದರು.

ಹಾಗಾದರೆ ಅಲ್ಲಿ ಮದುವೆಯೇ!

ಆಗ ಬೇಲ ಹೇಳಿದ್ದನ್ನು ನೆನೆದ:

Somebody is married to Heaven!

ಆತ ತಿರುಗಿ ನೋಡಿದ. ರೈಲು ಹಳಿಗಳ ಒಂದು ತಿರುವಿನಲ್ಲಿ, ಅಲ್ಲಿ ಎಲ್ಲವೂ ಮರೆಯಾಗುತ್ತಿವೆ.

ಆ ಪಟ್ಟಣದ ಸನಿಹ, ಒಂದು ಸಣ್ಣ ಮನೆಯ ಕಾಗದಪತ್ರಗಳನ್ನು, ಎದೆಗೊತ್ತಿ ಹಿಡಿದು ಏನೂ ಮಾಡಲಾಗದೆ, ಬಸವಳಿದು ಒರಗಿ ಕುಳಿತು, ಆತ ಪಯಣ ಮುಂದುವರಿಸಿದ.

ಪಾಪ, ಸುಂದರ ಮನೆಯ ಕನಸನ್ನು ಹೊತ್ತ ಬೇಲಾ ಅದಾಗಲೆ 'ಆ ಮೇಲಿನ ಮನೆ'ಗೆ ಹೋಗಿದ್ದಾಳೆಂಬುದು ಅವನಿಗೆ ಹೇಗೆ ತಾನೆ ಗೊತ್ತಾಗಬೇಕು? ●

ಯಾರೂ ತುಳಿಯದ ಹಾದಿಯಲಿ ತವರೂರಿಗೆ ಹೊರಟಿರುವೆನು. ನನ್ನದು ಸಿಡಿಲು ಮಿಂಚುಗಳ ಹಾದಿ.

– ಕುವೆಂಪು ('ಕಿಂಕಿಣಿ'ದಲ್ಲಿ)

ಅನುಭವಿಸಿ ಹೇಳಿದುದೆಲ್ಲ ಸಾಹಿತ್ಯ. ಉಳಿದುದೆಲ್ಲ ವರದಿ.

– ಕುವೆಂಪು ('ತಪೋನಂದನ'ದಲ್ಲಿ)

# ಕರ್ಮವೀರ

ತುಂಬಿದ ಮನೆಗೊಂದು ಚೆಂದದ ಸಾಪ್ತಾಹಿಕ

## ಮನೆ ಬಾಗಿಲಿಗೇ ಕರ್ಮವೀರ












* ಅಂಗಡಿಯಲ್ಲಿ ಸಂಚಿಕೆ ಖಾಲಿ ಆಯ್ತೆಂದು ನಿರಾಶರಾಗಬೇಕಿಲ್ಲ.
* ಮಾರುಕಟ್ಟೆಗೆ ಹೋಗುವ ತಾಪತ್ರಯವಿಲ್ಲ.
* ಮನೆ ಬಾಗಿಲಿಗೇ ನಡೆದು ಬರುತ್ತಾನೆ, ಕರ್ಮವೀರ.

ಒಂದು ಪ್ರತಿಗೆ ರೂ. 5-00

| | ಬಿಡಿಯಾಗಿ ಕೊಂಡರೆ | ಚಂದಾದಾರರಾದರೆ |
|---|---|---|
| ಆರು ತಿಂಗಳಿಗೆ | ರೂ. 130-00 | ರೂ. 125-00 |
| ಒಂದು ವರ್ಷಕ್ಕೆ | ರೂ. 260-00 | ರೂ. 245-00 |

ನೆನಪಿಡಿ: ಅಂಚೆ ವೆಚ್ಚವನ್ನು ನಾವೇ ಭರಿಸುತ್ತೇವೆ ಜೊತೆಗೆ ವರ್ಷಕ್ಕೆ ಹದಿನೈದು ರೂಪಾಯಿ ರಿಯಾಯಿತಿ

ನೀವು ಮಾಡಬೇಕಾದ್ದು ಇಷ್ಟೇ : ಪ್ರಸಾರಾಂಗ ವ್ಯವಸ್ಥಾಪಕರು, ಕರ್ಮವೀರ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-20. ಈ ವಿಳಾಸಕ್ಕೆ ಎಂ.ಓ. ಅಥವಾ ಡಿ.ಡಿ. ಮೂಲಕ ಚಂದಾ ಹಣ ಕಳಿಸಿರಿ. ಮುಂದಿನ ವಾರದಿಂದಲೇ 'ಕರ್ಮವೀರ' ನಿಮ್ಮ ಮನೆಯಲ್ಲಿ ಹಾಜರ್.




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಶಿ<br>ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.
ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at : Bharat Photo Offset Works, Dharwad. Ph: 40545

KASTURI, Kannada Digest Reg No. KRNG - 43, Licence No. L2120 - WPP No. 33 Price - Rs. 6-0



ನುವಾರ, ಸೋಮವಾರ
ಹುಟ್ಟಿದ ಹಬ್ಬ, ಯುಗಾದಿ
ಮದುವೆ, ದೀಪಾವಳಿ.....



ಡ್ರೆಸ್ ಮೆಟೀರಿಯಲ್, ರುಬಿಯಾ
ಸೂಟಿಂಗ್ಸ್, ಶರ್ಟಿಂಗ್ಸ್
ದೋತರಗಳು, ಯುನಿಫಾರಂಗಳು
ಕಾಟನ್, ಪಾಲಿಯೆಸ್ಟರ್‌ಗಳಲ್ಲಿ
ನಿಮ್ಮ ಪರಿವಾರಕ್ಕಾಗಿ,

ದಾವಣಗೆರೆ
ಫ್ಯಾಶನ್ನಿನ ಪ್ರತಿರೂಪ



ದಾವಣಗೆರೆ ಕಾಟನ್ ಮಿಲ್ಸ್
ಪೊ.ಬಾ. ನಂ. 201, ದಾವಣಗೆರೆ - 577 002.
(A division of Morarjee Goculdas Spinning & Weaving Company Ltd., Bombay)

MAP 33 95